12th Century's
Enlightenment Technic
and Revolution

# ಗುರುಕಾಣ್ಕೆ


ಶ್ರೀ ವಿದ್ಯಾನಂದ ಶರಣರು
ಡಬ್ಬೇರುಮಡುವು





ಸಂಪಾದಕರು
ದೇವಾನಂದ ಶರಣರು
ಬಸವರಾಜ ಸ್ವಾಮಿ

# ಗುರುಕನ್ಯೆ

ಪ್ರಭುದೇವರ ಶೂನ್ಯ ಸಂಪಾದನೆ ಮಹಾದೇವಿ ಅಕ್ಕನ ಸಂವಾದ


**ಪರಮಪೂಜ್ಯ ಸದ್ಗುರು ಶ್ರೀ ವಿದ್ಯಾನಂದ ಶರಣರು**
**ಡಬ್ಬೇರುಮಡುವು**

ಸಂಪಾದಕರು
**ದೇವಾನಂದ ಶರಣರು, ಬೆನಕನಹಳ್ಳಿ**
**ಬಸವರಾಜ ಸ್ವಾಮಿ, ರಾಯಚೂರು**



ಪ್ರಕಾಶಕರು
**ಶ್ರೀ ಬಸವ ಸೇವಾ ಪ್ರತಿಷ್ಠಾನ**
ಬಸವ ನಗರ, ಬಾಲಂಕು ಆಸ್ಪತ್ರೆ ಪಕ್ಕದಲ್ಲಿ, ಗಂಜ್ ರಸ್ತೆ, ರಾಯಚೂರು-584102
ಕರ್ನಾಟಕ

GURUKANYE
A discussion of Akkamahadevi and
Allama Prabhu (Shoonya Samapadane)

Authour : Paramapoojya Vidyananda Sharanaru
Dabberamadu, Tq.Lingasugur Dt.Raichur

Editors : Devananda Sharanaru
Basavaraj Swamy

**ಗುರುಕನ್ಯೆ**
ಮಹಾದೇವಿ ಅಕ್ಕನ ಸಂವಾದ (ಶೂನ್ಯ ಸಂಪಾದನೆ)

ಲೇಖಕರು : ಪರಮಪೂಜ್ಯ ವಿದ್ಯಾನಂದ ಶರಣರು, ಡಬ್ಬೇರುಮಡುವು

ಸಂಪಾದಕರು : ದೇವಾನಂದ ಶರಣರು
ಬಸವರಾಜ ಸ್ವಾಮಿ

ಕಾಗದ ಬಳಕೆ : Demy 1/8 size 70 GSM N.S. Maplitho
ಮುದ್ರಣ : 2017
ಪ್ರತಿಗಳು : 1000


**ಬೆಲೆ : ರೂ.80 /-**

ಮುಖಪುಟ : ಮುರಳೀಧರ ವಿ. ರಾಠೋಡ, ಬೆಂಗಳೂರು

ಮುದ್ರಕರು : ಶುಭೋದಯ ಪ್ರಿಂಟರ್ಸ್, ಬೆಂಗಳೂರು

ಪ್ರಕಾಶಕರು :
**ಶ್ರೀ ಬಸವ ಸೇವಾ ಪ್ರತಿಷ್ಠಾನ**
ಬಸವ ನಗರ, ಬಾಲಂಕು ಆಸ್ಪತ್ರೆ ಪಕ್ಕದಲ್ಲಿ, ಗಂಜ್ ರಸ್ತೆ,
ರಾಯಚೂರು-584102
ಕರ್ನಾಟಕ

# .......ಓದುವ ಮುನ್ನ

ಡಬ್ಬೇರುಮಡುವು ಗ್ರಾಮದ ಪರಮಪೂಜ್ಯ ಸದ್ಗುರು ವಿದ್ಯಾನಂದ ಶರಣರು ಪ್ರಭುದೇವರ ''ಶೂನ್ಯ ಸಂಪಾದನೆ''ಯ ಮಹಾದೇವಿ ಅಕ್ಕನ ಸಂವಾದದ ತೊಂಬತ್ತು ವಚನಗಳನ್ನು ತೆಗೆದುಕೊಂಡು ತಾತ್ಪರ್ಯ ಬರೆದಿದ್ದಾರೆ. ಈ ಗ್ರಂಥಕ್ಕೆ **ಗುರುಕನ್ಯೆ** ಎಂದು ನಾಮಕರಣ ಮಾಡಿದ್ದಾರೆ.

ಸ್ವರೂಪ ಜ್ಞಾನಕ್ಕಾಗಿ ಹಂಬಲಿಸಿದ ಓದುಗರಿಗೆ ಇದೊಂದು ಪುಸ್ತಕ ಸಾಕು. ಇದರಲ್ಲಿಯ ಒಂದು ವಚನದ ತಾತ್ಪರ್ಯ ಸಾಕು. ಆ ಓದುಗನ ಬಯಕೆ ಉತ್ಕಟ ಇಚ್ಛೆಯಿಂದ ಕೂಡಿದ್ದರೆ, ಕಾಲಕೂಡಿ ತನುಮಾಗಿ ಜ್ಞಾನದ ಬಯಕೆ ಉತ್ಕಟವಾಗಿದ್ದ್ರೆ ಸಾಕು ಆ ಓದುಗನಿಗೆ Enlightenment ಆಗುವುದರಲ್ಲಿ ಸಂಶಯವೇ ಇಲ್ಲ.

ಸದ್ಗುರುಗಳು ವಚನಗಳಿಗೆ ವ್ಯಾಖ್ಯಾನಿಸುವ ಈ ಸಂದರ್ಭದಲ್ಲಿ ಶರಣರ ಕಾಯದಲ್ಲಿ ಹೊಕ್ಕು ಅವರೇ ಇವರಾಗಿ ಬರೆದಂತಿದೆ. ಈ ಪುಸ್ತಕಕ್ಕೆ ಕೊಟ್ಟ ''ಗುರುಕನ್ಯೆ'' ಎಂಬ ಚಮತ್ಕಾರದ ಹೆಸರು ಸಾಧಕರನ್ನು ಬೆರಗುಗೊಳಿಸುವಂತಿದೆ.

**ಗುರುಕನ್ಯೆ**ಯೆಂದರೆ ಅಕ್ಕಮಹಾದೇವಿ. ಗುರುವಿಗಾಗಿ ಕಾಯ್ದುಕುಳಿತ ಸಕಲ ಓದುಗರೂ ಆಗುತ್ತಾರೆ. ಓದಲು ಬರೆಯಲು ಬಾರದೆ ಇದ್ದವರು. ಅಷ್ಟೇ ಏಕೆ ಈ ಜಗದ ಸಕಲ ದೇಹಗಳು ಕೂಡಾ **ಗುರು ಕನ್ಯೆ**ಯೇ ಆಗಿವೆ.

ಪ್ರತಿ ದೇಹದಲ್ಲಿಯೂ ಅರಿವಿದೆ. ಆ ಅರಿವೆಂಬ ಗುರುದೇವನೂ ಇದ್ದಾನೆ. ಹಾಗೆಯೇ ಪ್ರತಿ ದೇಹದಲ್ಲಿಯೂ ಮನವಿದೆ. ಮನ ದೇಹವನ್ನು ಆವರಿಸಿದೆ.

ಅರಿವೇ ಗುರು; ಮನವೇ ಕನ್ಯೆ. ಒಂದಕ್ಕೊಂದು ಸಂಬಂಧವಿಲ್ಲದಂತೆ ತನುವಿನಲ್ಲಿಯೇ ಸಂಗಮಗೊಂಡಿವೆ.

ಇಡೀ ದೇಹವನ್ನು ತನ್ನಿಚ್ಛೆಯಂತೆ ಮುಗ್ಗಲು ಮಾಡಿ ಬಾಧೆ ಗೀಡು ಮಾಡುವ ಮನಕ್ಕೆ ಅರಿವೆಂಬ ಗುರುದೇವನ ಬಯಕೆಯಾದರೆ ಸಾಕು **ಗುರುಕನ್ಯೆ**ಯಾಗುತ್ತಾಳೆ. ಅರಿವೆಂಬ ಗುರುದೇವನನ್ನು ವರಿಸಿ **ಗುರುಕನ್ಯೆ**ಯಾಗುತ್ತಾಳೆ. ಇಂತಹ ಅಪರೂಪದ ರಹಸ್ಯಮಯವಾದ ಗುಟ್ಟು ಓದುಗನಿಗೆ ತಿಳಿದರೆ ಸಾಕು; ಓದುಗನ ಮನ ಕನ್ಯೆಯಾಗಿ ಗುರುದೇವನ ಬೆನ್ನು ಬೀಳುತ್ತದೆ. ಅರಿವಿನ ಬಯಕೆಯಾಗಿ ಆ ಗುರುದೇವನನ್ನು ತೋರಿಸುವ ಗುರುವನ್ನು ಹುಡುಕುತ್ತಾ ಅಲೆಮಾರಿಯಾಗಿ ಅಲೆದಾಡುತ್ತದೆ. ಅರಿವೆಂಬ ಗುರುದೇವನನ್ನು ತನುವಿನಲ್ಲಿಯೇ ದರ್ಶನ ಮಾಡಿಸುವ ಗುರುದೇವ ಸಿಕ್ಕರೆ ಸಾಕು ಮನ ಆ ಗುರುವಿಗೆ ಕನ್ಯೆಯಾಗಿ ಕುಣಿಕುಣಿದಾಡುತ್ತದೆ. ನಲಿನಲಿದಾಡುತ್ತದೆ.

ಪರಮ ಪೂಜ್ಯ ಸದ್ಗುರು ವಿದ್ಯಾನಂದ ಶರಣರು ತೊಂಬತ್ತು ವಚನಗಳಿಗೆ ತಾತ್ಪರ್ಯ ಬರೆಯುವ ಮೂಲಕ ಓದುಗರಿಗೆ ಗುರುವಿನ ದರ್ಶನ ಮಾಡಿಸುತ್ತಾರೆ. ಓದುಗ ಈ ಗ್ರಂಥವನ್ನು ಸಮಾಧಾನದಿಂದ ಆಸಕ್ತಿಯಿಂದ ಓದಿದರೆ ಆ ಓದುಗನೇ ಕನ್ಯೆಯಾಗಿ ತನ್ನಂತರಂಗದಲ್ಲಿಯೇ ಗುರುದೇವನನ್ನು ಹುಡುಕಲು ಸಿದ್ಧನಾಗುತ್ತಾನೆ.

ಈ ಗ್ರಂಥವನ್ನು ಓದುವ ಪ್ರತಿ ಓದುಗನೂ ಸ್ವರೂಪ ಜ್ಞಾನಿಯಾಗಲಿ ಎನ್ನುವ ಸದುದ್ದೇಶವನ್ನು ಹೊಂದಿ ಗ್ರಂಥ ದಾಸೋಹಕ್ಕೆ ಮುಂದಾದ ಹೊನ್ನಳ್ಳಿಯ ಶತಾಯುಷಿ ಲಿಂಗೈಕ್ಯ ಶರಣೆ ಬಸಮ್ಮ ಗೂಳಪ್ಪ ಪೇರಿ(ಗುಗ್ಗರಿ), ಶರಣ ದಂಪತಿಗಳಾದ ಶರಣೆ ಶ್ರೀ ಶ್ರೀದೇವಿ, ಶರಣ ಶ್ರೀ ವಿರುಪಾಕ್ಷಪ್ಪ ಶೆಟ್ಟರ್ ಅವರಿಗೆ ಶರಣಾರ್ಥಿಗಳು.

ಇವರ ಚಿರಂಜೀವಿಗಳಾದ ಪರಮಪೂಜ್ಯ ವಿದ್ಯಾನಂದ ಶರಣರ ಶಿಷ್ಯರಾದ ಶರಣಶ್ರೀ ಗೂಳಣ್ಣ ಶೆಟ್ಟರು(ಶೆಟ್ರಪ್ಪಾಜಿ) ಅವರಿಗೂ ಶರಣಾರ್ಥಿಗಳು.

**ಬಸವರಾಜ ಸ್ವಾಮಿ**
**ಸಂಪಾದಕ**

ಗ್ರಂಥಕರ್ತರು



ಪರಮಪೂಜ್ಯ ಸದ್ಗುರು ಶ್ರೀ ವಿದ್ಯಾನಂದ ಶರಣರು
ಡಬ್ಬೇರುಮಡುವು
ತಾ.ಲಿಂಗಸುಗೂರು ಜಿ.ರಾಯಚೂರು

## ಗ್ರಂಥ ದಾಸೋಹಿಗಳು



**ಶತಾಯುಷಿ ಲಿಂ|| ಶರಣೆ ಬಸಮ್ಮ ಗೂಳಪ್ಪಪೇರಿ (ಗುಗ್ಗರಿ)**

ಸಾ|| ಹೊನ್ನಳ್ಳಿ ತಾ|| ಲಿಂಗಸುಗೂರು ಜಿ|| ರಾಯಚೂರು



**ಶ್ರೀಮತಿ ಶರಣೆ ದೇವಮ್ಮ ಶರಣ ಶ್ರೀ ವಿರುಪಾಕ್ಷಪ್ಪ ಶೆಟ್ಟರ್**

ಸಾ|| ಹೊನ್ನಳ್ಳಿ ತಾ|| ಲಿಂಗಸುಗೂರು ಜಿ|| ರಾಯಚೂರು

ಹೊನ್ನಳ್ಳಿಯ ಶತಾಯುಷಿ ಲಿಂ॥ ಶರಣೆ ಬಸಮ್ಮ ಗೂಳಪ್ಪ ಪೇರಿ (ಗುಗ್ಗುರಿ) ಪತಿ ಶಿವಾಧೀನವಾದ ನಂತರ ತನ್ನ ಮೂರು ಮಕ್ಕಳನ್ನು ಕಷ್ಟದಿಂದ ಬೆಳೆಸಿ ಅವರು ಸನ್ಮಾರ್ಗದಲ್ಲಿಸಾಗುವಂತೆ ಪ್ರೇರೇಪಿಸಿದಳು.

ಹುಬ್ಬಳ್ಳಿಯ ಸಿದ್ಧಾರೂಢ ಮಠದ ಪೂಜ್ಯರಾದ ಶಿವಪುತ್ರಪ್ಪ ಸ್ವಾಮಿಗಳು ರಾಮ ತೀರ್ಥಕ್ಕೆ ಆಗಮಿಸಿದ ಸಂದರ್ಭದಲ್ಲಿ ತಮ್ಮ ಭವಿಷ್ಯದ ಬದುಕು ಬೆಳಕಾಗಲೆಂದು ಪ್ರಾರ್ಥಿಸಿಕೊಂಡು ಪೂಜ್ಯರಿಂದ ದೀಕ್ಷೆ ಹೊಂದಿದಳು. ಬದುಕಿನಲ್ಲಿ ನೆಮ್ಮದಿಯನ್ನು ಪಡೆದಳು, ಮಗಳು ಶ್ರೀದೇವಿಯನ್ನು ಸಾನಬಾಳದ ವಿರುಪಾಕ್ಷಪ್ಪ ಎನ್ನುವವರಿಗೆ ಕೊಟ್ಟು ವಿವಾಹ ಮಾಡಿದಳು.

ವಿರುಪಾಕ್ಷಪ್ಪನವರು ತಮ್ಮ ಅತ್ತೆ ಬಸಮ್ಮನವರಲ್ಲಿ ತಂದೆ-ತಾಯಿಯವರ ಪ್ರೀತಿ ವಾತ್ಸಲ್ಯವನ್ನು ಕಂಡು ಮಗನಂತೆ, ಸೇವೆಗೈದರು.

ಲಿಂ॥ ಶರಣೆ ಬಸಮ್ಮ ಗೂಳಪ್ಪನವರ ಸ್ಮರಣಾರ್ಥ ಡಬ್ಬೇರ ಮಡುವಿನ ಪರಮ ಪೂಜ್ಯ ವಿದ್ಯಾನಂದ ಗುರುಗಳು ರಚಿಸಿದ ಗುರುಕನ್ಯೆ ಗ್ರಂಥ ದಾಸೋಹ ಮಾಡುವುದರ ಮೂಲಕ ಜ್ಞಾನದಾಸೋಹ ಕಾರ್ಯದಲ್ಲಿ ಶರಣೆ ಬಸಮ್ಮನವರ ಮಗಳು ಶರಣೆ ದೇವಮ್ಮ ಅಳಿಯ ಶರಣ ವಿರುಪಾಕ್ಷಪ್ಪ ಶೆಟ್ಟರ್ ಸಾ॥ ಹೊನ್ನಳ್ಳಿ ಇವರು ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಶ್ರೀಗುರುಗಳ ಕೃಪೆಯಿಂದ ಅವರ ಭವಿಷ್ಯ ಉಜ್ವಲವಾಗಲೆಂದು ಹಾರೈಸಲಾಗಿದೆ.

**ಪ್ರಕಾಶಕರು**

ಓಂ, ತತ್, ಸತ್

ಓಂ ಕಲ್ಯಾಣಾದ್ಭುತ ಕರುಣಾಯ ಮಹಾಶಕ್ತಿ ಮಹಾದೇವಿಯಕ್ಕನ ಸಂವಾದೆ
ಗುಹ್ಯಾತಿ ಗುಹ್ಯಜ್ಞಾನ ಪ್ರದಾಯಿನಿ,
ನಿರ್ವಾಣ ನಿಷ್ಪತ್ತಿ ನಿಲುವಿನನುವ ಪ್ರಕಟಾಯ
ಅಪ್ರತಿಮಗಮ್ಯಚಿಂತ್ಯಸ್ವರೂಪ ಸದ್ಗುರುವೆ ನಮಃ

# ಪ್ರಭುದೇವರ ಶೂನ್ಯಸಂಪಾದನೆ
# ಮಹಾದೇವಿಯಕ್ಕನ ಸಂವಾದ

ಪರಮೇಶ್ವರನ ನಿರೂಪದಿಂದ ಒಬ್ಬ ರುದ್ರ ಕನ್ನಿಕೆಯು ನಿರ್ಮಳ ಸುಮತೆಗೆ ಉಡುತಡೆಯ ಮಹಾದೇವಿಯಕ್ಕನೆಂಬ ನಾಮವಂಧರಿಸಿ, ಲಿಂಗಧಾರಣವಾಗಲೊಲ್ಲೆನೆಂದ ಭವಿಯಂ ಸೋಂಕದೆ, ಅಂಗ ಸಂಗಮಂ ತೊರೆದು, ಲಿಂಗದೊಳ ಅವಿರಳಸಂಗಿಯಾಗಿ, ತನ್ನ ದಿವ್ಯರೂಪ ಲಾವಣ್ಯವ ನೆಡೆಗೊಂಡ ಷೋಡಶಪ್ರಾಯದ ಸುಖದ ಸುಗ್ಗಿ. ಶಿವನೊಳು ಪರವಶನೆಯ್ದು, ಸರ್ವಕರಣಂಗಳ ಅರುಹಿಂಗಾಹುತಿಯ ನಿಕ್ಕಿ, ದಿಗಂಬರದುಡುಗೆಯ ನುಟ್ಟು, ತನ್ನ ಕೇಶವೆಂಬಂಬರಮಂ ಮುಸುಕಿಟ್ಟು, ಕರಸ್ಥಲದೊಳಗಿಪ್ಪ ಇಷ್ಟಲಿಂಗದೊಳು ದೃಷ್ಟಿ ನಟ್ಟು , ಮನಮುಟ್ಟಯಿಸಿ, ಭಾವ ಕರಿಗೊಂಡು ಲೋಕಲಜ್ಜಾಭಿಮಾನ ಭಾವಮಂತೊರೆದು, ಭವಸಾಗರಮಂ ದಾಂಟಿ, ಚೆನ್ನಮಲ್ಲಿಕಾರ್ಜುನನ ವಿಕಳಾವಸ್ಥೆಯೋಳ್ ತನ್ನ ಮರೆದು, ಇತರಮಂ ಪರಿದು, ಮಹಾ ವೈರಾಗ್ಯಮಂ ಬೀರುತ್ತ, ಕರುಣ ರಸಮಂ ಹೇರುತ್ತ, ನಿಶ್ಚಲಬುದ್ದಿಯ ನೆಡೆಗೊಂಡು, ಭಕ್ತಿಯ ಭಾಗ್ಯವೆನಿಪ, ಮುಕ್ತಿಯ ತವರುಮನಿ ಎನಿಪ, ಶಿವಭಾವ ಸಂಪನ್ನೆ, ಪ್ರಸಾದದ ಮೇರುವ ತತ್ವ ಶಿಖಾಮಣಿ, ಪುಣ್ಯದ ಪುಂಜೆ, ನೈಷ್ಠಿಯ ಖಣಿ, ಸತ್ಯದ ಸದನ ಶಾಂತಿಯ ನಿಧಿ. ಚಿದಂಬರ ಸಂಯುತೆ, ಸ್ವಾನುಭಾವದ ಸಾಗರ, ನಿತ್ಯದ ನಿವಾಸ.

ಮಹಾದೇವಿಯಕ್ಕಗಳು ಶಿವ ಸುಖಾಳಾಪಂಗೈಯುತ್ತ ಪ್ರತ್ಯಕ್ಷ ಮುಕ್ತ್ಯಂಗನೆಯ ಸುಳುಹು ದಿಟದಿಟವೆನಿಸಿ, ಸಕಲ ಲೋಕಂಗಳಮಾಡುತ್ತ, ಮುಟ್ಟಿದುದು, ಪರುಷ, ಮೆಟ್ಟಿದುದು ಧರೆ ಪಾವನ, ನೋಟ ಪವಿತ್ರ, ನುಡಿದುದೆಲ್ಲ ಶಿವ ತತ್ವ , ನಡೆದುದೆಲ್ಲ ಶಿವಮಾರ್ಗ. ದೇವ ಸಭೆಯಾಗಿ ಸಕಲ ಕ್ಷೇತ್ರಂಗಳ ಪಾವನ ಮಾಡುತ್ತ, ತನ್ನ ಕೆಲಸ ಕಂಡು ಕೈ ಮುಗಿದ ಸಕಲ ಜನಂಗಳೆಲ್ಲರ ಕೃತಾರ್ಥರಂ ಮಾಡುತ್ತ ಬಪ್ಪಾಗಳು. ಇತ್ತ ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವರು ಮುಂತಾದ ಅಸಂಖ್ಯಾತರ ಮಧ್ಯದಲ್ಲಿ ಆ ಬಸವರಾಜದೇವರು ಪ್ರಭುದೇವರೆ ಎನ್ನ ಹೆತ್ತ ತಾಯಿ ಅಕ್ಕಮಹಾದೇವಿಯರು ವಿರಕ್ತಿಯಿಂದ ಕಾಮಾರಿಯಾಗಿ ಬರುತಿರ್ದಳೆಂದು ಬಿನ್ನೈಸಿ, ಆ ಪ್ರಭುದೇವರು ಸಕಲ ಪ್ರಮಥರಿಗೆ ಕಾಮಸಂಹಾರಿ ಎಂಬುದನ್ನು ಪ್ರತ್ಯಕ್ಷ ತೋರಿ, ಭಕ್ತಿ ವಿಸ್ತಾರದಿಂದ ಕಿನ್ನರಯ್ಯಗಳು ಒಪ್ಪಿ ಕಳುಹಲು, ಆ ಪರಮ ಜ್ಞಾನಿ ಕಿನ್ನರಯ್ಯ ಪರೀಕ್ಷಿಸುವ ಪ್ರಸ್ತಾವದ ವಚನ.

**ತಾತ್ಪರ್ಯ :** ಪರಮೇಶ್ವರನ ಅಪ್ಪಣೆಯ ಮೇರೆಗೆ ಒಬ್ಬ ರುದ್ರ ಕನ್ನಿಕಾ ಶಕ್ತಿಯು ಆದಿ ಶಕ್ತಿಯಾದುದರಿಂದ ಇದು ಆದಿಶಕ್ತಿಯೆಂಬೆನೆ? ಅಲ್ಲಾ ಅನಾದಿ ಶಕ್ತಿ ಎಂಬೆನೆ? ಅಲ್ಲ! ಚಿತ್‌ಸ್ವರೂಪವಪ್ಪ ನಿರ್ಮಳ ಚಿಚ್ಛಕ್ತಿಯೆಂಬ ಸುಮತೆಗೆ ಉಡುತಡೆಯ ಮಹಾದೇವಿಯಕ್ಕನೆಂಬ ನಾಮವಧರಿಸಿ ಬಂದವತಾರವೇ ಈ ಘನಶಕ್ತಿ. ಮಾನವರು ಉಟ್ಟಂಥ ಉಡುಗೆಯ ಉಟ್ಟವಳಲ್ಲ , ತೊಡಗೆಯ ತೊಟ್ಟವಳಲ್ಲ, ದೇವತಾ ದೈತ್ಯರ ಮನು ಮುನಿಗಳ ಉಡುಗೆಗಳೂ ಅಲ್ಲ, ತೊಡುಗೆಗಳೂ ಅಲ್ಲ. ಈ ಘನ ಶಕ್ತಿ ಉಟ್ಟ ಉಡುಗರೆಯೆ ಬೇರೆ, ತೊಡುಗೆಗಳೆ ಬೇರೆ. ಮಹಾ ವೈರಾಗ್ಯವೆಂಬ ಚಿತ್ಕಾಯ

ಚಿದಂಬರದುಡುಗೆಯು, ಸಮರತಿ ಸದ್ಭಕ್ತಿ ಸದಾಚಾರವ ತೊಟ್ಟ ತೊಡುಗೆಯು, ಇದು ಭಕ್ತಿಯ ಭಾಗ್ಯದ ತೊಡುಗೆ, ತತ್ವ ತಾತ್ವಿಕ ತಿರುಳಿನ ತೊಡುಗೆ. ಇದು ಜಗವನುದ್ಧರಿಸಲು ಬಂದ ಪರಾತ್ಪರ ಶಕ್ತಿಯಾದ ಪರಮೇಶ್ವರಿಯ ಚಿತ್ ಕಳೆಯಾದುದರಿಂದ ಮಹಾದೇವಿಯಕ್ಕನೆಂಬ ನಾಮವಧರಿಸಿ ಲಿಂಗಧಾರಣವಾಗಲೊಲ್ಲೆನೆಂಬ ನೆಪಮಾಡಿ, ಭವಿಯಂ ಸೋಂಕದೆ ಅಂಗಸಂಗಮಂ ರೂಪ ವಿಷಯಂಗಳ ತೊರೆದು ನಿರ್ವಿಶಯಳಾಗಿ, ಲಿಂಗಸಂಗದೊಳ್ ಅವಿರಳ ಸಂಗಿಯಾಗಿ, ಲಿಂಗಸುಖದಲ್ಲಿದ್ದ ಘನವನೇನೆಂಬೆ ! ಇಹವ ಸಟೆಯೆಂದು ಪರವ ಪುಸಿಯೆಂದು ಪರಾತ್ಪರ ಪರಮನ ಕಾಣಿಸಲು ಬಂದ ಮಹಾಶಕ್ತಿಗೆ ಅದಾವ ಭವಿಯ ಸೋಂಕು ! ಅದಾವ ಅಂಗ ಸಂಗ !

ಸದಾ ಲಿಂಗಸುಖದೊಳಿದ್ದ ಸರ್ವಾಂಗ ಲಿಂಗಿ. ಅಲ್ಲಿ ಆವರಣ ಅಜ್ಞಾನ ವಿಸ್ಮತಿಯ ಸುಳುಹಾದರೂ ಸುಳಿಯಬಹುದೇ? ಈ ಮಹಾಶಕ್ತಿ ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತಿದ್ದ ಘನ, ಇದು ಚಿದ್ಘನ. ಇದಕ್ಕೆ ಬೇರಾದುದಿಲ್ಲ, ಕೂಡಿದುದಿಲ್ಲ, ಜಗವನುದ್ಧರಿಸಲು ನಡೆಸಿದ ಅಭಿನಯ. ಈ ಅಭಿನಯ ಬೇರಾದುದನ್ನು ಬೆರೆಸುವ ಅಭಿನಯ. ಒಂದೇ ಒಂದು. ಎರಡೆಂಬುದಿಲ್ಲ ಎರಡೆಂಬುದು ಒಂದು. ಅದು ಬೇರಾದುದಿಲ್ಲ, ಕೂಡಿದುದಲ್ಲ, ಅಲ್ಲಿ ವಿಭಾಗಕ್ಕಿಂಬಿಲ್ಲ, ಖಂಡಿತವಿಲ್ಲದ ಅಖಂಡಿತವಾದುದೊಂದೆ ಎಂದೆನ್ನುವ ಶುದ್ಧ ಪ್ರಸಾದದ ಅಭಿನಯ. ಇದುವೆ ಸಕಲ ಜೀವಿಗಳಿಗೆ ಕವಿದಿದ್ದ ಅಜ್ಞಾನಂಧಃಕಾರವ ಹೊಡೆದೋಡಿಸುವ ಲಿಂಗಕಳೆ, ಲಿಂಗ ಪ್ರಭೆ, ಬೆಳಗಿನ ಬೆಳಗು, ಸ್ವಯಂಪ್ರಭೆ,ಅರುವಿನರುವು. ನಿರಾಲಂಬವಾದುದರಿಂದ ತನ್ನದಿವ್ಯರೂಪ ಲಾವಣೆಯನೆಡೆಗೊಂಡು ಷೋಡಶಪ್ರಾಯದ ಸುಖದ ಸುಗ್ಗಿ. ಶಿವನೊಳ ಪರವಶವ ನೆಯ್ದು ಸರ್ವಕರಣಂಗಳ ಅರುಹಿಂಗಾಹುತಿಯನಿಕ್ಕಿ ದಿಗಂಬರದುಡುಗೆಯನುಟ್ಟ ಘನವನೋಡಿರೆ !

ಜಗದ ಜನವು ವಿಷಯಂಗಳಿಗೆ ಫಲಪದವಿಗಳಿಗೆ ಪರವಶವಾದರೆ, ಈ ಶಕ್ತಿಯು ಒಳಹೊರಗೆನ್ನಲು ಇಂಬುಗೊಡದ ಪರಿಪೂರ್ಣ, ಶಿವ ಚಿನ್ಮಯ, ಶಿವ ಚಿತ್‌ಪ್ರಕಾಶ, ಶಿವ ಚಿದಾಕಾಶ ರೂಪಿ, ನಿರಂತರ ನಿರಾತಂಕವಾಗಿರುವ ಬೆಳಗುಳ್ಳ ಮಹಾಬೆಳಗಿಗೆ ವಶವನೆಯ್ದಿದೆಯಲ್ಲ , ಲೋಕದೊಳ್ ಇದು ವಿಚಿತ್ರ ನೋಡಾ. ಜಗದ ಕಣ್ಣಿಗೆ ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ , ಅಭಿನವೇಶವೆಂಬ ಪಂಚ ಕ್ಲೇಶಕ್ಕಾಹುಯಾಗುತ್ತಿರುವವು. ಇದು ಜಗದ ಸೃಷ್ಟಿ . ಜಗದ ವ್ಯಾಪರ. ಜಗದ ಲೀಲೆ. ಇದುವೆ ಭವದ ರಾಟಾಳ. ಪುನರಪಿ ಜನನ, ಪುನರಪಿ ಮರಣವೆಂಬ ತಿರುಗುತ್ತಿಹ ಪ್ರಕೃತಿ ಚಕ್ರ. ಇದು ಅಧೋಪ್ರಕೃತಿ, ಮಲಿನ ಪ್ರಕೃತಿ, ಇದಕ್ಕೆ ವಿರುದ್ಧವಾದ ಪ್ರಕೃತಿಯೆ ಊರ್ಧ್ವಪ್ರಕೃತಿ. ಇದು ಅಕ್ಕನ ಪ್ರಕೃತಿ, ಕರಣಂಗಳನ್ನೆ ಆರುಹಿಂಗಾಹುತಿ ಮಾಡಿದ ದಿವ್ಯಪ್ರಕೃತಿ.

ಅಹಹ ಈ ಶಕ್ತಿಯ ಘನವದೇನು ವರ್ಣಿಸುವದು? ಕರಣಂಗಳೆ ಅರುವಿನ ಕಿರಣಂಗಳಾದುದರಿಂದ ಕರಣಂಗಳು ನಿರ್ಮಾಯನ ಸುಖಕ್ಕಾಹುತಿ, ನಿರಂಜನ ಬೆಳಗಿನ ಬೆಳಗಿಗಾಹುತಿ, ಪರಮಶಾಂತಿಯ ಶಾಂತತೆಗಾಹುತಿ, ನಿಶ್ಚಿಂತತೆ ನಿರ್ಭಯ ನಿರಂಕುಶ ತೃಪ್ತಿಗಾಹುತಿ ಯಾದುದರಿಂದ ಶುದ್ಧಪ್ರಸಾದ, ಸಿದ್ಧಪ್ರಸಾದ, ಪ್ರಸಿದ್ಧ ಪ್ರಸಾದ ಸಿದ್ಧವಾದುದು ಪ್ರಸಾದದ ಮೇರುವೆಯಾಗಿ ದಿಗಂಬರ ನೊಲಿಸಿದ ಚಿನ್ನನೋಡಾ. ದಿಗಂಬರ ನೊಲಿಸಿರುವುದರಿಂದ ದಿಗಂಬರದುಡುಗೆಯ ನುಟ್ಟ ಚಿನ್ನನೋಡಾ. ತೋರುವ ತನ್ನ ಬಾಹ್ಯ ಶರೀರ ನೋಡಿ ಲೋಕದೃಷ್ಟಿ ಕೆಡಬಾರದು. ನೀತಿ ಬಾಹಿರರಾಗಬಾರದು, ಕಾಮುಕರಾಗಬಾರದು, ಕಾಮನ ಬಲೆಗೆ ಬೀಳಗೊಡಬಾರದೆಂದು ಹಾಗೂ ಸತ್ಪುರುಷರ ಸದ್ಭಕ್ತರ ಶಿವಭಾವ ಸಂಪನ್ನರ ಮನ ನೋಯಿಸಬಾರದೆಂದು, ತನ್ನ ಕೇಶವೆಂಬ ಅಂಬರಮಂ ಮುಸುಕಿಟ್ಟು ಮುಚ್ಚುವಿಕೆಯ ನೋಡಿರೆ. ತನ್ನ ನೋಟವೆಂಬುದು ಕರಸ್ಥಳದೊಳಗಿಪ್ಪ ಇಷ್ಟಲಿಂಗ

ದೋಳ್ ದೃಷ್ಟಿ ನಟ್ಟ ನೋಟ. ಶ್ರೀ ಗುರುವಿನ ಕರುಣಾನೋಟ ಇಷ್ಟವಾದ ನೋಟ, ಲಿಂಗಾಂಗ ಸಾಮರಸ್ಯದ ನೋಟ ಚಿತ್ಪ್ರಕಾಶದ ನೋಟ, ಇದು ಕೆಡದ ನೋಟ, ಕಂದದ ಕುಂದದ ನೋಟ. ಅಕಲಂಕ ನೋಟವೆ ಲಿಂಗಾಂಗದ ಘನವಾದುದರಿಂದ ಮನ ಮುಟ್ಟಿಯಿಸಿ ಭಾವ ಕರಿಗೊಂಡುದಕ್ಕಾಗಿ ಲೌಕಿಕ ಲಜ್ಜಾಭಿಮಾನವಂತೊರೆದು ಇತರಂ ಪರಿದು ಮಹಾವೈರಾಗ್ಯಮ ಬೀರುತ್ತ ಕರುಣಾ ರಸಮಂ ಹೇರುತ್ತ ಅಂದರೆ ವಿಶ್ವಾಸವೆ ಭಕ್ತಿ, ಗುರು, ಲಿಂಗ, ಜಂಗಮ ಒಂದೆಂಬುವದೆ ಜ್ಞಾನ. ನಿರ್ವಂಚನೆಯೆ ವೈರಾಗ್ಯ. ಚೆನ್ನಮಲ್ಲಿಕಾರ್ಜುನನಿಗೊಪ್ಪಿಸಿದ ಕಾಯವಾದಲ್ಲಿ ನಿರ್ವಂಚನೆಯಿಂದಿರುವದೆ ಮಹಾ ವೈರಾಗ್ಯದ ನಿಲುವು. ಈ ನಿಲವು ಬೀರುತ್ತ ಕರುಣಾರಸಮಂಹೇರುತ್ತ ಇದೆಂಥ ಕರುಣಾರಸದ ರಸಾಮೃತ ನೋಡಿರೆ.

ಲೋಕವು ವಿಷಯಾದಿಗಳನ್ನು ಫಲ ಪದವಿ ಅಧಿಕಾರ ಸಂಪತ್ತು ಹೊನ್ನು ಹೆಣ್ಣು ಮಣ್ಣು ಇವುಗಳನ್ನು ಸಂಗ್ರಹಿಕೊಡುವದಕ್ಕೆ ಕರುಣಾರಸವೆಂದು ತಿಳಿದು ಅದನ್ನೆ ಸತಿಸುತರಿಗೆ ಇಷ್ಟ ಮಿತ್ರರಿಗೆ ಗಳಿಕೆ ಮಾಡಿಡುವದಕ್ಕೆ ಕರುಣೆ ಎಂದು ತಿಳಿದು ಮೋಸ ಹೋಗುತ್ತಿರುವುರು. ಇದು ಇಂದ್ರಿಯಂಗಳ ವಿಷಯದ ಭೋಗದ ರಸ, ವಿಷರಸ, ಭಯರಸ, ಅತೃಪ್ತಿರಸ, ಕೆಡುವರಸ, ಇದು ಭವಕ್ಕೆ ಕಾರಣ ಮಾಡುವ ವಾಸನಾರಸ. ಎಂದು ತಿಳಿಯದಿರುವುದು ಬಹು ಹಾನಿಕಾರಕವಾಗಿದೆ.

ಅಕ್ಕನ ಕರುಣೆ ಜೀವಕೋಟಿಗೆ ಕೈವಲ್ಯ ಕಲ್ಯಾಣ ಮಾಡುವ ಕರುಣೆ, ಲಿಂಗಾಂಗ ಸಮರಸ ಜ್ಞಾನ ನಿಧಿಯ ದೊರಕಿಸುವ ಕರುಣೆ, ಅದಕ್ಕಾಗಿ ಈ ಘನ ಶಕ್ತಿ ಸಂಚರಿಸಿದಲ್ಲೆಲ್ಲ ಲಿಂಗಾಂಗ ಸಮರಸ, ಸಮರತಿ, ಸಮಕಲೆ, ಸದ್ಭಕ್ತಿ, ಬೋಧಿಸುವವಳೀಕೆ.

ಈ ನಿಜ ಶಕ್ತಿ ನಿಜದ ಘನವಾದುದರಿಂದ, ನಿಶ್ಚಲ ಬುದ್ಧಿಯ ಭಕ್ತಿಯ ಭಾಗ್ಯವೆನಿಪ ಈ ಶಕ್ತಿಯು ಅಭವನ ಭಕ್ತಿಯ ಭಾಗ್ಯಶಕ್ತಿ. ಇದು ನಿರ್ಭಯದ ಭಕ್ತಿಯ ಜ್ಞಾನವಾದುದರಿಂದ ಮುಕ್ತಿಯ ತವರು ಮನೆ, ಅಕ್ಕನ ಹೃದಯವೆಂಬ ಮನೆ ಕರುಣಾರಸದ ತವರುಮನೆ. ಚೆನ್ನಮಲ್ಲಿಕಾರ್ಜುನನ ಒಲಿಸುವ ಪ್ರೀತಿಯ ಒಕ್ಕೂಟದ ಮನೆ, ಅಂಗ ಲಿಂಗೈಕ್ಯದ ಮನೆ, ಮನಲಿಂಗೈಕ್ಯದ ಮನೆ, ಭಾವ ಲಿಂಗೈಕ್ಯದ ಮನೆ, ಜ್ಞಾನ ಲಿಂಗೈಕ್ಯದ ಮನೆ, ನಾನೆಂಬುದು ಕೆಡಸಿ ನೀನೆಂಬುದು ನಿಲಿಸಿ ಉಭಯ ಲಿಂಗೈಕ್ಯದ ಮನೆ, ನಿಃಕ್ರಿಯಾತೀತ ಮನೆ, ನಿಷ್ಪತ್ತಿಯ ಘನ ಮನೆಯಾದುದರಿಂದ ಶಿವ ಸುಖದ ಸಂಪನ್ನೆ, ಶಿವ ಭಾವ, ಭರಿತ ಸಂಪನ್ನೆ, ಪರಮಜ್ಞಾನದ ಮೇರುವೆ, ಸುಜ್ಞಾನದ ಮೇರುವೆ, ಸಮ್ಯಜ್ಞಾನದ ಮೇರುವೆ, ತತ್ವಶಿಖಾಮಣಿ.

ಅಹಹ ಇದೆಂಥ ತತ್ವಶಿಖಾಮಣಿ. ದೀಪಕ್ಕೆ ದೀಪ್ತಿಗೆ ಭೇದ ಮಾಡದ ಶಿಖಾಮಣಿ, ಸಾಕಾರ ನಿರಾಕಾರವೆಂದು ವಿಂಗಡಿಸದ ಶಿಖಾಮಣಿ, ಅಂಗಕ್ಕೂ ಆತ್ಮಕ್ಕೂ ಭಿನ್ನಕಾಣದ ತತ್ವ ಶಿಖಾಮಣಿ. ತನ್ನಂಗವನ್ನೆ ಶ್ರೀಗುರು ಮಂತ್ರಮಾಡಿದ ತತ್ವಶಿಖಾಮಣಿ, ಸಾವಯವ ನಿರವಯ ಬೇರು ಮಾಡದ ತತ್ವ ಶಿಖಾಮಣಿ ಯಾದುದರಿಂದ ಇದು ಪುಣ್ಯ ಪುಂಜೆ; ಇದೆಂಥ ಪುಣ್ಯದ ಪುಂಜೆ ! ನಿತ್ಯ ನಿರತಿಶಯಾನಂದದ ಪುಣ್ಯದ ಪುಂಜೆ, ಅರಿತು ಅರಿಯದಂತಿರುವ ಪುಣ್ಯದ ಪುಂಜೆ, ಸ್ವಯಸುಖದ ಪುಣ್ಯದ ಪುಂಜೆ, ಎಲ್ಲ ಎಲ್ಲವ ನರಿತ ಪುಣ್ಯದ ಪುಂಜೆ, ತಾನಾರೆಂದರಿತ ಪುಣ್ಯದ ಪುಂಜೆ, ಅರಿತೆ ಅರಿಯೆನೆಂಬ ಪುಣ್ಯದ ಪುಂಜೆ, ನಿರ್ಣಯಕ್ಕೆ ಮೇರೆದಪ್ಪಿದ ಪುಣ್ಯದ ಪುಂಜೆ, ಮುಟ್ಟಬಾರದುದ ಮುಟ್ಟಿದ ಪುಣ್ಯದ ಪುಂಜೆ, ಅಸಾಧ್ಯವ ಸಾಧಿಸಿದ ಪುಣ್ಯದ ಪುಂಜೆ, ಇದು ಕಾಣಬಾರದುದ ಕಂಡ ಪುಣ್ಯದ ಪುಂಜೆಯು. ಇದು ನಿಜ ನಿಷ್ಠೆಯ ಖಣಿ. ದಿಟಸಟೆಯು ಕೊಡದ ಖಣಿ, ನಿತ್ಯಾನಿತ್ಯವೆಂಬುದಿಲ್ಲದ ನಿಷ್ಟೆಯ ಖಣಿ, ಅಹುದು ಅಲ್ಲೆಂಬುದಕ್ಕೆ ಮೀರಿದ ನಿಷ್ಟೆಯ ಖಣಿ. ಅಂದು

ಇಂದು ಎಂದೆಂದೂ ಇದ್ದಕ್ಕಿದ್ದಂತಿರುವ ನಿಷ್ಠೆಯ ಖಣಿಯು. ಇದುವೆ ಸತ್ಯದ ಸದನ. ಇದೆಂಥ ಸದನ! ಕ್ಷರಾಕ್ಷರವೆಂಬುದಕ್ಕೆಡೆಗೊಡದ ಸತ್ಯದ ಸದನ. ಇದು ಸತ್ಯಾಸತ್ಯವೆಂಬ ವಿಭಾಗಕ್ಕೆಡೆಗೊಡದ ಸದನ. ಅದು ರೂಪಾರೂಪವಾಗದ ಸತ್ಯದ ಸದನ. ಸಮಸ್ವರೂಪವಾದ ಸತ್ಯದ ಸದನ, ನಿಸ್ಸೀಮ ಸದನ ನಿರುಪಮನ ಸದನವಾದುದರಿಂದ ಶಾಂತಿಯ ನಿಧಿ, ಸಂತೋಷದ ನಿಧಿ, ಸಿಷ್ಪತ್ತಿಯ ನಿಜಾನಂದ ನಿಧಿಯು. ಚಿದಂಬರ ಸಂಯುತೆ ಚಿದಾಕಾಶದ ಚಿದ್ಘನದ ಮಹಿಮೆಯಲ್ಲಿ ಮಗ್ನಳು.

ಸ್ವಾನುಭಾವದ ಸಾಗರ. ಅಕ್ಕ, ನಿಃಶಬ್ದ ಬ್ರಹ್ಮನ ನಿಬ್ಬೆರಗಿನ ನಿಲಯವುಳ್ಳವಳು ಆದುದರಿಂದ ಸ್ವಾನುಭವದ ಸಾಗರ. ಅಕ್ಕನ ಅನುಭವ ಶಬ್ದಾನುಭವದಿಂದುಕ್ತವಾದುದಲ್ಲ ಶೃತಿಗೆ ಮೀರಿದ ಸ್ವಯಂಭು. ಶಕ್ತಿ ಶಾಸ್ತ್ರಕ್ಕಸಾಧ್ಯವಾದ ಶಕ್ತಿ, ಸ್ವಯಸುಖದ ಸಾಗರ ನಿತ್ಯ ನಿರತಿಶಯಾನಂದ ಸಾಗರ, ವಿದ್ಯೆ, ಅವಿದ್ಯೆ, ವಿದ್ಯಾವಿದ್ಯೆ, ಇವುಗಳ ಹಂಗಿಲ್ಲದ ನಿಜಾನುಭವ ಸಾಗರ, ತ್ರಿವಿಧದ ಹಂಗುಹರಿದ ತ್ಯಾಗಾಮೃತ ಸಾಗರ, ಅಖಂಡ ಸುಖದ ಸಾಗರ. ಇದು ಬರ ಹೋಗುವ ನಿಲಯವಲ್ಲ, ಇದ್ದಕ್ಕಿದ್ದಂತಿದ್ದ ನಿಜನಿವಾಸ ಎನಿಪ ಮಹಾದೇವಿಯಕ್ಕಂಗಳು ಶಿವಸುಖಾಳಾಪಂಗೈಯುತ್ತ ಮುಕ್ತಿಯ ಘನ ಕರತಳಾಮಳವ ಮಾಡಲು ಬಂದ ಕೈವಲ್ಯ ಶಕ್ತಿಯಾದುದರಿಂದ ಘನಕ್ಕೆ ಘನವಾದ ಚಿನ್ಮಯಾನಂದ ಸುಖವೆ ಅಂಗನಿಗೆ ನಿಜವಾದ ಸಂಪತ್ತು, ನಿಜವಾದ ಧನ. ಇದರಿಂದಲೆ ಅತ್ಯಂತ ದುಃಖ ನಿವೃತ್ತಿ. ಆನಂದ ಪ್ರಾಪ್ತರೂಪ ಪ್ರಾಪ್ತಿ. ಮೋಕ್ಷವು ದಿಟ ದಿಟ, ಅನ್ಯಸಾಧನೆಗಳೆಲ್ಲ ನಿರರ್ಥಕವೆಂದು ಮಹಾಲಿಂಗ ರೂಪವಾದ ಪೂರ್ಣಜ್ಞಾನದ ಘನ ಯತಾರ್ಥ ಬೋಧಿಸುತ್ತ, ಸಕಲ ಲೋಕಂಗಳ ಪಾವನ ಮಾಡುತ್ತ ಘನಶಕ್ತಿಯು ಮುಟ್ಟಿದುದು ಪರುಷವಾಗಿ ಅಂದರೆ ಸಕಲರು ಪರಮಪುರುಷಾರ್ಥ ಪ್ರೇಮಿಗಳಾಗಿ, ಮಹಾಲಿಂಗದ ಭಕ್ತರಾಗಿ, ಮಹಾಲಿಂಗ ಭಾವಿಗಳಾದರು. ಭವಿಸಂಗಮಂತೊರೆದು ಭಕ್ತಿ ಸಂಪನ್ನರಾದರು.

ಮಹಾಲಿಂಗವೆ, ಘನಲಿಂಗವೆ, ಶಿವಯೋಗಿನಿ ರೂಪದಿಂದ ಸಂಚರಿಸಿ ಈ ಘನಶಕ್ತಿ ಮೆಟ್ಟಿದುದು ಧರೆಪಾವನವಾಗುವದೊಂದೆ ಅಲ್ಲ ನಂಬಿದುದೆಲ್ಲ ಪವಿತ್ರವಾಯಿತು. ನುಡಿದುದೆಲ್ಲ ಶಿವತತ್ವವಾಯಿತು. ನಡೆದುದೆಲ್ಲ ಶಿವಮಾರ್ಗವಾಯಿತು. ನೆರೆದುದೆಲ್ಲ ದೇವಸಭೆಯಾಯಿತು. ಸಕಲ ಕ್ಷೇತ್ರಂಗಳು ಪಾವನವಾದವು. ಇತ್ತ ತನ್ನ ಕೇಳ್ದು ಕಂಡು ಕೈ ಮುಗಿದ ಜನಂಗಳೆಲ್ಲರ ಕೃತಾರ್ಥ ಮಾಡುತ್ತ ಬಪ್ಪಾಗಳು ಬಸವಣ್ಣ ಚೆನ್ನಬಸವಣ್ಣ ಪ್ರಭುದೇವರು ಮುಖ್ಯವಾದ ಆಸನ ಮಧ್ಯದಲ್ಲಿ ಆ ಬಸವರಾಜ ದೇವರು ಪ್ರಭುದೇವರೊಡನೆ ಹೆತ್ತ ತಾಯಿ ಅಕ್ಕಮಹಾದೇವಿಯು ವಿರಕ್ತಿಯಿಂದ ದಿಗಂಬರೆ ಕಾಮಾರಿಯಾಗಿ ಬರುತಿರ್ದಳೆಂದು ಬಿನ್ನೈಸಿ, ಆ ಪ್ರಭುದೇವರು ಪ್ರಮಥರಿಗೆ ಕಾಮಸಂಹಾರಿ ಎಂಬುದನ್ನು ಪ್ರತ್ಯಕ್ಷವ ತೋರಬೇಕೆಂದು ಭಕ್ತಿ ವಿಸ್ತಾರದಿಂದ ಆ ಕಿನ್ನರಯ್ಯಗಳು ಒಪ್ಪಿ ಕಳುಹಲು ಆ ಪರಮ ಜ್ಞಾನಿಯು ಕಿನ್ನರಯ್ಯ ಪರೀಕ್ಷಿಸುವ ಪ್ರಸ್ತಾವದ ವಚನ.

1

**ಕಾಯದಲ್ಲಿ ಕಳವರಳವಿರಲು, ಪ್ರಾಣದಲ್ಲಿ ಮಾಯೆ ಇರಲು,**
**ಏತರ ಮನ ಇದೇತರ ನಿರ್ವಾಣ. ಮಹಾಲಿಂಗ**
**ತ್ರಿಪುರಾಂತಕನು ನಿನ್ನ ಸಂಸಾರಿಯೆಂಬುವನಲ್ಲದೆ**
**ಸಜ್ಜನೆಯೆಂದು ಕೈವಿಡಿವನಲ್ಲ ಕೇಳಾ ಮರುಳೆ.**

**ತಾತ್ಪರ್ಯ:** ಮಹಾದೇವಿಯಕ್ಕಾ, ಮಹಾಲಿಂಗರೂಪಿ ತ್ರಿಪುರಾಂತಕನು ನಿನ್ನ ಕೈವಿಡಿದವನಾಗಿದ್ದರೆ ಮಾತ್ರ ನೀನು ಸಜ್ಜನಳು. ತ್ರಿಪುರಾಂತಕನ ಕೈವಿಡದವಳೆಂದರೆ ಘನ ಲಿಂಗಯ್ಯನ ಸುಖದ ಸುಖಿಯು. ಸುಖದ ಸುಖಿಯೆಂದರೆ ಅಲ್ಲಿ ವಿಭಾಗಕ್ಕಿಂಬಿಲ್ಲ; ಅದ್ವಿತೀಯವು. ಮಹಾಲಿಂಗವೆಂಬುದು ಅಖಂಡ, ಕೊನೆ ಮೊದಲಿಲ್ಲದ ನಿಸ್ಸೀಮ ನಿಜಘನ, ಚಿದ್ಘನ, ಚಿದಾನಂದದಲ್ಲಿದ್ದವರಿಗೆ ಕಾಯವಿಲ್ಲ, ಪ್ರಾಣವಿಲ್ಲ , ಮಾಯೆ ಇಲ್ಲ, ಮರವು ಇಲ್ಲ. ಅಹುದಾದುದಿಲ್ಲ, ಅಲ್ಲಾದುದಿಲ್ಲ. ನಾಮವಿಲ್ಲ, ರೂಪವಿಲ್ಲ, ಹೆಣ್ಣೆಂಬುದಿಲ್ಲ, ಗಂಡೆಂಬುದಿಲ್ಲ, ಸ್ವಮತವಿಲ್ಲ, ಪರಮತವಿಲ್ಲ, ಬೆಳಗಿನಲ್ಲಿಸುಮ್ಮನೆ ಹೇಳುವದಕ್ಕಾದರೂ ಕತ್ತಲುಂಟೆ? ಅಮೃತದೋಳ್ ವಿಷವುಂಟೆ?

ಮಹಾಲಿಂಗದೋಳ್ ಸುಮ್ಮನೆ ಹೇಳುವದಕ್ಕಾದರೂ ಕಾಯ ಪ್ರಾಣ ಉಂಟೆ? ಮಹಾಲಿಂಗದ ಘನಸುಖದಲ್ಲಿದ್ದ ನಿನಗೆ ಇಲ್ಲದ ಕಾಯವ ನೀಕಂಡು ಕಳವಳವಾಗಿ ದಿಗಂಬರಿಯಾದುದು ಹೇಗೆ ? ಇಲ್ಲದ ಪ್ರಾಣದ ಮಾಯವ ಕಂಡು ನೀ ಹೆಂಗಸಾದುದು ಹೇಗೆ ? ಇಲ್ಲದ ಜೀವವ ಕಂಡು ನೀ ಅಭಿಮಾನಿಯಾದುದು ಹೇಗೆ ? ಚಿತ್ಕಾಯದೋಳ್ ನಿನ್ನ ಕಳವಳದ ಕಾಯ ಸಮರಸವಾದುದು ಹೇಗವ್ವಾ ? ನಿರ್ಮಾಯದೋಳ್ ನಿನ್ನ ಪ್ರಾಣದ ಮಾಯೆ ಸಮರಸವಾದುದು ಹೇಗವ್ವಾ ? ನಿರಾಲಂಬವಾದ ನಿಜ ಪದದೋಳ್ ನಿನ್ನ ಅಭಿಮಾನಯುಕ್ತ ಅಂಗ ಸಮರಸವಾದುದು ಹೇಗೆ ? ಅದಕ್ಕಾಗಿ ನಿನ್ನದು ಕಳವಳದ ಕಾಯವೆಂಬುದು ಎದ್ದು ಕಾಣುತ್ತಿಹುದು ನೋಡಾ. ಇದಲ್ಲದೆ ನೀ ಪ್ರಾಣರೂಪಿ ಮಾಯಿಕ ಹೆಂಗಸು ಎಂಬುದು ಸ್ವಭಾವತಃ ನಿನ್ನಿರವು ತನ್ನಿಂದ ತಾನೆ ಎದ್ದು ತೋರುತ್ತಿರುವಾಗ ನಿನ್ನದೇತರ ಮನ ಎಲೆ ಅವ್ವಾ ನಿನ್ನದೇತರ ನಿರ್ವಾಣವವ್ವಾ?

ಕಾಯವಿದ್ದರೂ ನಿಃಕಾಯನ ಒಡಗೂಡುವ ಪರಿ ಎಂತವ್ವಾ? ಮಾಯಿಕ ಮನವಿದ್ದರು ಮಹಾಲಿಂಗದ ಘನ ಸುಖಿಗಳಾಗುವ ಪರಿ ಎಂತವ್ವಾ ? ಕಾರಣ ಮಹಾಲಿಂಗ ತ್ರಿಪುರಾಂತಕನು ನಿನ್ನನ್ನು ಸಂಸಾರಿ ಎನ್ನುವನಲ್ಲದೆ ಸಜ್ಜನೆಯೆನ್ನುವವನಲ್ಲ. ಏಕೆಂದರೆ ನೀನು ಪರಮಾರ್ಥದ ಪರಿಣಾಮಿಯಾಗದ್ದರಿಂದ ಕೈವಿಡಿವವನಲ್ಲ ಕೇಳಾ ಮರುಳೆ. ಹೀಗೆಂದು ಪರಮಜ್ಞಾನಿಯಾದ ಕಿನ್ನರಯ್ಯಗಳು ಒರೆದು ನೋಡಿದ ಒರೆಗಲ್ಲಿಗೆ ಅಕ್ಕನ ಪ್ರತ್ಯುತ್ತರ.

2

**ಅಂಗದ ಭಂಗವ ಲಿಂಗಸುಖದಿಂದ ಗೆಲಿದೆ, ಮನದ ಭಂಗವ**
**ಅರುಹಿನ ಮುಖದಿಂದ ಗೆಲಿದೆ, ಜೀವದ ಭಂಗವ ಶಿವಾನುಭವದಿಂದ ಗೆಲಿದೆ,**
**ಕರಣದ ಕತ್ತಲೆಯ ಬೆಳಗನುಟ್ಟು ಗೆಲಿದೆ. ಜವ್ವನದ ಹೊರ ಮಿಂಚಿನಲ್ಲಿ**

**ನಿಮ್ಮ ಕಣ್ಣಿಗೆ ತೋರುವ ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯಾ**
**ಚೆನ್ನಮಲ್ಲಿಕಾರ್ಜುನ ಕೊಂದು ಮನಸಿಜನಾಗಳುಹಿದರೆ**
**ಮನಸಿಜನ ತಲೆಬರಹ ತೊಡೆದನು .**

**ತಾತ್ಪರ್ಯ:** ಎನ್ನ ಒಡ ಹುಟ್ಟಿದ ಕಿನ್ನರಯ್ಯನೆ ಪರಮಜ್ಞಾನಿಯೆ ಪರಿಪೂರ್ಣನೆ, ಎನ್ನಂಗದ ಭಂಗ, ಮನದ ಭಂಗ, ಜೀವದ ಭಂಗ ಕಳೆದು ಕೊಂಡಿಪ್ಪ ಪರಿ ನೋಡಾ. ಎನ್ನಂಗದ ಭಂಗ ಕೆಡಿಸಿದ ಲಿಂಗ ಸುಖವೆಂಬುದು ನಿನ್ನ ಮಹಾಲಿಂಗರೂಪಿ ಎನ್ನ ಪುರುಷೋತ್ತಮ ಪುರುಷ ನೋಡಾ. ಆತನೊಲಿದ ಏಕತ್ವ ಸುಖವೇ ಎನ್ನಂಗದ ಭಂಗ ಕೆಡಿಸಿದ ಸವೆಯದ ಸುಖ ನೋಡಾ. ನಿನ್ನ ಮಹಾಲಿಂಗದರುವೆ ನನ್ನ ಮನದ ಭಂಗ ಕೆಡಿಸಿದ ಅಕಲಂಕ ಅರುವು ನೋಡಾ. ಆ ಅಕಲಂಕ ಅರುವಿನ ಯತಾರ್ಥ ಸ್ವಾನುಭಾವವೆ ನನ್ನ ಜೀವದ ಭಂಗ ಕೆಡಿಸಿದ ಶಿವಾನುಭವ ನೋಡಾ.

''ಕರಣಂಗಳ ಕತ್ತಲೆಯನು ಸಮ್ಯ್ಯಜ್ಞಾನವೆಂಬ ಬೆಳಗನುಟ್ಟು ಗೆಲಿದೆ.ಲಿಂಗ ಸುಖವೆಂಬುದು ನಿನ್ನ ಮಹಾಲಿಂಗದ ಘನ ನೋಡಾ. ಮಹಾಲಿಂಗವೆಂಬುದು ಲಿಂಗಾಂಗ ಸಾಮರಸ್ಯದ ಸುಧೆ, ಅಂಗ ಲಿಂಗ, ಲಿಂಗ ಅಂಗವೆಂಬುದರಿತಲ್ಲಿಯೆ ಅಲ್ಲಿಯೇ ಕಾಣಿರೊ ಕೂಡಲ ಚೆನ್ನಸಂಗಯ್ಯ ಲಿಂಗ ನಿರಂತರ ಅಲ್ಲಿಯೆ ಕಾಣಿರೊ'' ಎಂದು ಷಡಸ್ಥಲ ಚಕ್ರವರ್ತಿಯಾದ ಚನ್ನಬಸವ ದೇವರು ಬೋಧಿಸಿದಂತೆ ಮಹಾಲಿಂಗವೆಂಬುದು ಲಿಂಗ ಅಂಗ ಸಮರಸದ ಜ್ಞಾನಾಮೃತವು ಇದು ಪೂರ್ಣವು. ಇದ್ದಕ್ಕಿದ್ದಂತಿದ್ದ ಚಿನ್ಮಯ. ಅಲ್ಲಿ ಬೇಧಕ್ಕಿಂಬಿಲ್ಲ. ಬಾಧೆಗಿಂಬಿಲ್ಲದಂತೆ ಅಖಂಡವಾಗಿರುವ ಜ್ಞಾನಮೃತವೆ ಮಹಾಲಿಂಗ. ಈ ಮಹಾಲಿಂಗವೆ ಎನ್ನ ತನುವಿನ ಮಹಾಂತನು. ಮನದ ಘನಮನ ಪ್ರಾಣದ ಘನಪ್ರಾಣವಾದ್ದರಿಂದ ಸುಖವೇ ಲಿಂಗಪತಿ, ಸುಖಿಯೇ ಶರಣ. ಸುಖದನುಭಾವವೇ ಸುಸಂಗವಾಗಿಹುದು ನೋಡಾ.

ನಿನ್ನ ಮಹಾಲಿಂಗದರುವು ಅರಿದೆನೆಂದರೆ ಅರಿಯಬಾರದು ನೋಡಾ. ಘನಕ್ಕೆ ಘನ ತಾನೆ ನೋಡಾ. ಮನದ ಭಂಗ ಹೋಗಬೇಕಾದರೆ ಅರುವಿನ ಮುಖದವನಾಗಬೇಕು. ಅಂದರೆ ಮತಿಗತಿಗೆ ಮೀರಿದರುವು, ಮರವರುವಿಗೆ ಮೀರಿದರವು, ಬಂಧ ಮೋಕ್ಷ ಕಾಣದರುವು, ಸಮ್ಯಕ್ ಅರುವು, ನಿಸ್ಸೀಮ ಅರುವು, ನಿಜನಿವಾಸದರುವು, ಈ ಅರುವಿನ ಯತಾರ್ಥ ಘನತ್ವ ತಿಳಿದಾಗ ಮನದ ಕೆಡಕು ನಾಶವಾಗುತ್ತದೆ.

ಮನಸ್ಸಿನಲ್ಲಿಯೇ ನಡೆ-ನುಡಿ, ಮತಿ-ಗತಿ, ಮರುವು-ಅರುವು, ಇಷ್ಟ-ಅನಿಷ್ಟ , ಪುಣ್ಯ-ಪಾಪ, ಸುಖ-ದುಃಖ, ಬಂಧ-ಮೋಕ್ಷ ಇರುವವು. ಇದುವೆ ವಿಸ್ಮೃತಿ ಮನ, ಭ್ರಾಂತಿ ಮನ, ವಿಕಲ್ಪ ಮನ, ತಾನಾರೆಂದರಿಯದ ಮನ, ಆವರಣವುಳ್ಳ ಮನ, ಈ ಆವರಣವುಳ್ಳ ಮನ ನಿರಸನವಾಗಬೇಕಾದರೆ, ಕೊನೆಮೊದಲಿಲ್ಲದ ಅರುವು, ಪರಾತ್ಪರ ಅರುವು, ನಿರಾಲಂಬ ಅರುವಿನ ಜ್ಞಾನದಿಂದ ನಾಶವಾಗುತ್ತದೆ. ಅರುವಿನ ಮುಖವೆಂಬುದು ಸ್ವಮಹಿಮ್ನವು. ಅದು ಸಕಲದರೋಳ್ ತುಂಬಿ ತುಳುಕದಿರುವುದು. ಕಂದದ ಕುಂದದ ಪ್ರಕಾಶ. ಅದಕ್ಕೆ ಉದಯಾಸ್ತಗಳಿಲ್ಲ ಅದು ಇರದ ಸ್ಥಾನವೇ ಇಲ್ಲ ಮತ್ತು ಅದರ ಹೊರ್ತು ಅನ್ಯವಾವುದು ಇಲ್ಲ .

ಈ ಅಖಂಡ ಅರುವಿನ ಜ್ಞಾನವಾದುದರಿಂದ ನನಗೆ ಮನವಿಲ್ಲ, ಮಾಯೆ ಇಲ್ಲ , ಕಾಮ ಕಳೆ ಇಲ್ಲ . ಇದುವೆ ನನ್ನ ಶಿವ ಭಾವ ಸಂಪತ್ತು. ಶಿವಾನುಭವದ ನಿಲಯ ಸಮ್ಯಜ್ಞಾನದ ನಿಲಯ, ಸಮರಸನಿಲಯ. ಆದ್ದರಿಂದ ಅಖಂಡ ಪರಿಪೂರ್ಣ ಪರಮಾನಂದ

ಪರಬ್ರಹ್ಮ ನಾನೆಂಬ ಬಲದ ಅಹಂಕಾರವಿಲ್ಲವಾಗಿ ನಾನು ಅದ್ವೈತಿಯಲ್ಲ . ಉಭಯವಿಟ್ಟು ಅರಸುವ ಗಜಿಬಿಜಿಯಲ್ಲಿ ಸಿಲುಕದ್ದರಿಂದ ನಾನು ದ್ವೈತಿಯಲ್ಲ . ಇಂತೀ ದ್ವೈತಾದ್ವೈತವೆಂಬ ಉಭಯ ನಷ್ಟವಾದ ಅಭೇದ್ಯಳು, ಜ್ಞಾನಾತೀತಳು.

ನನಗೆ ವಿದ್ಯೆಯಷ್ಟೆ ಅವಿದ್ಯೆ ಅಷ್ಟೆ, ವಿದ್ಯಾವಿದ್ಯೆ ಅಷ್ಟೆ , ಕ್ಷರವಷ್ಟೆ ಅಕ್ಷರವಷ್ಟೆ , ಸಂಬಂಧವಷ್ಟೆ ಅಸಂಬಂಧವಷ್ಟೆ, ಜ್ಞಾನವಷ್ಟೆ ಅಜ್ಞಾನವಷ್ಟೆ, ಸರ್ವಸಮನಾಗಿರುವ ಶಿವತತ್ವದ ಶಿವಾನುಭವಿ. ಶಿವಜ್ಞಾನದ ಘನತ್ವದಿಂದ ನಿಮ್ಮ ಕಣ್ಣಿಗೆ ತೋರುವ ಈ ಶರೀರದ ತಾರುಣ್ಯದ ಮಿಂಚು ಹೊರಮಿಂಚು, ಭ್ರಮಾತ್ಮಕ ಮಿಂಚು. ಈ ಮಿಂಚು ಜವ್ವನದ ಹೊರಮಿಂಚಲ್ಲವೆ ! ಈ ಹೊರಮಿಂಚಿನಿಂದುಕ್ತವಾದ ಕಾಮನ ಸುಟ್ಟುರುಹಿದ ಭಸ್ಮ ನೋಡಯ್ಯ. ಕಾಮ ನಾಶವಾಗಬಹುದು ಮನಸಿಜನ ನಾಶ ಅಸಾಧ್ಯ . ಕಿನ್ನರಯ್ಯನೆ ಮಹಾಲಿಂಗಸಂಗದೋಳ್ ಅವಿರಳ ಸಂಗಿಯಾಗಿ ಘನಸುಖದಲ್ಲಿದ್ದ ನನಗೆ ಮನಸಿಜನ ಭೀತಿಯಿಲ್ಲ.

ಅವನ ಸಂಕಲ್ಪ ಭೀತಿಯು ಇಲ್ಲ, ವಿಕಲ್ಪ ಭೀತಿಯು ಇಲ್ಲ. ಸರ್ವ ಸಮಸ್ವರೂಪವಾಗಿರುವ ಮಂಗಳಮಯರೂಪಿ ಚೆನ್ನಮಲ್ಲಿಕಾರ್ಜುನ ಸವೆಯದ ಸುಖದಲ್ಲಿಪ್ಪ ನನಗೆ ಆವಾವ ಭೀತಿಯಿಲ್ಲ .

ಇವೆಲ್ಲ ಲಿಂಗದ ಮರವುಳ್ಳವರಿಂಗಲ್ಲದೆ ಲಿಂಗದರುವುಳ್ಳವರಿಗಲ್ಲ , ಲಿಂಗಸುಖಿಗಳಿಗಲ್ಲ , ಲಿಂಗಾಂಗಿಗಳಿಗಲ್ಲ, ಲಿಂಗಾಂಗಿಗೆ ಸಂಚಿತವೆಂಬುದಿಲ್ಲ . ಲಿಂಗಾನುಭವಿಗೆ ಪ್ರಾರಬ್ಧವೆಂಬುದಿಲ್ಲ ಲಿಂಗಸುಖಿಗೆ ಆಗಾಮಿ ಎಂಬುದಿಲ್ಲ, ಏಕೆಂದರೆ ಅಖಂಡೈಕರಸವಾದ ಲಿಂಗಸುಖದಲ್ಲಿ ವಿಭಾಗಕ್ಕಿಂಬಿಲ್ಲವೆಂಬ ನಿಜ ನಿಷ್ಠೆ ನನಗೆ ಕರಿಗೊಂಡಿರುವದರಿಂದ ಮನಸಿಜನ ಪುಸಿ, ಅವನ ಸಂಕಲ್ಪ ಪುಸಿ, ವಿಕಲ್ಪ ಪುಸಿ ಎಂಬುದು ಘಟ್ಟಿಗೊಂಡಿರುವಾಗ ಇಲ್ಲದ ಮನಸಿಜನು ಇಲ್ಲವೆ ಇಲ್ಲ . ಇದ್ದ ಸರ್ವ ಮಂಗಳಮಯವಾಗಿರುವ ನಿರಂತರ ಇದ್ದಕ್ಕಿದ್ದ ಹಾಗೆ ಇದೆಯೆಂಬ ದಿವ್ಯದೃಷ್ಟಿ ದಿವ್ಯಜ್ಞಾನವೆ ಮನಸಿಜನ ತಲೆಬರಹ ತೊಡೆದನೆಂದು ಹೇಳಿದ್ದಾಗಿದೆ.

3

**ಎನ್ನಂತೆ ಪುಣ್ಯಂಗೈಯ್ದವರುಂಟೆ ? ಎನ್ನಂತೆ ಭಾಗ್ಯಂಗೈಯ್ದವರುಂಟೆ ?**
**ಕಿನ್ನರನಂತಪ್ಪ ಸೋದರ ನೆನಗೆ, ಏಳೇಳು ಜನ್ಮದಲ್ಲಿ ಶಿವಭಕ್ತರೆ ಬಂಧುಗಳೆನಗೆ,**
**ಚೆನ್ನಮಲ್ಲಿಕಾರ್ಜುನನಂತಪ್ಪ ಗಂಡ ನೋಡಾ ಎನಗೆ .**

**ತಾತ್ಪರ್ಯ:** ಅಕ್ಕ ತನ್ನ ಪುಣ್ಯ ಮತ್ತು ಪುಣ್ಯದ ಫಲದ್ರೂಪವಾದ ಭಾಗ್ಯದ ಘನತ್ವವನ್ನು ತಾನೆ ವರ್ಣಿಸುತ್ತಿದ್ದಾಳೆ. ಈ ನನ್ನಂಥ ಪುಣ್ಯ ಅದಾರಿಗೆ ? ಈ ನನ್ನಂಥ ಭಾಗ್ಯ ಅದಾರಿಗೆ ? ಈ ನನ್ನ ಪುಣ್ಯ ಮಾಯಿಕದ ಪುಣ್ಯವಲ್ಲ, ಮೋಸದ ಪುಣ್ಯವಲ್ಲ, ಸಟೆಯ ಪುಣ್ಯವಲ್ಲ, ಸಟೆಯ ಲೋಕಕ್ಕೆ ಕಾರಣವಾದ ಪುಣ್ಯವಲ್ಲ, ಸಟೆಯ ಪದವಿಗೂ ಕಾರಣವಾದುದಲ್ಲ, ಸಟೆಯ ಭೋಗಕ್ಕೂ ಕಾರಣವಾದುದಲ್ಲ, ನನ್ನ ಪುಣ್ಯದ ಫಲದ್ರೂಪವಾದ ಭಾಗ್ಯ, ತೋರಿ ಇಲ್ಲವಾಗುವ ಮಾಯಿಕ ಭಾಗ್ಯವು ಅಲ್ಲ. ಭೋಗಿಸಿದಂತೆ ಕಡಿಮೆಯಾಗಿ ಕೊನೆಗೆ ಉಳಿಯದಂತಾಗುವ ಮೋಸದ ಭಾಗ್ಯವೂ ಅಲ್ಲ, ಅನ್ಯರ ನೋಡಿ ಅಸೂಯೆ ಪಡುವ ಭಾಗ್ಯವೂ ಅಲ್ಲ. ಕಳ್ಳರಿಗೂ ಸುಳ್ಳರಿಗೂ ಅಗ್ನಿಗೂ ಆಹುತಿಯಾಗುವ ಭಾಗ್ಯವೂ ಅಲ್ಲ. ಆದರೆ

ನನ್ನ ಪುಣ್ಯ ನಿತ್ಯ ನಿರತಿಶಯವಾದ ಪೂರ್ಣ ಪರಮಾನಂದಕ್ಕೆ ಹೇತುವಾದ ಪುಣ್ಯ. ಈ ಪುಣ್ಯ ಸಾಮಾನ್ಯವೆ ? ಪರಿಪೂರ್ಣ ಪರಮಾನಂದ ಪರಬ್ರಹ್ಮವೇ ಬ್ರಹ್ಮಾಂಡವನುದ್ಧರಿಸಲು ಕಿನ್ನರಯ್ಯನ ನಾಮವ ಧರಿಸಿ ಬ್ರಹ್ಮವೇತ್ತನಾಗಿ ಬ್ರಹ್ಮಾನಂದದಲ್ಲಿರುವ ವಿಮಲ ಜ್ಯೋತಿಯೆ ನನಗೆ ಸೋದರನಾದುದು ನನ್ನದೆಂಥ ಪುಣ್ಯ, ನನ್ನದೆಂಥ ಭಾಗ್ಯ!

ತನ್ನ ಪರಮ ಜ್ಞಾನ ರೂಪ ಒರೆಗಲ್ಲಿಗೆ ನನ್ನ ಅನುಭವರೂಪಿ ಸುವರ್ಣವ ತಿಕ್ಕಿ ತಿಕ್ಕಿ ನೋಡಿ, ಇದು ನಿರ್ವಾಣದ ನಿಜಾನಂದದ ನಿಲುವುಳ್ಳ ಸರಿಯಾದ ಒರಿ ಬಂದಿದೆಯೋ ಹೇಗೆಂಬ ಪರೀಕ್ಷಾಗಾರನ ಕೈಯಲ್ಲಿದ್ದುದು ಸಾಮಾನ್ಯ ಪುಣ್ಯವೆ ! ಇದು ಸಾಮಾನ್ಯ ಭಾಗ್ಯವೆ ! ಸ್ಥಾವರ ಜಂಗಮ ಜಗವು ಲಿಂಗಮಯವು; ಲಿಂಗಾಂಗವು ! ಲಿಂಗಸ್ವರೂಪ ಲಿಂಗಾನಂದವೆಂದು ತನ್ನ ಅಖಂಡ ಜ್ಞಾನ ರೂಪ ಒರೆಗಲ್ಲಿಗೆ ನನ್ನ ಸಮರತಿ ಸಮ ಭಾವವುಳ್ಳ ಸುವರ್ಣವನ್ನು ಒರೆದೊರೆದು ನೋಡಿ ತನ್ನ ಅಖಂಡೈಕರಸವೆಂಬ ನಿರ್ವಾಣದ ಒರಿಗೆ ಬಂದಿದೆಯೋ ಹೇಗೆಂಬ ಕಳಕಳಿಯ ಕಿನ್ನರಯ್ಯ ಸೋದರನಾದುದು ಸಾಮಾನ್ಯ ಪುಣ್ಯವೇ?

ಮರ್ತ್ಯಲೋಕ, ದೇವಲೋಕವೆಂಬ ಮಾಯಾ ಸೀಮೆಯನ್ನು ಕಿತ್ತೊಗೆದು ನಿಸ್ಸೀಮವಾದ ಮಹಾಲಿಂಗವೇ ಸರ್ವಲೋಕಂಗಳ ಅಂಗಾಂಗ ಮರ್ತ್ಯಲೋಕವು ಮಹಾಲಿಂಗದ ಅಂಗ, ದೇವಲೋಕವು ಮಹಾಲಿಂಗದ ಅಲ್ಲಿರುವ ಜೀವರುಗಳೆಲ್ಲ ಮಹಾಲಿಂಗದ ಸ್ವರೂಪವೆಂದು ಮಹಾಲಿಂಗದ ಘನಾನಂದದಲ್ಲಿರುವ ಸೋದರ ಸಿಕ್ಕುದು ಸಾಮಾನ್ಯ ಪುಣ್ಯವೆ !

ಕಳವಳದ ಕಾಯವಾಗಬಾರದು ಪ್ರಾಣದ ಮಾಯವಾಗಬಾರದು ಪರಿಶುದ್ಧ ನಿರ್ವಾಣದ ಮನವಾಗಬೇಕೆಂದು ಒರೆದು ನೋಡುವ ನಿರುಪಮ ಜ್ಞಾನಿ ಕಿನ್ನರಯ್ಯ ನನಗೆ ಸೋದರನಾದುದು ಸಾಮಾನ್ಯ ಪುಣ್ಯವೆ, ಸಾಮಾನ್ಯ ಭಾಗ್ಯವೆ ?

**ಏಳೇಳು ಜನ್ಮದಲ್ಲಿ ಶಿವಭಕ್ತರೆ ಬಂಧುಗಳೆನಗೆ :** ಇದು ಸಾಮಾನ್ಯ ಪುಣ್ಯವೆ ? ಶಿವಭಕ್ತರೆಂಬುದು ನಿರಂತರವಾಗಿರುವ ನಿರಾತಂಕ ಬೆಳಗಿನ ನಿಜ ನಿವಾಸ, ಶಿವಸುಖದ ನಿವಾಸ. ಇವರು ಶಿವಾನುಭಾವ ಸಂಪನ್ನರು. ಸದ್ಭಕ್ತಿ ಸಂಪನ್ನರು ; ಶಿವಾನುಭವಿಗಳು. ಶಿವ ತತ್ವದ ಸಮ್ಯಕದರ್ಶರು, ಶಿವ ಸ್ವರೂಪರು, ಸಮಸ್ವರೂಪವಾಗಿರುವ ಸತ್‌ಸ್ವರೂಪರು. ಇದ್ದಕ್ಕಿದ್ದಂತಿರುವ ನಿಸ್ಸೀಮರು, ನಿರ್ವಿಕಾರಿಗಳು. ಸವೆಯದ ಸುಖ ಸ್ವರೂಪವಾಗಿರುವದರಿಂದ ಇವರ ದೃಷ್ಟಿಯಲ್ಲಿ ದೇಹವೆಂಬುದಿಲ್ಲ, ದೇಹಿ ಎಂಬುದಿಲ್ಲ, ವಿಭಾಗ ದೃಷ್ಟಿ ಮುನ್ನಿಲ್ಲ , ಇವರಲ್ಲಿ ಮಾಯಿಕಕ್ಕಿಂಬಿಲ್ಲ , ಇವರು ಜೀವಿಗಳ ವರ ಜಾಗೃತ ಮಾಡುವ ಮಹಾನುಭವಿ ಮಹಾಂತರು. ಇವರಿಂದಲೆ ಮಾನವ ಜಾಗೃತವಾಗುವುದು. ಮಲಗಿದವನು ಜಾಗೃತವಾಗುವದು ನಿಜವಾದ ಜಾಗೃತವಲ್ಲ. ಜಾಗೃತನಾಗಿದ್ದು ಜಾಗೃತವಾಗಬೇಕಾಗಿದೆ. ಈ ಜಾಗೃತವೆಂದರೆ ಜ್ಞಾನ ಜಾಗೃತ. ವರ ಜಾಗೃತ, ಸ್ವರೂಪ ಜಾಗೃತ. ಜಾಗೃತದ ಜಾಗೃತೆ ಎಂದರೆ ಏಳು ಏಳು ಈ ಅಜ್ಞಾನವೆಂಬ ನಿದ್ದೆಯಲ್ಲಿ ಎಷ್ಟು ಕಾಲ ಮಲಗುವದು; ಇಲ್ಲಿ ಮಲಗಿದಷ್ಟು ಹಾನಿಯೆ. ಈ ಅಜ್ಞಾನ ರೂಪ ನಿದ್ರೆಯಲ್ಲಿದ್ದವ ನೀನಾರು? ಈ ನಿದ್ರೆಗೂ ನಿನಗೂ ಸಂಬಂಧವೆ? ಅಥವಾ ಅಜ್ಞಾನದ ಕಾರ್ಯವಾದ ಜಾಗೃತ ಸ್ವಪ್ನಕ್ಕಾಗಲೀ ಇವುಗಳ ಅಭಿಮಾನಿಗಳಾದ ವಿಶ್ವ ತೈಜಸ್ ಪ್ರಾಜ್ಞರೆಂಬ ಜೀವರುಗಳಿಗೂ ನಿನಗೂ ಸಂಬಂಧವೆ? ಕೊನೆಗೆ ಈ ಜೀವರುಗಳಾದರೂ ನಿಜವೆ? ಇವರುಗಳ ಅವಸ್ಥೆಗಳಾದರೂ ನಿಜವೆ? ಇವರ ಉಪಾಧಿಗಳಾದ ಶರೀರಗಳಾದರೂ ನಿಜವೆ? ಇವುಗಳೆಲ್ಲ ಬರಿಯ ಭ್ರಮೆ. ಅಲ್ಲದೆ ತೋರಿಕೆಯಾದರೂ ನಿಜವಾದುದಲ್ಲ, ಒಂದು

ವೇಳೆ ಭ್ರಮಾತ್ಮ ದೃಷ್ಟಿಗೆ ತೋರಿದರೂ ಅವುಗಳಿಗೆ ನೀನು ಸಾಕ್ಷಿ. ನಿಸ್ಸಂಗ, ನಿರ್ಮಾಯ ನಿರ್ಗುಣ, ನಿರವಯ, ನಿರ್ವಿಕಾರ ಘನ ಚೈತನ್ಯನಾದ ಲಿಂಗಸ್ವರೂಪ ಚಿದ್ಘನ ಚಿದಾಕಾಶ ಸ್ವರೂಪನೆಂದು ಸ್ವರೂಪ ಜಾಗೃತ ಮಾಡುವವರೆ ಶಿವಭಕ್ತರು. ಇವರೆ ಸ್ವಸುಖ ಸಂಬಂಧದ ಸಂಬಂಧಿಕರಾದುದರಿಂದ ಶಿವಭಕ್ತರೆ ಬಂಧುಗಳಾದುದು ನನ್ನದೆಂಥ ಪುಣ್ಯ.

ಇದಲ್ಲದೆ ಮಹಾಲಿಂಗರೂಪಿ ಚೆನ್ನಮಲ್ಲಿಕಾರ್ಜುನನೇ ನನ್ನ ಗಂಡನಾದುದು ನನ್ನದೆಂಥ ಭಾಗ್ಯ ನನ್ನ ಗಂಡ ನಿಃಕಲ ಘನ, ಅಭೇದ್ಯ ಘನ, ಆದಾಹ್ಯ ಘನ, ಅಕಲಂಕ ಘನ. ಅಲ್ಲಿ ಕೂಡಿಸುವ ಪದವಿಲ್ಲ, ಕೆಡಿಸುವ ಮಾಯಿಕವಿಲ್ಲ, ನಿಸ್ಸೀಮವು. ಇಲ್ಲಿ ಸಾಕಾರ ನಿರಾಕಾರ ಹೇಗೆ ಸಾಧ್ಯ? ಗುಣ ಗುಣಿ ಹೇಗೆ ಸಾಧ್ಯ. ಇದು ಅಚಿಂತ್ಯ ನಿಲಯ, ಅಕ್ಷಯ ಸುಖವಾದುದರಿಂದ ನನ್ನದು ಮಹಾಭಾಗ್ಯವಲ್ಲವೆ ಎಂದು ಮಹಾದೇವಿಯಕ್ಕಗಳು ಕಿನ್ನರಯ್ಯಗಳ ಬೀಳಕೊಂಡು ಕಲ್ಯಾಣದತ್ತ ಅಭಿಮುಖವಾಗಿ ನಡೆತಂದು ತತ್ತಪುರವಂ ಕಂಡು ಪ್ರಸ್ತಾವದ ವಚನ.

**4**

**ಕಲ್ಯಾಣವೆಂಬುದುನಾರಿಗೆ ಹೋಗಬಾರದು ಹೋಗಬಾರದು ಹೋಗಬಾರದು**
**ಅಸಾಧ್ಯವಯ್ಯಾ, ಆಸೆ ಆಮಿಷವನಳಿದವಂಗಲ್ಲದೆ ಕಲ್ಯಾಣದತ್ತಲಡಿ ಇಡಬಾರದು.**
**ಒಳ ಹೊರಗು ಶುದ್ಧವಾದವರಿಂಗಲ್ಲದೆ ಕಲ್ಯಾಣವ ಹೋಗಬಾರದು.**
**ನಾನೆಂಬುದು ಅರಿದವಂಗಲ್ಲದೆ ಕಲ್ಯಾಣವ ಹೋಗಬಾರದು.**
**ಒಳಗು ತಿಳದು ಚೆನ್ನಮಲ್ಲಿಕಾರ್ಜುನನಿಗೊಲಿದು ಉಭಯ ಲಜ್ಜೆಯಳಿದೆನಾಗಿ**
**ಕಲ್ಯಾಣವ ಕಂಡು ನಮೋ ನಮೋ ಎನುತಿರ್ದೆನಯ್ಯಾ.**

**ತಾತ್ಪರ್ಯ : ಕಲ್ಯಾಣವೆಂಬುದುನಾರಿಗೆ ಹೋಗಬಾರದು ಹೋಗಬಾರದು ಹೋಗಬಾರದು ಅಸಾಧ್ಯವಯ್ಯಾ ಆಸೆ ಆಮಿಷವನಳಿದವಂಗಲ್ಲದೆ ಕಲ್ಯಾಣವು ಹೋಗಬಾರದು :** ಕಲ್ಯಾಣದ ಮಹಿಮೆಯನ್ನು ಕಂಡ ಅಕ್ಕ ಕಲ್ಯಾಣಕ್ಕೆ ಹೋಗುವದು ಸರ್ವರಿಗೆ ಅಸಾಧ್ಯ. ಕೈವಲ್ಯದ ಅಧಿಕಾರಿಗಳಿಗಷ್ಟೆ ಸಾಧ್ಯ. ಉಳಿದವರು ಹೋಗಬಾರದು ಹೋಗಬಾರದು ಹೋಗಬಾರದು ಎಂದು ಮೂರು ಸಾರಿ ಹೇಳಿದ್ದಾಳೆ. ಏಕೆಂದರೆ ವಿಷಾಯಾಸಕ್ತರಿಗೂ ವ್ಯಸನಿಗಳಿಗೂ ಅಸಾಧ್ಯ. ಚಂಚಲ ಸ್ವಭಾವದವರಿಗೂ ಅಹಂಕಾರಿಗಳಿಗೂ ಅಸಾಧ್ಯ ಅಂತರ್ ಬಹಿರ್ ಶುದ್ದವಿಲ್ಲದವರಿಗೂ ಅಸಾಧ್ಯ. ಇಂದ್ರಿಯಂಗಳು ಶುದ್ಧ ಮನಶುದ್ಧ ಭಾವಶುದ್ಧ ಇದ್ದವರು ಲಿಂಗ ದೇವರನ್ನು ತನ್ನೊಳಗೆ ತಿಳಿದು ಶರಣಸತಿ, ಲಿಂಗಪತಿ ಎಂಬುಭಯ ಭಾವರೂಪ ಸೀಮೆಯ ಹಂಗು ಹರಿದು, ನಿಸ್ಸೀಮವಾದಾಗ ಕಲ್ಯಾಣವ ಕಾಣುವನು.

ಕಲ್ಯಾಣವೆಂಬುದು ಕಲ್ಲು, ಕಟ್ಟಿಗೆ, ಕಬ್ಬಿಣ, ಸಿಮೆಂಟಿನಿಂದ ತಯಾರಿಸಿದ ಕಲ್ಯಾಣ ಮಂಟಪವಲ್ಲ. ಇದು ಲೋಕದ ವಿವಾಹರೂಪ ಮಂಟಪವಲ್ಲ, ವಿವಾಹವಲ್ಲ. ಇದು ಶರಣಸತಿ ಲಿಂಗಪತಿ ಎಂಬುಭಯ ಭಾವಂಗಳ ಭಾವಲಿಂಗೈಕ್ಯ ಮಾಡುವ ಕಲ್ಯಾಣ ಮಂಟಪ. ಇದು ಅರುವಿನ ಅರುವಾಗಿ ಜ್ಞಾನಲಿಂಗೈಕ್ಯ ಮಾಡುವ ಕಲ್ಯಾಣ. ಇದುವೆ ಲಿಂಗಾಂಗ ಸಮರಸದ ನಿವಾಸ, ಸರ್ವಮಂಗಳಮಯನಾದ ಘನ ಲಿಂಗದ ಸ್ವಾನುಭವಿಗಳ ನಿವಾಸ,

ಮಹನುಭಾವಿಗಳ ನಿವಾಸ, ನಿಜನಿವಾಸ. ಭಕ್ತರಿಗೆ ಜೀವ ಶಿವರೇಕತ್ವದ ಬೋಧ ಕಾರ್ಯವೇ ಇಲ್ಲಿ ನಡೆಯುವ ಮಂಗಳ ಕಾರ್ಯ, ಇದು ಚಿನ್ಮಯ ಗೋಷ್ಠಿ ಪರತತ್ವ ಗೋಷ್ಠಿ ನಿರಾಳ ನಿರಾಲಂಬನ ಗೋಷ್ಠಿ. ನಿಜಘನನ ಗೋಷ್ಠಿ ಇದುವೆ ಪರಮಾರ್ಥರೂಪ ಪರಮಗೋಷ್ಠಿಯಾದುದರಿಂದ ಇದು ಸಕಲ ಜೀವಿಗಳ ಮಂಗಳಮಯ ಕಾರ್ಯ. ಈ ಘನ ಕಾರ್ಯಕ್ಕೆ ತತ್ವ ಶಿಖಾಮಣಿಗಳು ಬ್ರಹ್ಮವೇತರು, ತತ್ ಸ್ವರೂಪನಾದ ಘನಗಂಭೀರನೆ ಮಂಗಳ ಕಾರ್ಯದ ಅಧಿನಾಯಕ ಅಧಿಪತಿ. ಅಂದರೆ ಶ್ರೀಗುರು. ಶ್ರೀಗುರುವಿನ ಮಂಗಳ ಕಾರ್ಯಕ್ಕೆ ಸಕಲರು ಅಧಿಕಾರಿಗಳೆ. ಇಲ್ಲಿ ಜಾತಿ ಧರ್ಮ ಪಕ್ಷ ಪಂಗಡಗಳಿಗಾಸ್ಪದವಿಲ್ಲ. ಸರ್ವಮಂಗಳಮಯನಾದ ಘನಲಿಂಗ ತತ್ವವನ್ನು ಇದ್ದಕ್ಕಿದ್ದಂತೆ ತಿಳಿಸಿಕೊಡುವುದೆ ಮಂಗಳಕಾರ್ಯ.

ಈ ಮಂಗಳಮಯವಾದ ಬೋಧವನ್ನು ಬಾಲಕ ಬಾಲಕಿಯರು, ಸ್ತ್ರೀ ಪುರುಷರು, ಗಾಯಕರು ಚತುರರು, ಆಸ್ತಿಕರು, ವೈದಿಕರು, ಪರಮಾರ್ಥಪ್ರಿಯರು, ಜಿಜ್ಞಾಸುಗಳು, ಸ್ವಾನುಭವಿಗಳು, ಗುರುವರ್ಗದವರು, ಶಿಷ್ಯವರ್ಗದವರು, ಲಿಂಗವಂತರು, ಜಂಗಮದಯ್ಯಗಳು, ಸರ್ವಮಂಗಳಮಯವಾದ ತಮ್ಮ ಸ್ವರೂಪ ತಿಳಿಯಲು ಅರ್ಹರು. ಆದರೆ ತನುಶುದ್ಧ, ಮನಶುದ್ಧ, ಭಾವಶುದ್ಧವುಳ್ಳವರು ಯಾರೆ ಇರಲಿ ಅವರು ಮಂಗಳಮಯವಾದ ಮಹಾಲಿಂಗವನ್ನು ಧರಿಸಲು ಯೋಗ್ಯರು. ಅಂತವರೆ ಮಹಾಲಿಂಗಧಾರಣ ಮಾಡುವವರು, ಧ್ಯಾನ ಮಾಡುವವರು ಮತ್ತು ಮಹಾಲಿಂಗದ ಸಮಾಧಿ ಸುಖದವರೆಂದರೆ ಅವರೆ. ಎತ್ತನೋಡಿದಡತ್ತ ಮಹಾಲಿಂಗವ ಕಾಣುವ ಮಹಾತ್ಮರು. ಅದಕ್ಕಾಗಿ ಮಹಾತ್ಮರಿದ್ದ ಸ್ಥಾನವದು ಕಲ್ಯಾಣ, ಈ ಕಲ್ಯಾಣವು ಮಾನವ ಕೋಟಿಯನ್ನೇ ಕಲ್ಯಾಣ ಮಾಡುವ ಕೈವಲ್ಯ. ಇದು ಶಿವ ಸುಖದ ನಿಲ್ದಾಣ. ಸ್ವಸುಖದ ನಿಲ್ದಾಣ. ಈ ನಿಲ್ದಾಣಕ್ಕೆ ಮಾನವ ಹೋಗಲೇಬೇಕು, ಹೋಗದ ವಿನಃ ಅತ್ಯಂತ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತರೂಪ ಪ್ರಾಪ್ತಿಯಾಗದು.

ಈ ಕಲ್ಯಾಣದ ಘನತ್ವ ಕಣ್ಣು ವುಳ್ಳವ್ರಿಗೆ ತಿಳಿಯುವುದು. ಗೂಗೆಗೆ ಸೂರ್ಯನ ದರ್ಶನವೆ? ಅವನ ಪ್ರಕಾಶದ ಘನತ್ವವಾದರೂ ತಿಳಿಯದು. ಹಾಗೆ ಅಜ್ಞಾನಿಗೆ ಜ್ಞಾನ ಘನವಂತರ ಘನತ್ವ ಗೊತ್ತಾಗದು. ವಿಷಯಾಸಕ್ತರಿಗೆ ನಿರ್ವಿಷಯ ಮಹಾಪುರುಷರ ಘನತ್ವ ಗೊತ್ತಾಗದು. ಅಲ್ಪಜ್ಞರಿಗೆ ಪೂರ್ಣಜ್ಞಾನಿಗಳ ಘನತ್ವ ಗೊತ್ತಾಗದು. ಅವರು ಮುಂದಿದ್ದರೂ ಕಾಣರು. ಕಾರಣ ಈ ಮಂಗಳಮಯವಾದ ಮಂಟಪಕ್ಕೆ ಬರುವವರಿಗೆ ಆಶೆ-ವಿಷಯದ ಭೋಗಾಸಕ್ತಿಯಿರಕೂಡದು. ಏಕೆಂದರೆ ಆಶೆ ಎಂಬುದು ಮಹಾ ಭಯಾನಕ ಕಾಳರಾತ್ರಿ. ಬಹು ಧೈರ್ಯ ಶಾಲಿಯಿದ್ದರೂ ಇದರಿಂದ ಅಂಜುಬುರುಕನಾಗುವನು. ಇದು ವಿಚಾರವಂತರನ್ನು ಅವಿಚಾರವಂತರನ್ನಾಗಿ ಮಾಡುವುದು. ವೈರಾಗ್ಯವಂತರಿಗೆ ಆಶೆ ಹುಟ್ಟಿಸಿ ಸಂಸಾರಿಗಳನ್ನಾಗಿ ಮಾಡುವದಲ್ಲದೆ ಸದಾಚಾರ ಸದ್ಗುಣಗಳೆಲ್ಲ ನಾಶ ಮಾಡುವುದು. ಆಶೆ ಎಂಬುದೊಂದು ದೊಡ್ಡ ಘೋರಾರಣ್ಯ. ಅಲ್ಲಿ ಮೋಹ ಮದದಿಂದುಕ್ತವಾದ ಮದ್ದಾನೆ ಸದಾ ಘರ್ಜಿಸಿ ಧರ್ಮವನ್ನೇ ಹಾಳುಮಾಡುವುದಲ್ಲದೆ ವಿಷಯಬೋಗವು ಸುಖ ರೂಪವೆಂದು ತಿಳಿದು ಭೋಗದಿಚ್ಛೆ ಮಾಡಿ ಭೋಗವ ಭೋಗಿಸಲು ಹತ್ತುವುದು. ಆಗ ಜನ್ಮ ಜನ್ಮಾಂತರ ಕೂಪ ನರಕವೆಂಬ ಮಹಾನ್ ತಗ್ಗಿನೊಳಗೆ ಬಿದ್ದು ದುಃಖವು ಹೊಂದುವನು.

ಮಾನವ ವಿಷಯ ಭೋಗ ಸುಖದ ನಿಮಿತ್ತ ಯತ್ನ ಮಾಡುವದೆಂದರೆ ದುಃಖಕ್ಕೆ

ಆಮಂತ್ರಣ ಕೊಟ್ಟಂತೆ, ಮೃತ್ಯುವಿಗೆ ಆಮಂತ್ರಣ ಕೊಟ್ಟಂತೆ, ಇದು ಯಾರಿಗಾದರೂ ಸಂತೋಷವನ್ನುಂಟು ಮಾಡಿರುವದೆ? ಹಿಂದಿನವರಿಗಾದರೂ ಸಂತೋಷ ಮಾಡಿರುವದೆ? ಈಗಿನವರಿಗಾದರೂ ಮಾಡಿರುವುದೇ, ಶರೀರವೆಂಬುದು ಕ್ಷಣ ಭಂಗುರ. ಮೃತ್ಯು ಯಾವಾಗಲೂ ಮೃತ್ಯುವಿನ ದವಡೆಯಲ್ಲಿದ್ದುದೆ, ಈ ದೇಹಭಿಮಾನದಿಂದುಕ್ತರಾಗಿ ಭೋಗದಿಚ್ಛೆ ಮಾಡುವುದೆಂದರೆ ಅವನು ಮೂರ್ಖರ ಅಗ್ರಗಣ್ಯ, ದಡ್ಡರ ದಡ್ಡ, ಇಂತವರು ಲಿಂಗಾಂಗ ಸಾಮರಸ್ಯ ತತ್ವ ಬೋಧರೂಪ ಮಂಗಳ ಕಾರ್ಯಕ್ಕೆ ಹೋಗಬಾರದು. ಅಂದರೆ ವಿರತಿತನ ಮುಖ್ಯವಾಗಿರಬೇಕು. ವಿಷಯಾಸಕ್ತಿ ವಿಷಯಲಂಪಟರಾಗದಿರುವದೇ ವಿರತಿ. ಎಲ್ಲಿಯವರೆಗೆ ಸ್ಥಾವರ ಜಂಗಮರೂಪ ಜಗತ್ತಿನ ಸತ್ಯತ್ವ ಬುದ್ಧಿಯಿದೆ. ಅಲ್ಲಿಯವರೆಗೆ ವಿಷಯಾಸಕ್ತಿಯಿದ್ದುದೆ. ಇದು ಹೋಗಬೇಕಾದರೆ ಲಿಂಗಾಂಗ ಸಮರಸ ವಿಚಾರ ಆತ್ಮಾಭಿನ್ನ ಬ್ರಹ್ಮ ವಿಚಾರ, ಚೈತನ್ಯ ವಿಚಾರ, ತಾನಾರೆಂಬ ವಿಚಾರ ಮುಖ್ಯವಾಗಿರಬೇಕು. ವಿಚಾರವೆಂಬುದು ಜ್ಞಾನ ಸೂರ್ಯ, ಅವಿಚಾರವೆಂಬುದು ಅಜ್ಞಾನಂಧಕಾರ. ವಿಚಾರವಿದ್ದಲ್ಲಿ ದುಃಖವಿಲ್ಲ, ಅವಿಚಾರವಿದ್ದಲ್ಲಿ ಸುಖವೂ ಇಲ್ಲ ಶಾಂತಿಯೂ ಇಲ್ಲ. ಎಲ್ಲಿ ಪ್ರಕಾಶವಿದೆ ಅಲ್ಲಿ ಕತ್ತಲೆಯಿಲ್ಲ , ಎಲ್ಲಿ ತಾನಾರೆಂಬ ವಿಚಾರವಿದೆ ಅಲ್ಲಿ ಸಂಸಾರ ಭಯವಿಲ್ಲ . ಅಲ್ಲಿಯೆ ಲಿಂಗಾಂಗ ಸಮರಸ ಜ್ಞಾನ ಸದ್ಭಕ್ತಿ, ಸಮರತಿ, ಸಮಕಳೆ, ಸಮ್ಯಜ್ಞಾನ ಇರುವದರಿಂದ ಸವಿಯದಾನಂದರೂಪ ಸುಖವು ಇದೆ.

ಸವೆಯದ ಸುಖವೆ ಪ್ರಾಪ್ತವಾದಾಗ ಮಾನವ ಸ್ವಭಾವತಃ ಆಶೆ-ಆಮಿಷಗಳನ್ನು ಸೇರುವದಿಲ್ಲ. ಸುಖ ಸ್ವರೂಪನೆ ತಾನಾಗಿರುವುದರಿಂದ ಮಾಯಿಕ ದೃಷ್ಟಿ, ಮಾಯಿಕ ಭಾವ, ಮಾಯಿಕ ಜ್ಞಾನ ಸಹಜ ನಶಿಸಿ ಹೋಗಿರುವದರಿಂದ ಅಭಿಮಾನಕ್ಕಿಂಬಿರದು, ಅಲ್ಲಿ ಸ್ವಸುಖದ ಘನತ್ವ ತಾನೆ ತಾನಾಗಿ ಬೆಳಗುವದರಿಂದ ಅಲ್ಲಿ ದ್ವೈತಕ್ಕಿಂಬಿಲ್ಲವೆಂಬುದು ತನ್ನಿಂದ ತನಗದು ಸಿದ್ಧವಾದುದೆ ಚೆನ್ನಮಲ್ಲಿಕಾರ್ಜುನನಿಗೊಲಿದುದು.

ಆಗ ಶರಣ ಸತಿ ಎಂಬುದಿಲ್ಲ. ಲಿಂಗಪತಿ ಎಂಬುದಿಲ್ಲ, ಎರಡೆಂಬುದು ಅಂದರೆ ಶರಣಸತಿ ಲಿಂಗಪತಿ ಎಂಬ ದ್ವಿತೀಯ ಭಾವಂಗಳೇ ಎರಡು. ಈ ಎರಡೆಂಬುದು ಚೆನ್ನಮಲ್ಲಿಕಾರ್ಜುನನ ಸಾಕ್ಷಾತ್ಕಾರವಾದ ದಿವ್ಯ ದೃಷ್ಟಿಗೆ ಇವೆರಡು ಭಾವಂಗಳು ಪುಸಿ. ಏಕೆಂದರೆ ನಿರಾಲಂಬವು ಆವುದರೊಳ್ ಕೂಡದ ಘನ, ಇದ್ದಕ್ಕಿದ್ದಂತಿದ್ದ ಘನ, ಇಲ್ಲಿ ಉಪಾದಿ ಇದ್ದುದಲ್ಲ ಇಲ್ಲದುದಲ್ಲ ಅಂಟಿದುದಲ್ಲ. ಸಂಗವಿಲ್ಲ , ನಿಸ್ಸಂಗವಿಲ್ಲ , ಇದ್ದಕ್ಕಿದ್ದಂತೆ ಗಗನಾಕಾರದಂತೆ ಇರುವ ಅಖಂಡ ಘನ, ಘನಕ್ಕೆ ಘನವಾಗಿದ್ದ ಚಿನ್ಮಯ ಚಿದೀಶ್ವರ ಚಿದಾಕಾಶವೇ ಕಲ್ಯಾಣ. ಈ ಕಲ್ಯಾಣವ ಕಂಡು ನಮೋ ನಮೋ ಎನ್ನುತ್ತಿರ್ದನು.

5

**ಅಯ್ಯ, ನಿಮ್ಮ ಶರಣರು ಮೆಟ್ಟಿದ ಧರೆ ಪಾವನವಯ್ಯ.**
**ಅಯ್ಯ, ನಿಮ್ಮ ಶರಣರು ಇದ್ದ ಪುರವೆ ಕೈಲಾಸ ಪುರವಯ್ಯಾ.**
**ನಿಮ್ಮ ಶರಣರು ನಿಂದುದೆ ನಿಜ ನಿವಾಸವಯ್ಯಾ.**
**ಚೆನ್ನಮಲ್ಲಿಕಾರ್ಜುನಯ್ಯಾ ನಿಮ್ಮ ಶರಣ ಬಸವಣ್ಣನಿದ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರವಾಗಿ**
**ಆ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದನು .**

**ತಾತ್ಪರ್ಯ:** ಅಯ್ಯಾ ನಿಮ್ಮ ಶರಣರೆಂದರೆ ವಾಙ್ಮನೋತೀತರು. ಶೃತಿಗಗೋಚರರು ನಿರ್ವಿಕಾರಿಗಳು ಉದಯಾಸ್ತವೆಂಬ ವಿರೋಧವಿಲ್ಲ. ನಿರಂತರವಾದ ನಿರಾತಂಕ ಬೆಳಗು. ನಿಸ್ಸೀಮ ಬೆಳಗು. ಸಮಸ್ವರೂಪವಾದ ಮಂಗಳಮಯ ಸತ್‌ಸ್ವರೂಪರು ಅವರಾದುದರಿಂದ ಕಾಯರುಗಳಲ್ಲಾ ಅಕಾಯರುಗಳಲ್ಲಾ ನಿಃಕಾಯರು. ನಡೆದು ನಿರ್ಗಮನಿಗಳು, ನುಡಿದು ನಿಃಶಬ್ದರು. ಅವರ ಮಾತೆಂಬುದು ಜ್ಯೋತಿರ್ಲಿಂಗ, ಜ್ಯೋತಿರ್‌ಲಿಂಗವೆಂಬುದು ಪೂರ್ಣಜ್ಞಾನ ಪರಾತ್ಪರ ಜ್ಞಾನವಾದುದರಿಂದ ಅವರ ದಿವ್ಯ ದೃಷ್ಟಿಯಲ್ಲಿ ಉದಯವಾದುದಿಲ್ಲ ಅಸ್ತವಾದುದಿಲ್ಲ ಅಕಳಂಕರು ಅಪ್ರಮಾಣರಾದುದರಿಂದ ಎಂತಿರ್ದಂತೆ ಪರಶಿವ ನೋಡಾ.

ಸಾಕ್ಷಾತ್ ಪರಶಿವ ಸ್ವರೂಪವೆ ಶರಣ. ಶರಣನ ಸ್ವರೂಪವೆ ಪರಶಿವವಾದುದರಿಂದ ಅವರು ಮೆಟ್ಟಿದ ಧರೆ ಪಾವನ ನೋಡಾ. ಶರಣರಿದ್ದ ಪುರವೆ ಕೈಲಾಸ. ತಾನಾರೆಂದರಿತವರೆ ಶರಣರು, ಅರು ಸ್ವರೂಪನೆ ಶರಣ, ಚಿತ್ರ್ಕಾಶವೆ ಶರಣ, ಚಿದಂಗನೆ ಶರಣ, ಚಿದ್ಘನನೆ ಶರಣ, ಚಿನ್ಮಯನೆ ಶರಣ ಚಿನ್ಮಯನಿದ್ದ ಪುರ ಕೈಲಾಸ.

ಕೈಲಾಸವೆಂದರೆ ಮಾಯಿಕ ಲೋಕವಲ್ಲ. ಅದನ್ನು ಮೇಲೆ ಎನ್ನಲು ಬರದು ಕೆಳಗೆನ್ನಲು ಬರದು, ಭೂರ್‌ಭುವಹ ಸ್ವಹ ಎನ್ನಲು ಬರದು. ಅದು ಒಳ ಹೊರಗೆನ್ನದೆ ಅಖಂಡವಾಗಿ ಸ್ವಯಂ ಪ್ರಕಾಶಮಯವಾದುದು. ವಿಚಾರಿಸುವುಡೆ ಕೈಲಾಸವೆಂಬುದು ಅದು ತನಗಿಂತ ಭಿನ್ನವೂ ಅಲ್ಲ ದೂರವೂ ಅಲ್ಲ, ಸಮೀಪವೂ ಅಲ್ಲ, ತಾನೆ. ಕೈಲಾಸವೆಂದರೆ ಕೇವಲ ಸುಖಮಯವಾದುದು ಆವುದೋ ಅದು ಕೈಲಾಸ. ಕೇವಲ ಸುಖಮಯವಾದುದು ಆವುದೆಂದರೆ ಅದು ತನ್ನ ಸ್ವರೂಪ, ತಾನೆ.

ಅಪಾರವಾದ ಸಚ್ಚಿದಾನಂದ ಸ್ವರೂಪವಾದ ಘನಲಿಂಗದಲ್ಲಿ ಮನವು ಮಗ್ನವಾದುದೆ ಕೈಲಾಸ. ಶರಣರೆಂದರೆ ಅಹಮ್ಮಿಲ್ಲದ ಚಿದಾಕಾಶ ಸ್ವರೂಪವಾದುದರಿಂದ ಕೈವಲ್ಯನಾಥನು ಕೈಲಾಸದಲ್ಲಿ ಗಣನಾಥರಿಗೆ ಕೈವಲ್ಯ ಕೊಟ್ಟವನೆ ಮರ್ತ್ಯಲೋಕದಲ್ಲಿ ಶರಣ ರೂಪವ ಧರಿಸಿ ಆಸ್ತಿಕವಂತರಿಗೂ ಅನನ್ಯ ಭಕ್ತರಿಗೂ ಕೈವಲ್ಯ ಸುಖವನ್ನು ಪ್ರಾಪ್ತರೂಪ ಪ್ರಾಪ್ತಿ ಮಾಡುವದರಿಂದ ಕೈವಲ್ಯನಾಥನೆ ಈತನಾದುದರಿಂದ ಶರಣರಿದ್ದ ಪುರ ಕೈಲಾಸ. ಈತನು, ಅಘಟಿತ ಘಟನಾ ಸಾಮರ್ಥ್ಯವಂತ, ಘನಮಹಿಮ.

ಈ ಘನಮಹಿಮನ ಮೇಲೆ ಅಪಾರ ಭಕ್ತಿಯುಳ್ಳ ಶ್ರದ್ಧಾವಂತರು, ಪೂರ್ವದಲ್ಲಿ ಮಹಾಪಾಪಿಯಾದ ಮಾತಂಗಿ ತಮ್ಮನು ಸುಜ್ಞಾನ ದೇವರ ದರ್ಶನ ಮಾತ್ರದಲ್ಲಿ ಅವರಲ್ಲಿ ಶರಣಾಗತನಾದ ಪ್ರಭಾವದಿಂದ ತನ್ನ ಪೂರ್ವದ ದುಷ್ಕೃತ್ಯಗಳ ಬಿಟ್ಟು ಲಿಂಗಧಾರಣವುಳ್ಳವನಾಗಿ ಲಿಂಗಾಂಗ ಸಮರಸ ಜ್ಞಾನದಿಂದ ನನ್ನಯ್ಯನೆಂಬ ಮಹಾ ಶರಣನಾಗಿರುವನು.

ಅದಕ್ಕಾಗಿ ಮಹಾತ್ಮರೆಂದರೆ ಪರಮಾತ್ಮನ ಅವತಾರವು, ಚಿತ್ಕಲೆಯು ಚಿದ್ಘನವು ಆದುದರಿಂದ ಅನನ್ಯ ಭಕ್ತರಿಗೆಲ್ಲ ತಮ್ಮ ಸುಜ್ಞಾನ ಪ್ರಭೆಯಿಂದ ಲಿಂಗಾಂಗ ಸಮರಸ ಜ್ಞಾನವನ್ನು ಸರಳ ರೂಪದಿಂದ ಸಕಲರಿಗೆ ತಿಳಿಯುವಂತೆ ಅರುಹಿ ಮಹಾಲಿಂಗಿಗಳನ್ನಾಗಿ ಮಾಡಿದರು.

ಶರಣರೂಪಿ ಪರಾತ್ಪರ ಶಿವನಿಗೆ ತನ್ನ ಅನನ್ಯ ಭಕ್ತರನ್ನು ಮಹಾಲಿಂಗಿಗಳನ್ನಾಗಿ ಮಾಡುವುದೇ ಆತನಿಗೆ ಘನವಾದುದ್ದು. ಕಾರಣ ಶರಣರು ನಿಂದುದು ನಿಜ ನಿವಾಸವಯ್ಯಾ.

ಶರಣರೆಂದರೆ ನಿರ್ಮಾಯ ಘನವಾದುದರಿಂದ ದಿಟಸಟೆಯ ಕೂಡದ ಘನ ಅಂಗ ಅನಂಗ ಕಾಣದ ಅದ್ವಿತೀಯ ಮನವಿಲ್ಲದ ಮಹಾಘನ ಮನ ಮೇರೆದಪ್ಪಿದ ಘನ, ನಿಜದರುವಿನ ಘಟ್ಟಿ, ಅಚಿಂತ್ಯನಿಲಯ ಅಕ್ಷಯ ಸುಖ, ಸ್ವಸುಖದ ಸುಖವೆ ತನ್ನ ನಿಜದ ನಿವಾಸ. ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣ ಮಂಗಳ ಮೂರ್ತಿಯಾದುದರಿಂದ ಆತನಿದ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರ. ಇದು ಕ್ಷರಾಕ್ಷರ ಒಂದು ಮಾಡಿದ ಕ್ಷೇತ್ರ. ಮರವರವು ಒಂದು ಮಾಡಿದ ಕ್ಷೇತ್ರ, ಬಂಧ ಮೋಕ್ಷಗಳೊಂದು ಮಾಡಿದ ಕ್ಷೇತ್ರ, ನಿಸ್ಸೀಮ ಕ್ಷೇತ್ರ, ಚೈತನ್ಯ ದೇವನ ಕ್ಷೇತ್ರ. ಅದು ಗಗನಾಕಾರದಂತೆ ಅಖಂಡವಾಗಿರುವ ಜ್ಞಾನಾಮೃತ, ಅಲ್ಲಿ ಅರಿತೆ, ಅರಿಯೆನೆಂಬ ಮರುವರುವಿಗಿಂಬಿಲ್ಲವಾದುದರಿಂದ ನಿರಾಲಂಬ ನಿಲಯ, ಅಚಿಂತ್ಯ ನಿಲಯವಾದುದರಿಂದ ಇದು ಅವಿಮುಕ್ತ ಕ್ಷೇತ್ರ. ಇಲ್ಲಿ ಬದ್ಧ ಬುದ್ಧರೆಂದು ವಿವರಿಸಲು ನಿಲುಕದಾಗಿರುವದರಿಂದ ನಿಜಕ್ಷೇತ್ರ. ಬಸವಣ್ಣನಿದ್ದುದು ಸುಕ್ಷೇತ್ರವಾದುದರಿಂದ ಆನು ಬಸವಣ್ಣನ ಪಾದಕ್ಕೆ ನಮೋ ನಮೋ ಎನ್ನುತ್ತ, ಬಸವರಾಜದೇವರ ಮಹಾತ್ಮೆಯ ಕೊಂಡಾಡುತ್ತ, ಆ ಕಲ್ಯಾಣ ಜ್ಯೋತಿಯ ನಿಜ ನವಾಸವ ಪೊಕ್ಕು ನೋಡುತ್ತಾಳೆ. ಸ್ವಪ್ರಕಾಶದಿಂದ ಪ್ರಕಾಶಿಸುವ ಸ್ವಮಹಿಮ್ನನಾಗಿ ಪರಿಶೋಭಿಸುವ ಅಲ್ಲಮ ಪ್ರಭು ಅಸಂಖ್ಯಾತ ಗಣನಾಥರು, ಮಹಾಲಿಂಗ ಪ್ರೇಮಿಗಳು, ಲಿಂಗಾಂಗ ಸಮರಸವಂತರು ಅದರೊಳ್ ಮಹಾಲಿಂಗವೇ ತಾನಾದ ಪರಮಾನಂದ ರೂಪಿ ಸಂಗನ ಬಸವಣ್ಣನ ಶ್ರೀಮೂರ್ತಿ ಅಖಂಡ ಮೂರ್ತಿಯನ್ನು ಮಹಾದೇವಿಯಕ್ಕಳು ಕಂಡು ಪ್ರಸ್ತಾಪಿಸಿದ ವಚನ.

**6**

**ಅರಸಿ ತೊಳಲಿದರಿಲ್ಲ , ಹರಸಿ ಬಳಲಿದರಿಲ್ಲ ,**
**ಬಯಸಿ ಹೊಕ್ಕರಿಲ್ಲ , ತಪಸ್ಸು ಮಾಡಿದರಿಲ್ಲ ,**
**ಅದು ತನ್ನ ಅಹ ಕಾಲಕ್ಕಲ್ಲದೆ ಸಾಧ್ಯವಾಗದು.**
**ಶಿವನೊಲಿದಲ್ಲದೆ ಕೈಗೂಡುದು. ಚೆನ್ನಮಲ್ಲಿಕಾರ್ಜುನನೆನಗೊಲಿದನಾಗಿ**
**ನಾನು ಸಂಗನ ಬಸವಣ್ಣನ ಪಾದವ ಕಂಡು ಬದುಕಿದೆನು.**

**ತಾತ್ಪರ್ಯ:** ನಿರಾಭಾರಿ ಸದ್ಗುರು ದರ್ಶನ, ಸಮಸ್ವರೂಪಿ ಸ್ವಯಂಭು ಶಿವಯೋಗಿ ದರ್ಶನ, ಲಿಂಗಾಂಗ ಸಮಸರ ಜ್ಞಾನಿ ಶರಣರ ದರ್ಶನ, ಶಿವಭಾವ ಸಂಪನ್ನರ ದರ್ಶನ, ಸದ್ಭಕ್ತರ ದರ್ಶನ, ಚೈತನ್ಯ ಮೂರ್ತಿಯೆ ತಾನಾದ ಜಂಗಮಲಿಂಗದ ದರ್ಶನ, ಸಾಕ್ಷಾತ್ ಶಂಕರನ ಕರುಣೆಯಾದಾಗ ಶಿವಸ್ವರೂಪ ಸಂತರುಗಳ ದರ್ಶನವಾಗುವದು. ಆತನ ಭಕ್ತನಾಗಿ ಆರ್ಥ ಧ್ವನಿಯಿಂದ ಅರಸಿದರಿಲ್ಲ, ಹರಸಿದರಿಲ್ಲ.

ನಾನಾ ತೀರ್ಥಂಗಳಲ್ಲಿ ಅಲೆದಾಡಿದರೂ ಶರಣರ ಪಾದ ಕಾಣುವದು ಅಸಾಧ್ಯ. ಅಘೋರ ತಪಸ್ಸು ಮಾಡಿದರಿಲ್ಲ, ನಾನಾ ವೃತಂಗಳ ಮಾಡಿ ಸಂಕಟಪಟ್ಟರೂ ಅಸಾಧ್ಯ. ಗಿರಿ ಗುಹೆಗಳಲ್ಲಿ ಬಯಸಿ ಹೊಕ್ಕರೂ ದ್ವಿತೀಯ ಶಂಭುವೆನಿಸಿದ ಬಸವಣ್ಣನಪಾದ ಸಿಗುವುದು ಅಸಾಧ್ಯ. ಅದು ತಾನಾಗಿಯೇ ಪಕ್ವ ಕಾಲ ಬಂದಾಗ ಸಾಧ್ಯವಾಗುವದು.

ಪಕ್ವವಾಗದ ವಿನಃ ಫಲ ತೆಳಗೆ ಬೀಳದು. ಅದು ತನ್ನ ಅಹ ಕಾಲಕ್ಕಲ್ಲದೆ ಸಾಧ್ಯವಾಗದು.

ಎನ್ನುವಂತೆ ಶಿವಶರಣರ ದರ್ಶನ ಅನಂತ ಜನ್ಮಂಗಳ ನಿಷ್ಕಾಮ ಪುಣ್ಯಫಲ ಪರಿಪಕ್ವವಾದಾಗ, ಶಿವಕೃಪೆಯಾದಾಗ, ಅದು ಅಂದರೆ ಸಮ್ಯಗ್ಜ್ಯೋತಿ ಬಸವನ ಪಾದವು ತಾನಾಗಿಯೇ ಸಾಧ್ಯವಾಗುವದು. ಇದೇ ಜನ್ಮದಲ್ಲಿ ಸಾಕಷ್ಟು ದೀರ್ಘ ಪ್ರಯತ್ನದಿಂದ, ಯುಕ್ತಿಯಿಂದ ಚತುರತನದಿಂದ ಶರಣರ ಪಾದ, ಸಂತರ ಪಾದವಾದ ಬಸವಣ್ಣನ ಪಾದ ಕಾಣಬೇಕೆಂದರೆ ಅಸಾಧ್ಯ. ಏಕೆಂದರೆ ಶಿವ ದರ್ಶನವಾಗಬೇಕಾದರೆ ಶಿವನೊಲಿದಾಗಲ್ಲವೇ? ಒಲಿಯದ ವಿನಃ ಅವನ ದರ್ಶನ ಅದೆಂತು ಸಾಧ್ಯ!

ಅಪ್ರಮಾಣ ಅಚಿಂತ್ಯಾತ್ಮ ಪ್ರಭುವೆ ಸಾಕಾರರೂಪ ಶರಣ. ನಿರುಪಮ ನಿರಾಳ, ನಿರಂಜನ ಪ್ರಭುವೆ ಸಾಕಾರರೂಪ ಶರಣ. ಈತನು ಚಿನ್ಮಯಾನಂದ ಘನನಾದುದರಿಂದ ಈತನ ಪಾದ ಸಿಗುವದೆಂದರೆ ಶಿವನೊಲಿದ ಚಿನ್ಹ. ಚೆನ್ನಮಲ್ಲಿಕಾರ್ಜುನ ರೂಪ ಇಷ್ಟಲಿಂಗ ಒಲಿದ ಚಿನ್ಹ.

ಇದು ಒಲಿದ ಚಿನ್ಹವೆಂದರೆ ತಾನು ಬದುಕಿದ ಚಿನ್ಹ , ಅಮರನಾದ ಚಿನ್ಹ . ಅಂದರೆ ವ್ಯಕ್ತಾವ್ಯಕ್ತ ಒಂದಾದ ಚಿನ್ಹ . ರೂಪ ನಿರೂಪ ಒಂದಾದ ಚಿನ್ಹ. ಮಾಯ ನಿರ್ಮಾಯ ಒಂದಾದ ಚಿನ್ಹ. ಸರ್ವವು ಲಿಂಗಮಯವು, ಲಿಂಗಾಂಗವು ಲಿಂಗಸ್ವರೂಪವು, ಪೂರ್ಣವು, ನಿಸ್ಸೀಮ ಎಂಬ ಲಿಂಗ ಘನ ಸಾಕ್ಷಾತ್ಕಾರವಾದುದೆ ಬಸವಣ್ಣನ ಪಾದ ದೊರೆತ ಚಿನ್ಹ.

ಅಖಂಡವಾದ ಘನಲಿಂಗದ ಘನತ್ವ ತಿಳಿಯಬೇಕಾದರೆ ಚಿನ್ಮಯರೂಪಿ ಶರಣರ ಸ್ವಾನುಭವವೆ ಮುಖ್ಯವು. ಈ ಸ್ವಾನುಭವ ರೂಪಿ ಪರಮಾಮೃತ ನಮಗೆ ಲಭ್ಯವಾಗಬೇಕಾದರೆ ಅವರು ಒಲಿತಾಗ, ತಮ್ಮ ಹೃದ್ಗತವಾದ ಪರಮಜ್ಞಾನವನ್ನು ನಮ್ಮ ಅನುಭವಕ್ಕೆ ಬರುವಂತೆ ತಿಳಿಸಿದಾಗ, ಅಖಂಡೈಕರಸವಾದ ಸ್ವಾತ್ಮಾನುಭವವಾಗುವದು. ಅದಕ್ಕಾಗಿ ಶರಣರ ದರ್ಶನವಾಗದ ವಿನಃ ನಮ್ಮ ಸ್ವರೂಪದ ಯತಾರ್ಥ ಲಾಭವಾಗಲು ಅಸಾಧ್ಯ. ಕಾರಣ ಸಮ್ಯಗ್ಜೋತಿ ಬಸವ, ಸಮರತಿ ಬಸವ, ಸಮರಸ ಬಸವ, ಸವೆಯದಾನಂದ ಬಸವ ಜ್ಯೋತಿ ಬಸವರಸನ ದರ್ಶನ ಸಹಜ ಆಗುವದು ಅಸಾಧ್ಯ.

ಶಿವನೊಲಿದಾಗ, ಚೆನ್ನಮಲ್ಲಿಕಾರ್ಜುನನೆಂಬ ಇಷ್ಟಲಿಂಗ ಒಲಿದಾಗ ಇವುಗಳ ಪುಣ್ಯ ವಿಶೇಷದ ಫಲಿತಾಂಶವೆ ದ್ವಿತೀಯ ಶಂಭುವಾದ ಬಸವೇಶ್ವರರ ದರ್ಶನ. ಇತ್ತ ಚೈತನ್ಯ ದೇವನಾದ ಜಂಗಮರೂಪಿ ಅಲ್ಲಮಪ್ರಭುವಿನ ದರ್ಶನ. ಇತ್ತ ಷಟ್‌ಸ್ಥಲ ಚಕ್ರವರ್ತಿಯಾದ ಚೆನ್ನಬಸವೇಶನ ದರ್ಶನ. ಇತ್ತ ಮಹಾಪ್ರಸಾದಿಯಾದ ಘನ ಮಹಿಮ ಮಡಿವಾಳ ತಂದೆಯ ದರ್ಶನ. ಇದಲ್ಲದೆ ಶಿವಯೋಗಿ ಸಿದ್ದರಾಮ ಪ್ರಭುವಿನ ದರ್ಶನ. ಕಾಯಕವೆ ಕೈಲಾಸ ಮಾಡಿದ ಶಿವಶರಣ ಅಯ್ದಕ್ಕಿ ಮಾರಯ್ಯನ ದರ್ಶನ. ಒಮ್ಮನದ ಘನತ್ವವ ಕಂಡು ಇಮ್ಮನವ ಸೇರದ ಮಹಾಮಹಿಮೆ ಲಕ್ಕಮ್ಮನ ದರ್ಶನ, ನಿಷ್ಠೆಯಿಂದ ಲಿಂಗ ಪೂಜಿಸಿ ತನ್ನಂಗೈಯ ಪ್ರಭುವಿನೊಳ್ ನಿರವಯಲಾದ ಘನಶಕ್ತಿ ನೀಲಾಂಬಿಕೆಯ ದರ್ಶನ. ಮೋಳಿಗೆಯ್ಯ ಮಹಾದೇವಮ್ಮಳ ದರ್ಶನ. ಜಂಗಮ ದಾಸೋಹಿ ನುಲಿಯ ಚೆಂದಯ್ಯನ ದರ್ಶನ. ಪರಮ ವೈರಾಗ್ಯದ ಘಟ್ಟಿ ಘಟ್ಟಿವಾಳಯ್ಯನ ದರ್ಶನ. ಈ ಅಸಂಖ್ಯಾತ ಮಹಾಗಣಾಧೀಶ್ವರರುಗಳ ದರ್ಶನ. ಶಿವನೊಲಿದಾಗಲ್ಲದೆ ಸ್ವಪ್ರಯತ್ನದಿಂದ ಕಾಣುವುದು ಅಸಾಧ್ಯ. ಈ ಅಸಂಖ್ಯಾತ ಮಹಾಗಣಾಧೀಶ್ವರರು ಮತ್ತು ಬಸವಣ್ಣನವರ ಪಾದ ಕಂಡು ಬದುಕಿದೆನು ಎಂದು ಅಕ್ಕ ಹೇಳಿದ್ದಾಳೆ.

ಮಹಾತ್ಮರ ದರ್ಶನವಾದ ಮಾನವರೆ ಬದುಕಿದವರು. ದೇಹ ಪ್ರಾಣವುಳ್ಳವರಾಗಿ ಬದುಕಿದರೆ ಬದುಕಿದಂತಲ್ಲ ; ಭವದ ಭೀತಿಯಿಂದ ಬಿಡುಗಡೆಯಾಗಿ ಬದುಕಬೇಕು. ನಿರ್ಭಯರಾಗಿ ಬದುಕಬೇಕು ; ಲಿಂಗಾಂಗ ಸಮರಸ ಜ್ಞಾನಿಗಳಾಗಿ, ಲಿಂಗಸುಖಿಯಾಗಿ, ಲಿಂಗದ ಬೆಳಗಿನ ಮಹಾಬೆಳಗು ತಾನಾಗಿ ಬದುಕಬೇಕು.

ಅಂದರೆ ಮಹಾಲಿಂಗದ ಮಹಾನ್ ಸುಖದ ಸುಖಿಯಾಗಬೇಕು; ತಾನಾರೆಂಬುದರಿತು, ತನ್ನ ಸ್ವಯ ಸುಖದ ಸುಖಿಯಾಗಿ ಬದುಕಬೇಕು.

ತನ್ನ ತಾನರಿತವನೆ ಬದುಕಿದವನು. ತನ್ನ ತಾನರಿಯದವನು ಬದುಕಿಯೂ ಸತ್ತವನು. ದೇಹ ಬುದ್ಧಿಯುಳ್ಳವರೆಲ್ಲ ಬದುಕಿಯೂ ಬದುಕದಂತೆ. ಏಕೆಂದರೆ ಸಾವಿನ ಭೀತಿಯುಳ್ಳವರೆಲ್ಲ ಸತ್ತವರೆ. ತಾನಾರೆಂದರಿತು ತನ್ನ ಸ್ವರೂಪದ ಸ್ವಮಹಿಮೆಯಲ್ಲಿ ಸಂಚರಿಸುವವರೆಲ್ಲ ಬದುಕಿದವರು. ಅಮರರು, ಚೀರಂಜೀವಿಗಳು. ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತಿರುವ ಚಿಜ್ಯೋತಿಗಳು.

ಇಂಥ ಪರಮ ಸತ್ ಸ್ವರೂಪದ ಘನತ್ವ ಬಸವಣ್ಣನ ಪಾದದಿಂದ ಪ್ರಾಪ್ತವಾದುದರಿಂದ ಬಸವಣ್ಣನ ಪಾದವ ಕಂಡು ಬದುಕಿದೆನು ಎಂದು ಹೇಳಿದ್ದಾಳೆ.

7

**ಅಯ್ಯಾ, ನಿಮ್ಮ ಸಜ್ಜನ ಸದಾಚಾರ ಕಂಡೆನಾಗಿ**
**ಎನ್ನ ಕಂಗಳ ಪಟಲ ಹರಿಯಿತ್ತಿಂದು.**
**ಅಯ್ಯಾ, ನಿಮ್ಮ ಸಜ್ಜನ ಸದ್ಭಾವರ ಶ್ರೀ ಚರಣಕ್ಕೆರಗಿದೆನಾಗಿ**
**ಎನ್ನ ಹಣೆಯ ಲಿಖಿತ ತೊಡೆಯಿತ್ತಿಂದು.**
**ಚೆನ್ನಮಲ್ಲಿಕಾರ್ಜುನಯ್ಯ, ನಿಮ್ಮ ಶರಣ**
**ಸಂಗನ ಬಸವಣ್ಣನ ಪಾದವ ಕಂಡು**
**ನಿಮಗೆ ನಮೋ ನಮೋ ಎನುತಿರ್ದೆನು.**

**ತಾತ್ಪರ್ಯ :** ಚೆನ್ನಮಲ್ಲಿಕಾರ್ಜುನಯ್ಯಾ ಅಯ್ಯಾ, ನಿಮ್ಮವರೆ ಸಜ್ಜನರು ಸದಾಚಾರರು. ಮಿಕ್ಕವರು ಸಜ್ಜನರಲ್ಲ ಸದಾಚಾರಿಗಳಲ್ಲ. ಮಲಮಯವಾದ ದೇಹಾಭಿಮಾನಿಗಳಿಗೆ ಸಜ್ಜನತ್ವ ಹೇಗೆ ಸಾಧ್ಯ? ದೋಷಿಗಳು ನಿರ್ದೋಷಿಗಳೆಂದೆನಿಸುವದು ಹೇಗೆ ಸಾಧ್ಯ. ದೋಷ ದೃಷ್ಟಿಯುಳ್ಳವರಿಗೆ ಸದಾಚಾರ ಹೇಗೆ ಸಾಧ್ಯ. ದೋಷ ದೃಷ್ಟಿಯೆಂಬುದು ನಾಮರೂಪಂಗಳ ಸತ್ಯತ್ವ ಬುದ್ಧಿ, ಮಾಯಿಕ ನೋಟ ಮಾಯಿಕ ಭಾವ, ಮಾಯಿಕ ಜ್ಞಾನ, ಇದುವೆ ದೃಷ್ಟಿ ದೋಷ. ಈ ದೋಷ ದೃಷ್ಟಿ ರೂಪಿ ಭ್ರಾಂತಿ ಪರಿಹಾರವಾಗಬೇಕಾದರೆ ಸಜ್ಜನ ಸದಾಚಾರರೂಪಿ ಪವಿತ್ರ ದೃಷ್ಟಿ ಕಂಡಾಗ ಹೋಗುವದು.

ಅದಕ್ಕಾಗಿ ಮಾನವ ಸಜ್ಜನ ಸದಾಚಾರವ ಕಾಣಬೇಕು. ಇದು ಭಾವ ಪರಿಶುದ್ಧ ಗಮ್ಯವಾದುದು ಜ್ಞಾನಕ್ರಿಯರಗಮ್ಯವಾದುದು, ಪರಿಶುದ್ಧ ಭಾವನೆ ಸಜ್ಜನತ್ವವಾಗಿದೆ. ಚೈತನ್ಯ ಜ್ಞಾನಕ್ರಿಯೆಯ ಸದಾಚಾರವಾಗಿದೆ. ಅಶುದ್ಧ ವಾಸನೆಯಿಂದುಕ್ತ ಭಾವವೆ ಜನ್ಮಕ್ಕೆ ಈಡು. ಶುದ್ಧ ವಾಸನೆಯಿಂದುಕ್ತವಾದ ನಿರ್ಭಾವವೆ ಜನ್ಮಕ್ಕೆ ಕಾಡುಗಿಚ್ಚು.

ಮಾಯಿಕ ಭಾವದಿಂದ ಹೃದಯ ಕಲ್ಮಶವಾಗುತ್ತದೆ. ವಿಷಯಾಕಾರ ದೃಢವಾಗಿ

ವಿಷಯಿಯಾಗುತ್ತಾನೆ. ಆದ್ದರಿಂದ ವಿಷಯ ವಾಸನೆಯೆ ಪ್ರವೃತ್ತಿಯಾಗುತ್ತದೆ. ಆ ಹೃದಯ ಕಲ್ಮಷ ಹೃದಯ, ಮರವಿನ ಹೃದಯ. ಅಲ್ಲಿ ಸಜ್ಜನತ್ವಕ್ಕೆ ಸ್ಥಾನವಿಲ್ಲ.

ಅದಕ್ಕಾಗಿ ನಿಮ್ಮವರೆ ಸಜ್ಜನರು, ಸದಾಚಾರಿಗಳು. ಅಂದರೆ ಸರ್ವವು ತೊರೆದವರು. ಸಂಗಿಗಳಲ್ಲ, ನಿಸ್ಸಂಗಿಗಳಲ್ಲ. ಮರವಿನ ಅಭಿಮಾನಿಗಳಲ್ಲ, ಅರುವಿನ ಅಭಿಮಾನಿಗಳಲ್ಲ, ನಿಸ್ಸೀಮರು. ಇದ್ದಕ್ಕಿದ್ದಂತಿರುವ ಘನಲಿಂಗದ ಪರಮ ಪ್ರೇಮಿಗಳೆ ಸಜ್ಜನರು. ಅವರ ಸದಾಚಾರವೆಂಬುದು ಸಮಪ್ರೇಮ, ಸಮಬುದ್ಧಿ, ಸಮದೃಷ್ಟಿ , ಭರಿತ ಭಾವ, ಪೂರ್ಣಜ್ಞಾನ, ಪೂರ್ಣಾನಂದಮಯರಾಗಿರುವುದೆ ಸದಾಚಾರ. ಈ ಘನವಂತರ ದೃಷ್ಟಿಯಲ್ಲಿ ಶ್ರೇಷ್ಠರಿಲ್ಲ ಕೀಳರಿಲ್ಲ, ಚಾಂಡಾಲರಿಲ್ಲ, ಬ್ರಾಹ್ಮಣರಿಲ್ಲ, ದೇವತೆಗಳಿಲ್ಲ, ದೈತ್ಯರಿಲ್ಲ , ಮನುಗಳಿಲ್ಲ, ಮುನಿಗಳಿಲ್ಲ. ಬದ್ಧರಿಲ್ಲ ಬುದ್ಧರಿಲ್ಲ. ಅರಿತವರಿಲ್ಲ. ಇರುವುದೊಂದೆ ನಿರಂತರವಾದ ನಿರಾತಂಕವಿಲ್ಲದೆ ಬೆಳಗುವ ಘನಲಿಂಗ ಒಂದೆ ; ಮಹಾಲಿಂಗ ಒಂದೆ. ಅದಕ್ಕಾಗಿ ಅವರು ಸದಾಚಾರ ಸರ್ವತ್ರ ಮಹಾಲಿಂಗವನ್ನೇ ಕಾಣುವುದು.

ಇವರದು ಘನಲಿಂಗಯ್ಯನ ದೃಷ್ಟಿಯಾದುದರಿಂದ ವ್ಯಷ್ಟಿ ಸಮಷ್ಟಿ ದೃಷ್ಟಿ ನಷ್ಟವಾಗಿಹುದು. ಅಂಗ ಅನಂಗವೆಂಬ ವಿಭಾಗ ವಿಕಲ್ಪವು ನಷ್ಟವಾಗಿಹುದು. ಜಗವು ಜಗದೊಡೆಯರೆಂಬ ವಿಭಾಗ ವಿಕಲ್ಪ ನಷ್ಟವಾದುದರಿಂದ ನಿರಂತರ ನಿರಾತಂಕವಿಲ್ಲದೆ ಪ್ರಕಾಶಿಸುವ ಘನಲಿಂಗದ ನೆನಹು ಭರಿತ ಭಾವ ರೂಪ ಸದಾಚಾರವಾದುದು ಕಂಡು, ಎನ್ನ ಕಂಗಳ ಪಟಲ ಹರಿಯಿತ್ತಿಂದು ಎಂದು ಹೇಳಿದ್ದಾರೆ.

ಕಣ್ಣಿನಲ್ಲಿಯೂ ದೋಷಯುಕ್ತ ಕಣ್ಣು ಒಂದು, ನಿರ್ದೋಷಯುಕ್ತ ಕಣ್ಣು ಮತ್ತೊಂದು. ಅನಾಚಾರಿಗಳ ಕಣ್ಣು, ದೋಷಯುಕ್ತ. ಸದಾಚಾರಿಗಳ ಕಣ್ಣು ನಿರ್ದೋಷಯುಕ್ತವಾದುವುಗಳು. ದೋಷಯುಕ್ತ ಕಣ್ಣು ವಿಷಯಾತ್ಮಕ ಕಣ್ಣು, ವಿಷಯಾಸಕ್ತಿ ಭೋಗದ ಕಣ್ಣು, ವ್ಯಸನಿಕಣ್ಣು, ವಾಸನಾ ಕಣ್ಣು, ಅಪ್ರಬುದ್ಧ ಪ್ರಮಾದ ಕಣ್ಣು, ಇದ್ದಕ್ಕಿದ್ದಂತೆ ತಿಳಿಯದೆ ವಿಪರೀತವಾಗಿ ಕಾಣುವ ಕಣ್ಣು, ನಿರ್ವಿಕಾರ ದೇವನನ್ನು ವಿಕಾರ ಮಯನೆಂದು ಕಲ್ಪಿಸುವ ಕಣ್ಣು, ನಿರವಯ ನಿರ್ದೇಹಿಗೆ ದೇಹವ ಕಲ್ಪಿಸುವ ಕಣ್ಣು, ಘನಲಿಂಗವ ಮರೆತು ಮಲಮಯ ಭಂಡಾರವು ಬಹು ಸುಂದರವೆಂದು ತಿಳಿದು ಮಲಮಯದ ವ್ಯಾಮೋಹಿಯಾಗಿರುವ ಕಣ್ಣು ; ಈ ಕಣ್ಣೆ ಭವಕ್ಕೆ ಕಾರಣ, ಭಯಕ್ಕೆ ಕಾರಣ. ರಾಗದ್ವೇಷಂಗಳಿಗೆ ಕಾರಣ. ಇಷ್ಟಾನಿಷ್ಟಕ್ಕೆ ಕಾರಣವಾದುದರಿಂದ ಸಕಲ ಅನರ್ಥಕ್ಕೆ ಇದುವೆ ಕಾರಣವಾದುದರಿಂದ ಈ ಕಣ್ಣು ಅಜ್ಞಾನ ಕಣ್ಣು. ಈ ಕಣ್ಣಿನ ಪಟಲ ಹರಿಯುವದು ಸದಾಚಾರ ಸದ್ವರ್ತನವ ಕಂಡು, ಇಲ್ಲದಿದ್ದರೆ ಇಲ್ಲ. ಅದಕ್ಕಾಗಿ ಸದಾಚಾರಿಗಳ ಕಣ್ಣು ಸದ್ಭಾವ, ಸದ್ಭಕ್ತಿ, ಸದಮಲ ಜ್ಞಾನವುಳ್ಳದ್ದಾದುದರಿಂದ ನಿರ್ದೋಷಯುಕ್ತ ಕಣ್ಣು . ಇದು ಮುಕ್ಕಣ್ಣನ ಕಣ್ಣು , ಮುಕ್ತಾತ್ಮನ ಕಣ್ಣು ಜ್ಞಾನ ಕಣ್ಣು ಸಮದರ್ಶನ ಕಣ್ಣು, ಈ ಕಣ್ಣಿನಲ್ಲಿ ಲಿಂಗಯ್ಯ ನಿರಂತರ. ಲಿಂಗಯ್ಯನಲ್ಲಿ ಈ ಕಣ್ಣು ನಿರಂತರ. ಇಲ್ಲಿ ಅಖಂಡತ್ವ ಸಿದ್ಧಿಯಾದುದರಿಂದ ಕಣ್ಣು ಲಿಂಗ ಒಂದೆ. ಅದಕ್ಕಾಗಿ ಸಜ್ಜನ ಸದಾಚಾರ ದರ್ಶನದಿಂದ ಅಜ್ಞಾನಯುಕ್ತ ಸಕಲ ವ್ಯವಹಾರಂಗಳ ದೋಷದೃಷ್ಟಿಯು ತಾನಾಗಿ ನಾಶವಾಗುವವು.

ಅಯ್ಯ, ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಸಜ್ಜನ ಸದ್ಭಾವಿಗಳ ಶ್ರೀಚರಣಕ್ಕೆರಗಿದೆನಾಗಿ ಎನ್ನ ಹಣೆಯ ಲಿಖಿತ ತೊಡೆಯಿತ್ತಿಂದು :

ಸದ್ಭಾವಿಗಳೆಂದರೆ ನಿನ್ನ ಭರಿತಭಾವದವರು. ನಿನ್ನ ಹೊರತು ಅನ್ಯವ ಕಾಣದವರು.

ಏಕೆಂದರೆ ಯತಾರ್ಥವರಿತವರು. ಅವರಿಗೂ ನಿನಗೂ ಬೇಧವಿಲ್ಲ. ನೀನು ಅವರಲ್ಲಿ ವಾಸವಾಗಿಪ್ಪ ಕಾರಣ ನಿಮ್ಮವರು. ಅವರ ಸಾಕ್ಷಾತ್ಕಾರವೆ ನಿನ್ನ ನಿಜ ನಿವಾಸ. ಅಲ್ಲಿ ಮಾಯಿಕಕ್ಕಿಂಬಿಲ್ಲ. ವಿಭಾಗಕ್ಕಿಂಬಿಲ್ಲ. ನಿನ್ನ ನಿಜ ನಿವಾಸವೆಂಬುದು ಬಂದುದಲ್ಲ ಹೋದುದಲ್ಲ , ಸದಾ ಇದ್ದಕ್ಕಿದ್ದಂತಿರುವ ನಿರಂತರ ಬೆಳಗು. ಅವರ ಭಾವವೇ ನಿನ್ನ ಭಾವಾತೀತದ ಇರವು. ನಿನ್ನ ಇರುವೆ ಅವರ ಭಾವವಾದ್ದರಿಂದ ಭರಿತವಾವಿಗಳು, ಸದ್ಭಾವಿಗಳು.

ಸದ್ಭಾವವೆಂಬುದು ಸಕಲ ಭಾವಂಗಳಿಗೆ ಮೀರಿದುದು. ಅದು ಅಂದು ಇಂದು ಎಂದೆಂದು ಇದ್ದಕ್ಕಿದ್ದಂತಿದ್ದ ನಿಜ ಸ್ವರೂಪ. ಏನೊಂದಾದುದಲ್ಲ ಹೋದುದಲ್ಲಾ. ಇಲ್ಲಿ ವಿಚಾರಕ್ಕಿಂಬಿಲ್ಲ ಅವಿಚಾರಕ್ಕಿಂಬಿಲ್ಲ. ಕಲ್ಪನೆಯಿಲ್ಲ. ಅದು ಅವರ್ಣೀಯವಾದುದು.

ಅವರ್ಣೀಯವಾದುದು ಮತಾಂತರಗಳಿಂದತೀತವು, ಪಕ್ಷಾಂತರಗಳಿಂದ ಅತೀತವು, ಸತ್ಯಾಸತ್ಯವೆಂಬ ವಿಭಾಗಕ್ಕತೀತವು. ಅದು ಸಕಲದರೊಳ್ ಭರಿತವು, ಅಚಲವು, ಅವಿಕಾರವು, ನಿಸ್ಸೀಮವು. ಅದಕ್ಕಾಗಿ ಅಕ್ಕನು ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮವರು ಸದ್ಭಾವಿಗಳು. ಸದ್ಭಾವಿಗಳೆಂದರೆ ಅಸಾಮಾನ್ಯರು ಅಗಮ್ಯರು ಅಪ್ರತಿಮರು. ಅವರ ದಿವ್ಯ ದೃಷ್ಟಿಯಲ್ಲಿ ಉದಯವಾದುದು ಅಸ್ತವಾದುದಿಲ್ಲ, ಶುದ್ಧವಿಲ್ಲ ಅಶುದ್ಧವಿಲ್ಲ, ಕಾಣಿಸಿಕೊಳ್ಳುವುದಿಲ್ಲ, ಕಾಣುವುದಿಲ್ಲ. ದೃಶ್ಯವಿಲ್ಲ, ದೃಕ್ಕಿಲ್ಲ ಅವರಿಗೆ ಸ್ತುತಿ ಅಷ್ಟೆ, ನಿಂದೆ ಅಷ್ಟೆ, ಮಾನವಷ್ಟೆ ಅಪಮಾನವಷ್ಟೆ, ಶತೃಗಳಷ್ಟೆ ಮಿತ್ರರಷ್ಟೆ, ತನ್ನವರಷ್ಟೆ ಅನ್ಯರಷ್ಟೆ, ಬದ್ಧರಷ್ಟೆ ಬುದ್ಧರಷ್ಟೆ, ಬದುಕಿದುದಷ್ಟೆ ಸತ್ತುದಷ್ಟೆ , ಸರ್ವಸಮ ಸ್ವರೂಪರಾಗಿರುವ ನಿರ್ವಿಕಾರಿಗಳು, ನಿರ್ಮಾಯರು, ನಿರುಪಮರು ಅಂಥ ಘನ ಮಹಿಮರ ಪಾದಕ್ಕೆರಗಿ ಎನ್ನ ಹಣೆಯ ಲಿಖಿತ ತೊಡೆಯಿತ್ತಿಂದು ಯತಾರ್ಥವು.

ಸದ್ಭಾವರುಗಳೆಂದರೆ, ನಿಮ್ಮ ಶರಣ ಸಂಗನ ಬಸವಣ್ಣನ ಘನ ಮಹಿಮನ ಪಾದ, ಘನ ಪಾದ ಸರ್ವ ಮಂಗಳಮಯವಾದ ಸತ್ ಸ್ವರೂಪನ ಪಾದ, ಚೈತನ್ಯ ಪಾದ, ಅಕಲಂಕ ಪಾದ ಜ್ಞಾನ ಸ್ವರೂಪನಾದ ಘನವಂತನ ಪಾದ. ಮಹಾಪಾದದ ಘನತ್ವ ಕಾಣುವದೆ ಪೂರ್ಣದ ಘನತ್ವ, ತನ್ನಿಂದ ಅಂದರೆ ತನಗದು ಸಿದ್ದವಾಗುವದರಿಂದ ಅಖಂಡೈಕರಸ ತಾನೆ. ಸಕಲವು ಅಖಂಡೈಕರಸವೆಂಬ ನಿಸ್ಸೀಮತ್ವ ಸಿದ್ಧಿಸುವದರಿಂದ ಹಣೆಯ ಲಿಖಿತವಳಿಯಲು, ಸದ್ಭಾವಿಗಳ ಶ್ರೀಪಾದ ಅಂದರೆ ಜ್ಞಾನ ಅರ್ಥಾತ್ ಕಳಕಳಿಯ ಬೋಧೆ ಅವಶ್ಯವಾಗಿ ಬೇಕು. ಹಣೆಯ ಲಿಖಿತ ಸ್ವರೂಪದ ಮರವಿನಲ್ಲಿ ತಯ್ಯಾರಾಗಿಹುದು. ದೇಹ ಬುದ್ಧಿಯಲ್ಲಿ ಹುದುಗಿಹುದು. ಮಾಯಿಕ ಜ್ಞಾನದಲ್ಲಿಹುದು. ಮಾಯಿಕ ಜ್ಞಾನವೆಂದರೆ ಭೇದ ಜ್ಞಾನದಿಂದುಕ್ತವಾಗಿರುವದು. ಜಗತ್ತು ಸತ್ಯ, ಜೀವ ಬ್ರಹ್ಮರುಗಳ ಭೇದ ಸತ್ಯ, ಜೀವ ಜೀವರುಗಳ ಭೇದ ಸತ್ಯ, ಪಿಂಡಾಂಡ ಬ್ರಹ್ಮಾಂಡ ಸತ್ಯವೆಂಬ ಮಾಯಿಕ ದೃಷ್ಟಿಯಲ್ಲಿ ಪ್ರಾರಬ್ಧ ಹುದುಗಿಹುದು.

ಈ ಭೇದ ಜ್ಞಾನವುಳ್ಳವರು ಅಣಿಮಾದಿ ಸಿದ್ಧಿ ಪುರಷರಿರಲಿ ಹಠಯೋಗ ಬಲದಿಂದ ಸಹಸ್ರಾರು ವರ್ಷ ಬಾಳಿದರೇನು, ಪುಣ್ಯದ ಪ್ರಭಾವದಿಂದ ಸ್ವರ್ಗಲೋಕ ಪಡೆದಿರಲಿ, ಮನು ಮುನಿ ಮಹರ್ಷಿಗಳಾಗಲಿ ತಾವಾರೆಂದರಿಯದೆ ತಮ್ಮ ಸ್ವರೂಪದ ಘನತ್ವ ತಿಳಿಯದೆ ಭೇದ ಜ್ಞಾನವುಳ್ಳವರೆಲ್ಲ ಮಾಯಿಕ ಲೋಕಕ್ಕೊಳ್ಳಪಟ್ಟವರು. ಅವರಿಗೆ ಪ್ರಾರಬ್ಧವಿದ್ದುದೆ. ಕಾರಣ ಅವರಿಗೂ ಕೂಡ ತಾವಾರೆಂಬುದನ್ನು ತಿಳಿಯಬೇಕಾಗಿದೆ. ತಿಳಿಯದ ಹೊರ್ತು ಮಾಯಿಕ

ಲೋಕ, ಮಾಯಿಕ ಭೋಗ, ಮಾಯಿಕದಾಹಕತ್ವ ದೂರಾಗದು.

ಯಾವಾಗ ಅವರು ಘನ ಲಿಂಗದ ಸದ್ಭಾವಿಗಳ ಶ್ರೀ ಚರಣ ಕಾಣುವರು ಆಗ ಮರವಿನುಂದುಕ್ತವಾದ ಭೇದ ಜ್ಞಾನ, ಮಾಯಿಕ ಜ್ಞಾನ, ಪ್ರಕೃತಿ ಪುರಷರೆಂಬ ವಿಭಾಗ ಜ್ಞಾನ, ಗುಣ ಗುಣಿ ಎಂಬ ಭೇದ ಜ್ಞಾನ ಸಹಜ ನಿರಸನವಾಗಿ, ಸೀಮಾತೀತವಾದ ಘನಲಿಂಗದರಿವು ಆಗುವುದರಿಂದ ಸಕಲವು ಚಿದ್ಘನ ಚಿದಾಕಾಶವೆಂಬ ಪೂರ್ಣಜ್ಞಾನವಾದ ಹಣೆಯ ಲಿಖಿತ ಪುಸಿ. ಈ ಪುಸಿ ಲಿಖಿತ, ಜೀವರುಗಳನ್ನು ಅಂಜಿಸುವ ಲಿಖಿತ. ಮಾಯಾ ಲಿಖಿತವೆಂಬುದು ತನ್ನಿಂದ ತನಗದು ಪ್ರತ್ಯಕ್ಷ ಅನುಭವದ ಮಾತಾಗಿದೆ ಎಂದು ಅಕ್ಕ ಸಂಗನ ಬಸವಣ್ಣನ ಪಾದದ ಘನತ್ವ ಕಂಡು ಈ ಪಾದವೆ ನನಗೆ ಶ್ರೇಷ್ಠಾತಿ ಶ್ರೇಷ್ಠ , ಈ ಪಾದವೆ ಶಬ್ದ ಮುಗ್ದನ ಪಾದ, ಘನಪಾದ, ಇವು ನಿಜ ಘನ ನಿಬ್ಬೆರಗಿನ ಪಾದವೆಂದು ಹರ್ಷಿಸಿದ್ದಾಳೆ.

ಈ ಪ್ರಕಾರ ಮಹಾದೇವಿಯಕ್ಕಗಳು ಶ್ರೀಪಾದವ ದರ್ಶನವಾಗಿ ನಿಂದಿರಲು ಬಸವರಾಜ ದೇವರು ಮಹಾದೇವಿ ಅಕ್ಕನ ಕಂಡು, ಪ್ರಭು ದೇವರಿಗೆ ತೋರಿಸಿ, ನುಡಿದ ಪ್ರಸ್ತಾವದ ವಚನ.

**8**

**ಕಾಯದ ಲಜ್ಜೆಯ ಕಲ್ಪಿತವ ಕಳೆದು**
**ಜೀವದ ಲಜ್ಜೆಯ ಮೋಹವನಳಿದು**
**ಮನದ ಲಜ್ಜೆಯ ನೆನಹು ಸುಟ್ಟು**
**ಭಾವದ ಕೂಟ ಬತ್ತಲೆಯೆಂದರಿದು**
**ತವಕದ ಸ್ನೇಹ ವ್ಯವಹಾರಕ್ಕೆ ಹುಗದು**
**ಕೂಡಲ ಸಂಗಮದೇವಯ್ಯ**
**ಎನ್ನ ಹೆತ್ತ ತಾಯಿ ಮಹಾದೇವಿಯಕ್ಕನ**
**ನಿಲುವ ನೋಡಯ್ಯಾ ಪ್ರಭುವೆ .**

**ತಾತ್ಪರ್ಯ:** ನೋಡು ಪ್ರಬುವೆ, ಅಕ್ಕನ ದೆಶೆ ಕಾಯವೆಂಬ ವಿಕಲ್ಪಕ್ಕಿಂಬು ಕೊಡದ ದೆಶೆ ನಿರ್ಮಾಯನ ದೆಶೆ, ನಿರಾಲಂಬನ ದೆಶೆ, ಸರ್ವಭಾವಂಗಳ ತೊರೆದ ದೆಶೆ, ಈ ತಾಯಿ ತತ್ವ ತಾತ್ವಿಕದ ತಿರುಳು, ನೇತಿ ನೇತಿ ತಿರಳು, ಜ್ಞಾನ ವಿಜ್ಞಾನದ ತಿರಳು ಅಂಗ ತಾನಾಗದ ತಿರಳು.

ಲಿಂಗಪತಿ ಶರಣಸತಿ ಎಂಬುಭಯ ಸಮರಸ ಘಟ್ಟಿಯಾದುದರಿಂದ ಲಿಂಗಾಂಗ ಸಮರಸದ ಸವೆಯದ ಸುಖಕ್ಕೆ ಪರವಶನೆಯ್ದ್ದ ಅಕ್ಕ.

ಈ ಘನಶಕ್ತಿಗೆ ಕಾಯದ ನಾಚಿಕೆ ಎಲ್ಲಿಯದು? ಕಾಯದ ನಾಚಿಕೆ ಇಲ್ಲವಾದ ಮೇಲೆ ಇದರ ಮೋಹವಾದರೂ ಎಲ್ಲಿಯದು? ನೆನಹು ಆದರೂ ಎಲ್ಲಿಯದು. ಎಲ್ಲಿ ಲಿಂಗಾಂಗ ಸಾಮರಸ್ಯ ಜ್ಞಾನವಿಲ್ಲ ಅಲ್ಲಿಯೆ ಹೃದಯ ಗ್ರಂಥಿ ಇದೆ. ವಿಚಾರವಿದ್ದಲ್ಲಿ ಅವಿಚಾರಕ್ಕಿಂಬಿಲ್ಲ , ಬೆಳಕ್ಕಿದ್ದಲ್ಲಿ ಕತ್ತಲೆಗಿಂಬಿಲ್ಲ , ಜ್ಞಾನವಿದ್ದಲ್ಲಿ ಅಜ್ಞಾನಕ್ಕಿಂಬಿಲ್ಲ , ಕಲ್ಪನಾತೀತನಲ್ಲಿ ಕಲ್ಪಿತನಿಗಿಂಬಿಲ್ಲ.

ಕಲ್ಪಿತನ ಕಲ್ಪನೆ ಕಳೆಯಬೇಕಾದರೆ ಅಕಲ್ಪಿತನ ಅರುವಾಗಬೇಕು. ಅಕಲ್ಪಿತನೆ ಘನಲಿಂಗ,

ಅದುವೆ ಚೆನ್ನಮಲ್ಲಿಕಾರ್ಜುನ. ಈ ಮಹಾತಾಯಿಯ ತವಕದ ಸ್ನೇಹ ಘನಲಿಂಗದಲ್ಲಿ ನೆಲೆಯೂರಿರುವದರಿಂದ ಅಕ್ಕನ ದಿವ್ಯದೃಷ್ಟಿಗೆ ದೇಹವೆಂಬವುಗಳು ತುಚ್ಛಾ, ಸತ್ತಾ ಸ್ವರೂಪ, ಮಲಮಯ ಭಂಡಾರ. ಮೂತ್ರದ ಚೀಲವೆಂಬುದು ಚರ್ಮದಿಂದ ಆದ ದ್ವಾರ. ರಕ್ತವೆಂಬುದು ದುರ್ಗಂಧದಿಂದುಕ್ತವಾದುದು. ಇದರಲ್ಲಿ ಅಮೇದ್ಯ ಹೊರಗೆ ಬರುವ ದ್ವಾರದಿಂದ ಕಲುಷಿತವಾಗಿದೆ. ಯೋನಿಯಿಂದ ಹಿಡಿದು ಕುಚದ ಪರ್ಯಂತ ನರಕ ಸಾಗರ. ಸಕಲ ದೇಹವೆಂಬ ನರ ಶರೀರ ನರಕದ ಬಿಡಾರ. ಹೀಗೆ ಯಾತಾರ್ಥ ತಿಳಿದ ವೈರಾಗ್ಯದೇವಿ ಸತ್ವಶಕ್ತಿ.

ಈ ಶುದ್ಧ ಸತ್ವ ಶಕ್ತಿಗೆ ಈ ಕಾಯದ ಕಲ್ಪನೆಯಾದರೂ ಇರಬಹುದೆ ? ಇದು ಕಲುಷಿತ ಶರೀರವೆಂಬ ಸರಿಯಾದ ತಿಳುವಳಿಕೆ ಇಲ್ಲ . ಅಲ್ಲಿಯೆ ಇದರ ನಾಚಿಕೆ. ಇದರ ಮೋಹ ಇದರ ನೆನಹು ಇರುವುದು.

ಅಕ್ಕ ತತ್ವವೇತ್ತಳು. ತಾನಾಗದ ಶರೀರವನ್ನು ತಾನೆಂದು ಹೇಗೆ ತಿಳಿಯುವಳು? ಇಂದ್ರಿಯಗಳೆಂಬವು ಪಶುಗಳು. ಮನವೆಂಬುದು ನಗರದ ಸ್ವಾನವೆಂದು ತಿಳಿದವಳು. ಇವುಗಳಲ್ಲಿ ತಾದಾತ್ಮ್ಯ ಹೊಂದುವಳೆ?

ಅದಕ್ಕಾಗಿ ಈ ತಾಯಿಗೆ ಇದು ಕಾಯವೆಂಬ ಕಲ್ಪಿತವಿಲ್ಲ ಕಲ್ಪನೆ ಇಲ್ಲವಾದುದ್ದರಿಂದ ಇದರ ನಾಚಿಕೆ ಇಲ್ಲ . ಜೀವವೆಂಬುದು ತಾನಾಗದ ಅಂಗಾಂಗಗಳನ್ನು ಅವುಗಳ ಧರ್ಮಂಗಳನ್ನು ತಾನೆಂದು ಕಲ್ಪಿಸಿ ಮೋಹದಿಂದುಕ್ತವಾದುದೆ ಜೀವ. ವಿಷಯದ ವ್ಯಸನಿಯಾದುದೆ ಜೀವ, ಮಾಯಿಕದ ವಾಸನೆಯುಳ್ಳುದೆ ಜೀವ. ವ್ಯಷ್ಠಿ ಸಮಷ್ಟಿ ಭಾವವುಳ್ಳುದೆ ಜೀವ, ಪ್ರಕೃತಿ ಪುರುಷರೆಂಬ ವಿಭಾಗ ವಿಕಲ್ಪ ಭಾವವುಳ್ಳುದೆ ಜೀವ.

ಅಕ್ಕ ನಿರ್ಮಾಯ ಭಾವದವಳಾದುದರಿಂದ ಅಂಗಾಂಗಗಳ ಮೋಹಿಯಲ್ಲ, ವಿಷಯಂಗಳ ವ್ಯಸನಿಯಲ್ಲ . ವ್ಯಷ್ಠಿ ಸಮಷ್ಟಿ ಭಾವವುಳ್ಳವುಳಲ್ಲ. ಪ್ರಕೃತಿ ಪುರುಷರೆಂಬ ವಿಕಲ್ಪವಿಲ್ಲವಾದ್ದರಿಂದ ಜೀವ ಲಜ್ಜೆಯ ಮೋಹ ನಿರಸನವಾದ ಚಿನ್ಹ ಎದ್ದು ಕಾಣುವದು ನೋಡಾ. ಮಹಾಲಿಂಗದ ನೆನಹಿನ ಮನವಾದ್ದರಿಂದ ಮಾಯಿಕದ ವಾಸನೆಗಿಂಬಿಲ್ಲ, ನಾನೀನೆಂಬ ಭಾವಂಗಳ ಸುಳುಹಿಲ್ಲದ ಚಿನ್ಹ ಎದ್ದು ತೋರುತ್ತಿದೆ ನೋಡಾ.

ಅಕ್ಕನು ಭಾವಕೂಟದ ಬರಿಯ ಭ್ರಾಂತಿ, ಬಯಲು ಶೂನ್ಯವೆಂದು ತಿಳಿದವಳಾದುದರಿಂದ ಘನಲಿಂಗದ ಸುಖದವಳಾಗಬೇಕೆಂದು. ಇದು ಆತುರದ ಸ್ನೇಹ, ಆತುರದ ವ್ಯವಹಾರವೆಂಬುದು ಗಗನ ಸದೃಶ್ಯವಾದ ಜ್ಞಾನಾಮೃತ ವ್ಯವಹಾರ. ಅಕ್ಷಯಸುಖದ ವ್ಯವಹಾರಕ್ಕೆ ಸಿದ್ಧಳಾದ ಆತುರದ ಬರವು. ಇದು ಭಾವಗಳ ಜ್ಞಾನಗಮ್ಯ, ನಿರ್ಣಯ ಗಮ್ಯವಾದುದ್ದು. ಆಹಾ ಈ ಮಹಾಶಕ್ತಿಯ ಮಹಾತೇಜಸ್ಸು, ಮಹಾವಿರತಿತನವೆ ಅತ್ಯಂತ ಘನಲಿಂಗ ಸಂಗದ ಆತುರದ ಸ್ನೇಹವಿದು ಪ್ರಭುವೆ.

**9**

**ರೂಹಿಲ್ಲದವಂಗೆ ಒಲಿದವರಿಗೆ ತನುವಿನ ಹಂಗುಂಟೆ?**
**ಮನವಿಲ್ಲದವಂಗೆ ಮೆಚ್ಚಿದವರಿಗೆ ಅಭಿಮಾನದ ಹಂಗುಂಟೆ?**
**ದಿಗಂಬರನಿಗೆ ಒಲಿದವರಿಗೆ ಕೌಪೀನದ ಹಂಗುಂಟೆ?**

**ಕೂಡಲಸಂಗಮದೇವಯ್ಯ ಮಹಾದೇವಿಯಕ್ಕನೆಂಬ**
**ಭಕ್ತೆಗೆ ಆವ ಹೊರೆಯೂ ಇಲ್ಲ ನೋಡಾ ಪ್ರಭುವೆ.**

**ತಾತ್ಪರ್ಯ:** ಪ್ರಭುವೆ ರೂಹಿಲ್ಲದವಂಗೆ ಒಲಿದುದು ಸಾಮಾನ್ಯ ಶಕ್ತಿಯೆ? ಇದು ಮಹಾಶಕ್ತಿ, ಅಲೌಕಿಕ ಶಕ್ತಿ. ಈ ಅಕಲಂಕ ಶಕ್ತಿಯ ದೃಷ್ಟಿಯಲ್ಲಿ ಅಕಲಂಕ ವಸ್ತುವನ್ನು ಕಾಣುವುದು ಸಹಜವಲ್ಲವೆ? ಕಲಂಕ ಶಕ್ತಿಯು ಕಲಂಕ ದೃಷ್ಟಿಯುಳ್ಳುದು. ಅದಕ್ಕೆ ಕಲಂಕ ವಸ್ತುವೆ ಕಾಣುವುದು. ಲೋಕವೆಲ್ಲ ಕಲಂಕ ದೃಷ್ಟಿಯುಳ್ಳುದು. ಕಲಂಕಶಕ್ತಿಯುಕ್ತವಾದುದು, ಅದಕ್ಕಾಗಿ ಕಲಂಕರೂಪವನ್ನೆ ಕಾಣುವದರಿಂದ ಜಗವೆಲ್ಲ ತನುವಿನ ಹಂಗಿನಲ್ಲಿದೆ. ಅಭಿಮಾನದ ಹಂಗಿನಲ್ಲಿದೆ, ಕೌಪೀನದ ಹಂಗಿನಲಿದೆ.

ಏಕೆಂದರೆ ಎಲ್ಲಿ ಲಿಂಗಾಂಗ ಸಮರಸ ಜ್ಞಾನದ ವಿಸ್ಮೃತಿ ಇದೆ, ಘನಚೈತನ್ಯವೆಂಬ ಜಂಗಮ ಪ್ರಸಾದ ರೂಪ ಕರುಣಾಜಲದಲ್ಲಿ ತಿರಸ್ಕೃತ ಬುದ್ಧಿ ಇದೆ. ಅಲ್ಲಿಯೆ ಕಲಂಕದೃಷ್ಟಿ ಕಲಂಕಮನ ಸಹಜ.

ಈ ಕಲಂಕ ಮನವೆ ಎಲ್ಲಾ ವಸ್ತುವಾಗಿ ತೋರುತ್ತದೆ. ಭೂತ ಕಾಲದಲ್ಲಿದ್ದುದು ಇದುವೆ, ವರ್ತಮಾನ ಕಾಲದಲ್ಲಿದ್ದುದು ಇದುವೆ, ಭವಿಷ್ಯತ್ಕಾಲದಲ್ಲಿದ್ದುದು ಇದುವೆ. ಇದು ಗಗನಾಕಾರದಂತೆ ಇದ್ದರೂ ಕಲಂಕ ದೃಷ್ಟಿಗೆ ಇಷ್ಟು ಸತ್ಯವಾಗಿ ತೋರುತ್ತದೆ. ಈ ದೋಷಯುಕ್ತ ಮನಸ್ಸು ನಿರ್ದೋಷ ಮನವೆನ್ನುವಂತೆ ಅಜ್ಞಾನಿಗೆ ತೋರುತ್ತದೆ. ಪಾರಮಾರ್ಥ ದೃಷ್ಟಿಯಿಂದ ನೋಡಿದರೆ ಇದು ಇಲ್ಲವೆ ಇಲ್ಲ.

ಅದಕ್ಕಾಗಿ ಈ ತಾಯಿಯು ಪಾರಮಾರ್ಥ ದೃಷ್ಟಿಯುಳ್ಳವಳಾದ್ದರಿಂದ ರೂಪಿದ್ದವನಿಗೆ ಒಲಿತು ತನುವಿನ ಹಂಗಿಲ್ಲದವಳು. ತನುವು ತುಚ್ಛಸತ್ತಾವುಳ್ಳುದು, ಮನವು ತುಚ್ಛ ಸತ್ತಾವುಳ್ಳದು, ಲೋಕವು ತುಚ್ಛ ಸತ್ತಾವುಳ್ಳದು. ಅಹಂ ಇದಂ ರೂಪ ಜಗವಾದರೂ ತುಚ್ಛಸತ್ತಾ ಸ್ವರೂಪವು. ತುಚ್ಛಾ ಸತ್ತಾ ಸ್ವರೂಪವೆಂಬುದು ಗಗನ ಕುಸುಮ ; ಮೊಲದ ಕೋಡು ; ಬಂಜಿಯ ಮಗನ ಸದೃಶವು.

ಅಕ್ಕ ದಿವ್ಯಜ್ಞಾನಿಯಾಗಿರುವದರಿಂದ ಜಗತ್ತೆಂಬುದು ಬಂಜಿಯ ಮಗನ ಸದೃಶವಾಗಿ ಕಾಣುವುದರಿಂದ, ಮನವಿಲ್ಲದವಂಗೆ ಮೆಚ್ಚಿರುವದರಿಂದ, ಪಿಂಡಾಂಡವಾವುದು, ಬ್ರಹ್ಮಾಂಡವಾವುದು, ಪ್ರಕೃತಿ ಆವುದು, ಪುರುಷ ಆವುದು, ಪಂಚ ಭೌತಿಕವಾವುದು, ಪಂಚತನ್ಮಾತ್ರೆ ಆವುದು, ಪಂಚಮುಖ ಆವುದು, ಜಗವಾವುದು, ಜಗದೊಡೆಯರು ಆರು? ಮನಸ್ಸಿನಲ್ಲಿಯೆ ಇವುಗಳ ವಿಸ್ತಾರ.

ಯಾರ ಮನವು ಕೊನೆ ಮೊದಲಿಲ್ಲದ ಘನಲಿಂಗ ಸಂಗಸುಖದಲ್ಲಿ ಲೀನವಾಗಿದೆ. ಅಲ್ಲಿ ಇವುಗಳಾವು ಇಲ್ಲ, ಅದಕ್ಕಾಗಿ ಅಂಥ ಘನಲಿಂಗ ಸುಖಕ್ಕೆ ಮೆಚ್ಚಿದವಳಿಗೆ ಅಲ್ಲಿ ಮಾನವೇತರದು, ಅಪಮಾನ ವೇತರದು, ಪ್ರಿಯವಾವುದು ಅಪ್ರಿಯವಾವುದು, ರಾಗವಾವುದು, ದ್ವೇಷವಾವುದು, ಅಹುದಾವುದು ಅಲ್ಲಾವುದು, ಅನಿತ್ಯವಾವುದು ನಿತ್ಯವಾವುದು, ಅಜ್ಞಾನವಾವುದು ಜ್ಞಾನವಾವುದು, ಬಂಧವಾವುದು ಮೋಕ್ಷವಾವುದು ಇವುಗಳೆಲ್ಲ ಪುಸಿ ಆದ್ದರಿಂದ ಅಭಿಮಾನದ ಹಂಗಿಲ್ಲ.

ಇದಲ್ಲದೆ ಅಕ್ಕ ಒಲಿದುದು ಸ್ವತಃ ಸಿದ್ಧ ದಿಗಂಬರನಿಗೆ ಮತ್ತು ಒಲಿಸಿದುದು ಸ್ವತಃ ಸಿದ್ಧ ದಿಗಂಬರನನ್ನು. ಆತನು ಅಂದು ಇಂದು ಎಂದೆಂದು ದಿಗಂಬರನಿರುವದರಿಂದ ಆವುದರ

ಅವಲಂಬನ ಇಲ್ಲದ ನಿರಾಲಂಬ. ನಿರಾಲಂಬನನ್ನು ಮೆಚ್ಚಿದವಳಿಗೆ ಕೌಪೀನದ ಹಂಗೆಲ್ಲಿಯದು? ಅಕ್ಕಳು ಸ್ವಾವಲಂಬಿಯಲ್ಲ ಪರಾವಲಂಬಿಯಲ್ಲ, ನಿರಾಲಂಬದ ನಿಜತತ್ವವನ್ನು ಮೆಚ್ಚಿದವಳು. ಆದ್ದರಿಂದ ಆ ಶಕ್ತಿಯ ಘನದೃಷ್ಟಿಯಲ್ಲಿ ಈ ಶರೀರವೆಂಬುಪಾಧಿ ಲೋಕವೆಂಬುಪಾಧಿ ಇದ್ದುದಲ್ಲ ಇಲ್ಲದುದಲ್ಲ, ಅಂಟಿದುದಲ್ಲ, ಸಂಬಂಧವಿಲ್ಲ ಸಂಗವಿಲ್ಲ, ಇದ್ದಕ್ಕಿದ್ದಂತೆ ಅಖಂಡವಾಗಿರುವ ಘನಲಿಂಗವ ಮೆಚ್ಚಿ , ಲಿಂಗದೊಳ್ ಮನವು ಮಗ್ನವಾಗಿಹುದು ನೋಡಾ.

ಘನಲಿಂಗವು ಸಕಲ ತೋರಿಕೆಯಿಂದ ಪಾರಾದುದು. ಅಲ್ಲಿ ಜಪದ ಹಂಗಿಲ್ಲ ತಪದ ಹಂಗಿಲ್ಲ, ಧಾರಣ ಧ್ಯಾನದ ಹಂಗಿಲ್ಲ, ಆವಾವ ಹಂಗಿಲ್ಲದ ದಿಗಂಬರನಿಗೆ ಮೆಚ್ಚಿದಾಗ ಕೌಪೀನದ ಹಂಗೇತರದು ? ಅದಕ್ಕಾಗಿ ಮಹಾದೇವಿಯಕ್ಕನೆಂಬ ಭಕ್ತೆಗೆ ಆವಾವ ಹೊರೆಯಿಲ್ಲ, ಭಾರವಿಲ್ಲ ಬಾಧೆಯಿಲ್ಲ, ಸಂಬಂಧವಿಲ್ಲ ಸೂತಕವಿಲ್ಲ, ಏನೇನೂ ಇಲ್ಲ, ಉಪಮಿಸಬಾರದ ನಿಲವು ಪ್ರಭುವೆ. ಎಂದು ಪ್ರಭು ದೇವರು ಮಹಾದೇವಿಯಕ್ಕಗಳ ನಿಲುವ ನೊರೆದೊರೆದು ಹೇಳಿ ತೋರಲು ಪ್ರಭುದೇವರು ಮಹಾದೇವಿಯಕ್ಕನ ಅನುಭಾವ ಸುಖ ಆ ಮಹಾಶಕ್ತಿಯ ಮುಖದಿಂದ ನುಡಿಸುವ ಪ್ರಸ್ತಾವದ ವಚನ.

**10**

**ಉದಮದದ ಯೌವ್ವನವ ನೊಳಕೊಂಡ ಸತಿ ನೀನು,**
**ಇತ್ತಲೇಕೆ ಬಂದೆಯವ್ವಾ? ಸತಿ ಎಂದರೆ ಮುನಿವರು ನಮ್ಮ ಶರಣರು.**
**ನಿನ್ನ ಪತಿಯ ಕುರುಹು ಹೇಳಿದರೆ ಬಂದು ಕುಳ್ಳಿರು, ಅಲ್ಲಾದರೆ**
**ತೊಲಗು ತಾಯೆ. ನಮ್ಮ ಗುಹೇಶ್ವರನ ಚರಣದಲ್ಲಿ**
**ಸಂಗಸುಖ ಸನ್ನಿಹಿತವ ಬಯಸುವರೇ? ನಿನ್ನ ಪತಿ**
**ಯಾರೆಂಬುದು ಹೇಳಾ ಎಲೆ ಅವ್ವಾ .**

**ತಾತ್ಪರ್ಯ:** ಎಲೆ ಅವ್ವಾ, ಗುಹೇಶ್ವರನ ಶರಣರಲ್ಲಿ ಸಂಗ ಸುಖದ ಬಯಕೆ ಇದ್ದರೆ ಸತಿಪತಿಗಳು ಕೂಡಿ ಬರಬೇಕು. ಇಲ್ಲವೆ ಪರಮಾರ್ಥದ ಸಂಪ್ರದಾಯವುಳ್ಳವರಾಗಿರಬೇಕು. ಅಂದರೆ ಗುರುವೆಂಬ ಪತಿ ಶಿಷ್ಯನೆಂಬ ಸತಿತ್ವ ದಿಂದುಕ್ತರಾಗಿರಬೇಕು. ಲಿಂಗಾಂಗ ಸಮರಸವುಳ್ಳ ಜ್ಞಾನಿ ಗುರು ಇರಬೇಕು. ಸದ್ಗುಣ ಸದ್ಭಕ್ತಿಯುಕ್ತರಾಗಿ ಪರಮಾರ್ಥ ತತ್ವದಲ್ಲಿ ಅಪಾರ ಶ್ರದ್ಧೆಯುಳ್ಳವರಾಗಿರಬೇಕು. ಶ್ರೀಗುರುವಿನಲ್ಲಿ ಅನನ್ಯ ಭಕ್ತಿಭಾವವುಳ್ಳವರಾಗಿರಬೇಕು, ಶಿಷ್ಯರಿರಬೇಕು, ಜ್ಞಾನಸಮುದ್ರನಾದ ಶ್ರೀಗುರು ಇರಬೇಕು, ವಿವೇಕ ವೈರಾಗ್ಯ ತಿತಿಷೆ ಉಪರತಿ ಮುಮುಕ್ಷು ಲಕ್ಷಣವುಳ್ಳ ಶಿಷ್ಯನಿರಬೇಕು.

ಇಲ್ಲಿ ವಿಷಯ ವಾಸನೆ ಉಳ್ಳವರಿಗೆ ಸ್ಥಾನವಿಲ್ಲ. ಮೇಲಾಗಿ ನೀನು ನವತರುಣದಿಂದೊಡಗೂಡಿದ ಸ್ತ್ರೀ. ಸ್ತ್ರೀ ಅಂದರೆ ಭೋಗಾಭಿಲಾಷೆಯುಳ್ಳವರು. ವಿಷಯದ ವ್ಯಸನಿಗಳು, ಕಾಮಿಗಳು. ಅವರದು ಹೊರಗೆ ತೋರಿಸುವ ನೋಟ ಬೇರೆ, ಅಂತರಂಗದಲ್ಲಿರುವ ಭಾವ ಬೇರೆ. ಹೊರಗೆ ವಿಶ್ವಾಸ, ಒಳಗೊಮ್ಮೆ ತಮ್ಮ ಅಂತರಂಗದ ಇರುವ ಆರಿಗೂ ತಿಳಿಸುವವರಲ್ಲ. ಅದಕ್ಕಾಗಿ ನಮ್ಮ ಶರಣರು ಸತಿ ಎಂದರೆ ಸೇರರು, ಒಪ್ಪರು. ನಿನ್ನ ಪತಿಯ

ಕುರುಹು ಹೇಳಿದರೆ ಕೂತುಕೊ, ಹೇಳಲು ನಿನಗೆ ಒಪ್ಪಿಗೆ ಇಲ್ಲವಾದರೆ ನೀನು ಹೋಗಬಹುದು.

ವಯಸ್ಸಿಗೆ ಬಂದ ಸ್ತ್ರೀ ಓರ್ವಳು ಸಂಚರಿಸಬಾರದು. ಅದು ಸ್ತ್ರೀ ಸ್ವಭಾವಕ್ಕೆ ಕಲಂಕ, ಗುಹೇಶ್ವರನ ಶರಣರ ಸಂಗ ಸುಖ, ಪರಿಶುದ್ಧ ಅಂತಃಕರಣ ಉಳ್ಳವರಿಗಲ್ಲದೆ, ಕಲ್ಮಷ ಹೃದಯದವರಿಗೆ ಅದು ಸೇರದು. ಮೇಲಾಗಿ ಶರಣರ ಸಂಗಸುಖದ ಅಕ್ಷಯಸುಖ, ನಿರ್ಮಾಯಸುಖ, ಅದು ಸೀಮಾತೀತ ಸುಖ. ಆ ಸುಖ ತನ್ನಿರುವು ಆದ್ದರಿಂದ ತನಗಿಂತ ಭಿನ್ನವೆನ್ನಲು ಬರದು, ಅಭಿನ್ನವೆನ್ನಲು ಬರದು, ಅದು ಸ್ವಯಸುಖ ಸುಖರೂಪ ಸುಖ, ನಿರಂತರ ಸುಖ, ಸುಖ ಸ್ವರೂಪ ತಾನೆ, ಪೂರ್ಣ ಪರಮಾನಂದ ತಾನೆ, ಇಂಥ ಶರಣರ ಸಂಗಸುಖದ ಪಾಲುಗಾರಳು ನೀನಾಗಬೇಕೆಂದಲ್ಲಿ ನಿನ್ನ ಪತಿಯ ಕುರುಹು ಹೇಳಬೇಕು.

**11**

**ಕಾಯ ಸತಿಯೆಂದು ಹೇಸಿ ಕಳದೆ**
**ವಾಯದ ಮನ ಮಾಯೆಯೆಂದು ಹೇಸಿ ಬಿಟ್ಟೆ**
**ವಾಯದ ಸತಿಯೆಂಬ ಸಂದೇಹವೆಮಗೇಕೆ?**
**ಸತಿಯರ ಗೋಷ್ಠಿ ವಿಷ ಕಾಣವ್ವಾ. ಗುಹೇಶ್ವರ**
**ಲಿಂಗದಲ್ಲಿ ನಿನ್ನ ಪತಿಯ ಕುರುಹು ಹೇಳಾ .**

**ತಾತ್ಪರ್ಯ** : ದೇಹ ಸತಿಯೆಂದರೆ ಒಪ್ಪದು, ಏಕೆಂದರೆ ದೇಹವೆಂಬುದು ಹೇಯದ ಗಡಿಗೆ, ಹೊಲಸಿನ ಗಡಿಗೆ, ಅಪವಿತ್ರದ ಗಡಿಗೆ. ಮಲಮೂತ್ರದ ಸತಿಯೆಂದು ಹೇಸಿಬಿಟ್ಟೆ, ಅಪವಿತ್ರಳೆಂದು ದೂರಾದೆ. ದೇಹಬುದ್ಧಿಯಿಂದುಕ್ತವಾದ ಮನವೆ ವಾಯದ ಮನ, ಕಪಟದ ಮನ, ಹಾಳು ಮಾಡುವ ಮನ, ತಂತ್ರಮನ, ಕುಹಕಮನ, ಜಂಭದ ಮನವೆಂದು ಹೇಸಿ ಬಿಟ್ಟೆ. ಇವಳು ವಿಷಯಾಸಕ್ತಳು ವ್ಯಸನಿಯು ಮಾಯಿಯು, ಲಿಂಗಯ್ಯನ ಸತಿಯಳಾಗಲು ಅನರ್ಹಳು, ಅಯೋಗ್ಯಳು, ಎಂಬ ಸಂದೇಹವಾದರೂ ನಮಗೇಕೆಬೇಕು? ಭೋಗಾಭಿಲಾಷೆಯ ಸತಿಯರ ವಿಚಾರವೆಂದರೆ ವಿಷ ಕಾಣವ್ವಾ.

ವಿಷಯ ವಾಸನೆಯೆಂಬುದು ಅಶುದ್ಧ ವಾಸನೆ. ಅಲ್ಲಿ ರಾಗದ್ವೇಷಕ್ಕೆ ಕಡಿಮೆ ಇಲ್ಲ. ನಾಸ್ತಿಕ ಬುದ್ಧಿಗೆ ಕಡಿಮೆ ಇಲ್ಲ, ಅವಿದ್ಯೆಯಂತೂ ಬೇರೂರಿ ಬಿಟ್ಟಿದೆ. ಸತ್ಯ ಸದಾಚಾರದ ಸುಳುಹು ಇಲ್ಲ, ಇಂದ್ರಿಯಂಗಳ ನಿಗ್ರಹವಿಲ್ಲ, ಮನಸ್ಸಿನ ಸಂಯಮತ್ವವಿಲ್ಲ, ಅಲ್ಲಿ ಕಾಮಕ್ರೋಧಾದಿಗಳ ಆಡಳಿತ, ಮದ ಮತ್ಸರದ ಮಂದಿರ, ಸದಾ ಅಸುರೀತನವೆ ತಾಂಡವಾಡುತ್ತಿರುವದು. ಹೀಗಿರುವಾಗ ಸತ್ಯಜ್ಞಾನಾಮೃತದ ಸುದ್ದಿ ಕನಸಿನಲ್ಲಿಯೂ ಸಹ ನೆನಪಾಗದು, ಹೀಗಿರುವ ಸತಿಯಳು ಜಗವನ್ನೇ ನಾಶಮಾಡುವ ಮೃತ್ಯು ಎಂದರೂ ಅಡ್ಡಿಯಿಲ್ಲ. ಅದಕ್ಕಾಗಿ ಲೋಕದ ವಿಚಾರ ಬೇಕಾಗಿಲ್ಲ, ಲೋಕದ ಪತಿಯ ಕುರುಹು ನಮಗೆ ಬೇಕಾಗಿಲ್ಲ, ಗುಹೇಶ್ವರಲಿಂಗದಲ್ಲಿ ನಿನ್ನ ಪತಿಯ ಕುರುಹು ಹೇಳಬೇಕು ನೋಡು ತಾಯೆ.

**12**

**ಹರನೆ ನೀನೆನಗೆ ಗಂಡನಾಗಬೇಕೆಂದು ಅನಂತ ಕಾಲ**

**ತಪಿಸುತ್ತಿದ್ದೆ ನೋಡಾ. ಹಸೆಯ ಮೇಲಣ ಮಾತು**
**ಬೆಸಗೊಳ್ಳಲಟ್ಟಿದರೆ, ಶಶಿಧರನ ಹತ್ತಿರಕೆ ಕಳುಹಿದರೆಮ್ಮವರು.**
**ಭಸ್ಮವನೆ ಹೂಸಿ ಕಂಕಣವನೆ ಕಟ್ಟಿ ಚನ್ನಮಲ್ಲಿಕಾರ್ಜುನ ತನಗೆ ನಾನಾಗಬೇಕೆಂದು.**

**ತಾತ್ಪರ್ಯ:** ಪ್ರಭುವೆ, ಹರನೆ ಗಂಡನಾಗಲು ಅನಂತ ಕಾಲ ತಪಿಸುತ್ತಿದ್ದೆ. ಏಕೆಂದರೆ ನನ್ನ ಗಂಡ ಕಾಲಹರ, ಕರ್ಮಹರ, ದುರಿತಹರ, ಭವಹರ, ಭಯಹರ, ಅಜ್ಞಾನಹರ, ಮಾಯಾಹರ, ವಾಸನಾಹರ, ಇವನೆ ನಿರ್ಮಾಯನು, ನಿರಾಳನು ನಿರಾಲಂಬನು ನಿಸ್ಸೀಮನಾದ ನಿರೂಪನೆ ನನ್ನ ಗಂಡನಾಗಲು ಅನಂತಕಾಲ ತಪಿಸುತ್ತಿದ್ದೆ ನೋಡಾ.

ನನ್ನ ತಪಸ್ಸು ನಿರ್ಮಾಯ ಹರನೊಡಗೂಡಬೇಕೆಂಬ ತವಕವೆ ನನ್ನ ಧ್ಯೇಯವಾಗಿತ್ತು. ನನ್ನ ತಪ್ಪಸ್ಸು ನಿರ್ಮಾಯ ತಪಸ್ಸು. ಕೇವಲ ಜ್ಞಾನಾತೀತ ನಿಃಕಲ ಲಿಂಗರೂಪಿ ಘನಲಿಂಗವೆ ನನ್ನ ಗಂಡನಾಗಬೇಕೆಂಬ ತಪಸ್ಸಲ್ಲದೆ ಅನ್ಯವಲ್ಲ.

ನಾನು ಕಾಯಲಜ್ಜೆಯುಟ್ಟುಕೊಂಡು ತಪಸ್ಸು ಮಾಡಿದವಳಲ್ಲ, ಮಾಯಿಕ ಮನವನಿಟ್ಟುಕೊಂಡು ತಪಸ್ಸು ಮಾಡಿದವಳಲ್ಲ, ಈ ಲೋಕದ ಅಧಿಪತಿಯ ಭಾವವನ್ನಿಟ್ಟುಕೊಂಡು ತಪಸ್ಸು ಮಾಡಿದವಳಲ್ಲ. ತ್ರಿಭುವನ ಅಧಿಪತಿಯ ಆಸೆಯಿಟ್ಟುಕೊಂಡು ತಪವ ಮಾಡಿದವಳಲ್ಲ. ಇವುಗಳೆಲ್ಲ ಪುಸಿಯೆಂದು ಗಗನ ಕುಸುಮವೆಂದು ತಿಳಿದು ಸ್ನೇಹದಿಂದ ದೂರಾದೆ.

ಕೇವಲ ಲಿಂಗಪತಿ ಶರಣಸತಿಯಾಗಬೇಕೆಂದು ಅನಂತಕಾಲ ತಪಿಸುತ್ತಿದ್ದೆ ನೋಡಾ, ನನ್ನ ತಪಸ್ಸಿಗೆ ಪ್ರಾರಂಭವಿಲ್ಲ, ಮುಕ್ತಾಯವಿಲ್ಲ , ವಿಧಿ ಇಲ್ಲ , ನಿಷೇಧವಿಲ್ಲ . ಅನಿಯಮದ ನಿಲವು. ಏಕೆಂದರೆ ನನ್ನ ತಪಸ್ಸು ಸೀಮಾತೀತ ತಪಸ್ಸೆಂಬುದು ತತ್‌ಸ್ವರೂಪನಾದ ನಿರಾಲಂಬ, ನಿಸ್ಸೀಮನೆ ನಿಃಕಲ ಲಿಂಗ. ಈ ಘನಲಿಂಗದ ನೆನಹು ನನ್ನ ತಪಸ್ಸು; ಅವನೊಳ್ ಸಮರಸವಾಗುವ ಚಿಂತನೆ, ಸಾಕ್ಷಾತ್ಕಾರದ ಹಂಬಲದ ಚಿಂತನೆ. ಅನಂತಕಾಲ ಮಾಡಿದುದರಿಂದ ನನ್ನ ಮದುವೆ ಅಂದರೆ ಶರಣಸತಿ ಲಿಂಗಪತಿಯ ಮದುವೆ ಲಿಂಗಾಂಗ ಸಮರಸದ ಮದುವೆ. ಘನಲಿಂಗಸಂಗ ಸುಖದ ಮದುವೆ, ಅಚಿಂತ್ಯಸುಖದ ಮದುವೆ. ಮದುವೆಯಾಗಬೇಕೆಂದು ನಮ್ಮವರಿಗೆ ತಿಳಿಸಲು ಅವರು ಶಶಿಧರನ ಹತ್ತಿರ ಕಳಿಸಿದರು. ನನ್ನ ಶಶಿಧರನ ಹತ್ತಿರ ಕಳುಹಿಸಬೇಕಾದರೆ ಎಮ್ಮವರೆ ಸಾಧ್ಯ. ಪ್ರಕಾಶಮಯನಾಗಿ ಪ್ರಕಾಶಿಸುವ ಪ್ರಭುವಿನ ಹತ್ತಿರ ಕಳುಹಿಸುವವರೆ ಎಮ್ಮವರು. ಈ ಪ್ರಕಾಶ ಒಳಹೊರಗೆನ್ನದೆ ಬೆಳಗುವ ಮಹಾಬೆಳಗು, ಅಖಂಡ ಬೆಳಗು, ಅವಿನಾಶಿ ಬೆಳಗು, ಕಂದದ-ಕುಂದದ ಬೆಳಗು, ನಿರಂತರ ನಿರಾತಂಕವಿಲ್ಲದೆ ಬೆಳಗುವ ಬೆಳಗು, ಸ್ವಯಂ ಬೆಳಗು. ಈ ಸ್ವಯಂ ಪ್ರಕಾಶರೂಪಿ ಶಶಿಧರನ ಹತ್ತಿರ ಕಳಿಸಿ, ಭಸ್ಮವ ಪೂಸಿ, ಕಂಕಣವ ಕಟ್ಟಿ, ಚೆನ್ನಮಲ್ಲಿಕಾರ್ಜುನ ರೂಪಿ ಪ್ರಭುವಿಗೆ ಲಗ್ನ ಮಾಡಿದುದು ಅಧೈರ್ಯವಾಗಿ ಕಾಣುತ್ತೇವೆಂದು ಮುಂದಿನ ವಚನದಲ್ಲಿ ಮಹಾ ತಾಯಿಯೇ ಹೇಳಿದ್ದಾಳೆ.

**13**

**ಪಚ್ಚೆಯ ನೆಲೆಗಟ್ಟು ಕನಕದ ತೋರಣ**
**ವಜ್ರದ ಕಂಭ ಪವಳದ ಚಪ್ಪರವನಿಕ್ಕಿ ಮದುವೆಯ ಮಾಡಿದರು**
**ನಮ್ಮವರೆನ್ನ, ಮದುವೆಯ ಮಾಡಿದರು.**

**ಕಂಕಣ ಕೈದಾರ ಸ್ಥಿರಸೇಸೆಯನ್ನಿಕ್ಕಿ ಚೆನ್ನಮಲ್ಲಿಕಾರ್ಜುನನೆಂಬ**
**ಗಂಡಗೆನ್ನ ಮದುವೆಯ ಮಾಡಿದರು.**

**ತಾತ್ಪರ್ಯ** : ಪ್ರಭುವೆ, ನನ್ನ ಮದುವೆಯ ಮನೆಯ ವೈಭವ ನೋಡು ತಂದೆ. ಇದು ಶಂಕರನ ಮನೆ, ಸ್ವಸುಖದ ಮನೆ, ಇದು ಕೈಲಾಸ ನಿವಾಸ. ಈ ನಿಜ ನಿವಾಸದ ಘನವನೇನೆಂಬೆ ? ಇದು ಪ್ರಶಾಂತ ನಿಲಯವಾದುದರಿಂದ ಎಳೆಯ ಚಿಗುರಿ ನಂದದಿ ಹಸಿರು ಬಣ್ಣದಂದದಿ ಶೋಭಿಸುವ ಮನೆ. ಆ ಮನೆಯ ನೆಲೆಗಟ್ಟು ರತ್ನದ ನೆಲೆಗಟ್ಟು. ಆ ಮನೆಗೆ ಕಟ್ಟಿದ ತೋರಣ ಕನಕದ ತೋರಣ, ಆ ಮನೆಯ ಕಂಬಗಳು ವಜ್ರದ ಕಂಬಗಳು. ಅಲ್ಲಿ ಮದುವೆಯ ಹಂದರಕ್ಕೆ ಹಾಕಿದ ಚಪ್ಪರ ಪವಳ ಚಪ್ಪರವನಿಕ್ಕಿ , ಶಿವಭಕ್ತರು, ಶಿವಭಾವ ಸಂಪನ್ನರು, ಶಿವಜ್ಞಾನಿಗಳು, ಶರಣರು ಶರಣೆಯರು, ಶಿವಯೋಗಿಗಳು ನಿರಾಭಾರಿ ಸದ್ಗುರು ದೇವರು ಇವರೆಲ್ಲರು ಕೂಡಿ ನನ್ನ ಮದುವೆಯ ಮಾಡಿದರು. ನನ್ನದೆಂಥ ಭಾಗ್ಯ. ನನ್ನದೆಂಥ ಪುಣ್ಯ! ಈ ಮದುವೆಗಾಗಿ ನಾನು ಅನಂತಕಾಲ ತಪಿಸುತ್ತಿದ್ದೆನು ನೋಡಾ ಹಾಗೂ ನನ್ನ ಮುಂಗೈಗೆ ಕಟ್ಟಿದ ಕಂಕಣ ಕೈದಾರ ಸಾಕ್ಷಾತ್ ಚೆನ್ನಮಲ್ಲಿಕಾರ್ಜುನನ ರಕ್ಷಾಸೂತ್ರ. ಇದಲ್ಲದೆ ಅಚಲವಾದ ಅಭಯರೂಪಿ ಸ್ಥಿರ ಸೇಸೆಯನಿಕ್ಕಿ ಚನ್ನಮಲ್ಲಿಕಾರ್ಜುನನೆಂಬ ಗಂಡಗೆನ್ನ ಮದುವೆ ಮಾಡಿದರು ಪ್ರಭುವೆ.

ಪ್ರಭುವೆ, ಗುಹೇಶ್ವರ ಲಿಂಗದಲ್ಲಿ ನನ್ನ ಪತಿಯ ಮನೆ, ಲಿಂಗಾಂಗ ಸಮರಸದ ಜ್ಞಾನಾನುಭವವುಳ್ಳ ಮನೆ. ಅದು ಜೀವ ಶಿವರೇಕತ್ವದ ನಿಲಯ. ಅದು ಪ್ರಕೃತಿ ಪುರುಷರೆಂಬ ವಿಭಾಗವ ಕಾಣದ ನಿಲಯ. ಪ್ರಶಾಂತ ನಿಲಯ, ನಿರ್ವಿಕಾರ ನಿಲಯ, ನಿರಾಳ ನಿಲಯ, ನಿರ್ವಾಣ ನಿಲಯ.

ಅದುವೆ ನಿಃಕಲಲಿಂಗ. ಆ ಘನಲಿಂಗದ ಘನವದನೆಂತು ಉಪಮಿಸುವದು ? ನಿಃಶಬ್ದ ಘನ ಗಂಭೀರವು ಅದನೆಂತುಸುರುವುದು. ಬೇರ್ಪಡಿಸಿ ಹೇಳಲು ಇಂಬುಗೊಡದದ ಘನ. ಅದನು ಬೇರ್ಪಡಿಸಿ ಹೀಗೆಯೆ ಎಂದು ಹೇಳುವುದಾದರೂ ಹೇಗೆ ? ನಿರ್ಣಯಕ್ಕೆ ಮೀರಿದ ಘನ. ಅದನ್ನು ಲಕ್ಷಣ, ಲಕ್ಷ್ಯ, ಸ್ವರೂಪವೆಂದು ಹೇಗೆ ಹೇಳುವುದು ? ಜ್ಞಾನಾತೀತ ಘನ ಅದನ್ನು ಅರು ರೂಪವೆಂದು ಹೇಗೆ ಹೇಳುವುದು, ಮರವು, ಅಜ್ಞಾನ ಎಂದು ಹೇಗೆ ಹೇಳುವುದು, ಅದಕ್ಕಾಗಿ ಉಪಮಿಸಲರಿಯೆ, ಅಕಥನೀಯವು. ಏನೆಂದುಸುರಲು ಎಡೆಗೊಡದದ್ದರಿಂದ ಅಮೂರ್ತವು. ಅದು ನಿರಂತರ ಇದಕ್ಕಿದ್ದಂತಿರುವುದರಿಂದ ಪರಮಚ್ಚಟವು. ಅದನ್ನು ಅಂಗನೆನ್ನೆ, ಲಿಂಗನೆನ್ನೆ, ಮಹಾಲಿಂಗನೆನ್ನೆ. ಜೀವನೆನ್ನೆ, ಬ್ರಹ್ಮನೆನ್ನೆ ಸತ್ ಸ್ವರೂಪನೆನ್ನೆ ಅಸತ್ ಸ್ವರೂಪನೆನ್ನೆ. ಅದು ಏನೊಂದಾಗದೆ ಇದ್ದಕ್ಕಿದ್ದ ಹಾಗೆ ಇರುವದರಿಂದ, ಕಾರಣ ಕಾರ್ಯದಿಂದ ಅತೀತ. ಕಲ್ಪಿತ ಕಲ್ಪನೆಗೆ ಅತೀತವಾದುದರಿಂದ ಮನೋವಾಚಾಮಗೋಚರಮ್. ನಿಃಕಲಲಿಂಗವು ನುಡಿಗೆಡೆಗೊಡದ್ದು, ನಡೆಗಿಂಬುಗೊಡದ್ದು, ನಿರ್ಣಯಕ್ಕೂ ಅತೀತ. ಅತೀತ ಎನ್ನುವುದಕ್ಕೂ ಎಡೆಗೊಡದ್ದರಿಂದ ಭಾವಕ್ಕಿಂಬು ಕೊಡದ್ದು. ಅಲ್ಲಿ ಮರವರುವಿಗಿಂಬಿಲ್ಲ. ಅಲ್ಲಿ ಕೂಡಿದುದಿಲ್ಲ ಅಗಲಿದುದಿಲ್ಲ, ಸೀಮೆ ಇಲ್ಲ ಸಂಕೇತವಿಲ್ಲ, ನಾಮವಿಲ್ಲ ಅನಾಮವಿಲ್ಲ, ನಾನು ತಾನು ಮುನ್ನವೆ ಇಲ್ಲ. ಅಲ್ಲಿ ಮಾಟವಿಲ್ಲ ನೋಟವಿಲ್ಲ, ಏನೆಂಬುದೇನು ತಾನು ಮುನ್ನಿಲ್ಲವಾದ್ದರಿಂದ ಧ್ಯಾನವಿಲ್ಲ, ಜ್ಞಾನವಿಲ್ಲ ಅಂದರೆ ಕಥನೆಗೆ ಇಂಬಿಲ್ಲದ ಮಹಾಘನವೆ ನನ್ನ ಲಗ್ನದ ಮನೆಯ ಪಚ್ಚೆಯ ನೆಲೆಗಟ್ಟು ನೋಡಾ. ನನ್ನ ಮದುವೆಯ ಮನೆಗೆ ಕಟ್ಟಿದ ಕನಕದ

ತೋರಣದ ಘನವನೇನೆಂಬೆ ? ಇದು ಅಲೌಕಿಕ ಕನಕದ ತೋರಣ, ಪರಮಾರ್ಥರೂಪಿ ಪರಮ ಜ್ಞಾನದಿಂದ ಶೋಭಿಸುವ ಕನಕದ ತೋರಣ, ಘನಲಿಂಗಯ್ಯನ ಕನಕದ ತೋರಣವಾದುದ್ದರಿಂದ ಇದು ಅಬಾಧಿತ ತೋರಣ, ಅಕಲಂಕ ತೋರಣ, ಕಂದದ ಕುಂದದ ತೋರಣ, ಸರ್ವತ್ರ ಸದಾ ಅಂತರ್ ಬಹಿರ್ ಎನ್ನದೆ ಭರಿತವಾದ ತೋರಣ, ಚಿನ್ಮಯರೂಪಿ ಲಿಂಗಜ್ಞಾನದ ತೋರಣವಾದುದರಿಂದ ಲಿಂಗಜ್ಞಾನದ ಘನ. ಇದು ಗುರು ಘನ. ಗುರು ಕರುಣಾಘನ, ಸರ್ವಸಮನಾಗಿರುವ ಘನ, ಅಪಾರ ಘನ, ದ್ವಿಪದ ಕಾಣದ ಘನ, ಅಚಲ ಘನ, ಇದು ನಿರ್ವಿಕಾರ, ನಿಸ್ಸೀಮವಾದುದರಿಂದ ಸತ್ಯ ಅಮಲ ಶಾಶ್ವತವಾದ ಲಿಂಗಜ್ಞಾನವೆ ನನ್ನ ಲಗ್ನದ ಮನೆಗೆ ಕಟ್ಟಿದ ಕನಕದ ತೋರಣ ನೋಡಾ. ಈ ಕನಕದ ತೋರಣದ ಘನವದನೇನು ವರ್ಣಿಸುವದು ತಂದೆ.

''ಪ್ರಣವಾರೂಢನು, ಪ್ರಣವ ಸ್ವರೂಪನು, ಪ್ರಣವ ಪ್ರಕೃತಿ ಸಂಜ್ಞನು, ಪ್ರಣವ ಷಡಂಗ ಸಮರಸ ನಮ್ಮ ಕೂಡಲ ಸಂಗಮ ದೇವರು '' ಎಂಬ ಜ್ಞಾನವೇ ಕನಕದ ತೋರಣ. ಲಿಂಗಾಂಗ ಸಮರಸ ಜ್ಞಾನವೇ ಪ್ರಣವಾರೂಢ. ಪ್ರಣವರೂಢನೆಂಬುದು ದ್ವಿಪಾದ ಕಾಣದ ಘನ, ಅಂಗ ಲಿಂಗ ಎಂಬ ಸಂಜ್ಞೆ ಸಂಕೇತಗಳ ಕಾಣದ ಘನ. ದೃಶ್ಯ ದೃಕ್ ಕಾಣದ ಘನನಾಗಿರುವುದರಿಂದ ನಿಸ್ಸೀಮನು. ಸಮ ಸ್ವರೂಪವಾದ ಸದ್ವಸ್ತು. ಸಮಕಲೆ ನಿತ್ಯಾನಿತ್ಯ ಕಾಣದ ಘನ, ಮೋಹ ನಿರ್ಮೋಹ ಕಾಣದ ಘನ. ಸಂಗ ನಿಸ್ಸಂಗ ಕಾಣದ ಸಮಕಲೆ ಸಮರತಿ ಸಮದೃಷ್ಟಿ ಸಮ್ಯಜ್ಞಾನವೆ ಪ್ರಣವರೂಢನು ; ಪ್ರಣವ ಸ್ವರೂಪನು. ಅಂದರೆ ಪೂರ್ಣನು ಏನೊಂದಾಗದವನು ಇದ್ದಕ್ಕಿದ್ದಂತಿದ್ದ ಸರ್ವಮಂಗಳಮಯನಾದ ಸ್ವಮಹಿಮನು.

ಪ್ರಣವ ಪ್ರಕೃತಿ, ಪ್ರಣವವನ್ನರಸುವ ಪ್ರಕೃತಿ. ಪ್ರಣವ ಭಾವದ ಪ್ರಕೃತಿ, ಸುಖರೂಪ ಲಿಂಗಯ್ಯನನ್ನು ಅರಸುವ ಪ್ರಕೃತಿ, ಲಿಂಗಯ್ಯನ ನೋಟದ ಪ್ರಕೃತಿ, ಲಿಂಗಯ್ಯನ ಮಾಟದ ಪ್ರಕೃತಿ ಲಿಂಗಯ್ಯನ ಕೂಟದ ಪ್ರಕೃತಿಯಾದುದರಿಂದ ಭರಿತಭಾವದ ಪ್ರಕೃತಿ. ಲಿಂಗಯ್ಯನ ಪ್ರಕೃತಿಯಾದುದರಿಂದ ಸವೆಯದಾನಂದದ ಪ್ರಕೃತಿ, ಅಚಿಂತ್ಯ ಪ್ರಕೃತಿ, ನಿರ್ಮಾಯ ಪ್ರಕೃತಿಯ ಸಂಕೇತವು.

ಪ್ರಣವ ಷಡಂಗ, ಸಮರಸ ಪ್ರಣವ ರೂಢನಾದ ಅಂಗನೆ ಷಟ್‌ಸ್ಥಲರೂಪಿ ಲಿಂಗಾಂಗ ಸಮರಸ ಭಾವರೂಪಿ ಭರಿತದವನಾದುದರಿಂದ ಷಡಂಗ, ಸಮರಸ ಕೂಡಲ ಸಂಗಮದೇವರು ಎಂದು ಹೇಳಿದ್ದಾರೆ. ಘುಡಂಗ ಸಮರಸವೆಂಬುದು ಭರಿತಭಾವ, ಅಖಂಡ ಭಾವ, ಪೂರ್ಣಾತ್ ಪೂರ್ಣವೂ ಆದುದರಿಂದ ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯವೆಂಬ ಷಡಂಗವಾದರೂ ಲಿಂಗಾಂಗ ಸಮರಸ ಜ್ಞಾನದಿಂದುಕ್ತವಾದುದರಿಂದ ಭಕ್ತನಾದರೂ ಕರ್ತೃತ್ವ ಭೋಕ್ತೃತ್ವವನರಿಯದವನು. ಮಹೇಶ್ವರನಾದರೂ ವ್ರತ ನಿಯಮಂಗಳ ಛಲವಿಲ್ಲದವನು. ಪ್ರಸಾದಿಯಾದರೂ ಅರ್ಪಿತ ಅನರ್ಪಿತ ಕಾಣದವನು ಪ್ರಾಣಲಿಂಗಿಯಾದರೂ ಬರಹೋಗುವ ಅನುಭವಿಯಲ್ಲ, ಶರಣನಾದರೂ ಸತಿಪತಿಯೆಂಬ ಭಿನ್ನ ಭಾವವಿಲ್ಲದವನು. ಐಕ್ಯನಾದರೂ ಬೆರೆಸಿ ಭೇದವರಿಯುದವನು. ಏಕೆಂದರೆ ನಿಸ್ಸೀಮ ಸುಖ ಅಖಂಡ ಸುಖವನೊಳಗೊಂಡಿರುವುದರಿಂದ ಕೂಡಲಸಂಗಮನು ಎಂದು ಹೇಳಿದ ಘನವೆ ನನ್ನ ಮದುವೆಯ ಮನೆಗೆ ಕಟ್ಟಿದ ಕನಕದ ತೋರಣ ನೋಡಾ.

ನನ್ನ ಮದುವೆಯ ಮನೆಯಲ್ಲಿ ನಿಂತಿದ್ದ ನೆಲೆಯಿಲ್ಲದ ನಿಲುವು ಗಮನಕ್ಕೆ ನಿಲುಕದ

ಅಗಮ್ಯ ನಿಲುವೆ ವಜ್ರದ ಕಂಬ ನೋಡಾ. ''ಮಹಾಲಿಂಗಮಿದಂ ದೇವಿ , ಮನೋತೀತ ಮಗೋಚರಮ್ ನಿರ್ನಾಮ ನಿರ್ಗುಣಂ ನಿತ್ಯಂ ನಿರಂಜನಂ ನಿರಾಮಯಮ್ ನಿರ್ಮಲಮ್ ನಿಷ್ಕಲಂ ಜ್ಞೇಯಂ ನಿರ್ಭೇದ್ಯಂ ನಿರುಪಾಧಿಕಮ್, ಅದ್ವೈತಾನಂದ ಕ್ಷೀಣಂ ಅಸಾದೃಶ್ಯಮಿದಂ ಶೃಣು ಪ್ರಭುವೆ''

ನಿಮ್ಮ ಮಹಾಲಿಂಗವೆ ನನ್ನ ಮದುವೆ ಮನೆಯಲ್ಲಿ ನಿಂತಿದ್ದ ವಜ್ರದ ಕಂಬ ನೋಡಾ. ಇದರ ಘನ ನಿವೇ ಬಲ್ಲಿರಿ, ಅದು ವಾಣಿಗೆ ಮೀರಿರುವಾಗ ವರ್ಣಿಸುವದದೆಂತು ? ರೂಹು ರೂಪಕ್ಕೆ ಮೀರಿದವನನ್ನು ಅದಾವ ಕಲ್ಪನೆ ಕಲ್ಪಿಸುವುದು, ಗುಣಗಳಿಗೆ ಮೀರಿದವನನ್ನು ಗುಣಿಸುವದೆಂತು, ಅರಸುವದದೆಂತು, ಅನುಸಂಧಾನ ಮಾಡುವದದೆಂತು, ಅಖಂಡೈಕರಸವಾಗಿ ತಾನೆ ತಾನಾಗಿಪ್ಪ ಪರಮಾನಂದ ರೂಪ ಉಳ್ಳದರ ಆದಿ ಅಂತ್ಯವನ್ನು ನೀವೆ ಅರಿತಿರುವಿರಿ ಪ್ರಭು.

ಇದು ನಿಮ್ಮ ಸ್ವಭಾವ. ಇದು ನಿಮ್ಮ ಘನ ಅದಕ್ಕಾಗಿ ನೀವೆ ಬಲ್ಲಿರಿ, ಇದುವೆ ಲಿಂಗಾಂಗ ಸಮರಸ ಸುಖರೂಪವಾದ ಮದುವೆಯ ಮನೆಯಲ್ಲಿದ್ದ ವಜ್ರದ ಕಂಬ ನೋಡಾ.

ನನ್ನ ಮದುವೆಯ ಹಂದರಕ್ಕೆ ಹಾಕಿದ ಪವಳ ಚಪ್ಪರವು ನೋಡಿರೆ: ನಿಜವಸ್ತು ಒಂದೆ. ತನ್ನ ಲೀಲೆಯಿಂದ ಅಂಗ ಲಿಂಗ ಎರಡಾಗಬಲ್ಲುದಾದರೂ ಅದು ಒಂದೆ. ಬೇರಾಗಿ ತೋರಿದರೂ ಇದ್ದುದೊಂದೇ. ತನ್ನ ಮರೆತುದಾದರೂ ತಾನು ಇದ್ದಕ್ಕಿದ್ದ ಹಾಗೆ ಇದ್ದುದೊಂದೆ. ಮತ್ತು ಆ ಮರವನ್ನು ಅರಿತುದಾದರೂ ತಾನು ಇದ್ದಕ್ಕಿದ್ದ ಹಾಗೆ ಇದ್ದುದೊಂದೆ. ತಾನಲ್ಲದೆ ಅನ್ಯವಿಲ್ಲವೆಂದ ಅರುವಾದರೂ ಇದ್ದಕ್ಕಿದ್ದ ಹಾಗೆ ಇದ್ದುದೊಂದೇ. ಘನ ಗಂಭೀರವಾದ ಸಮುದ್ರದಲ್ಲಿ ತೆರೆ ನೊರೆಬಂದು ಗುರುಳೆಗಳು ತೋರಿದರೆ ಅವು ಬೇರೆಯೆ?

ಪರಶಿವನೆಂಬ ಸಮುದ್ರದಲ್ಲಿ ಸಕಲ ಬ್ರಹ್ಮಾಂಡಗಳಾಗಿ ತೋರಿದರೂ ಅವು ಬೇರೆಯೇ ಇದು ಬೇರೆಂಬ ಅರೆಮರುಳರಿಗೆ ಏನು ಹೇಳುವುದು? ಅಂಗರೂಪ ವಿಶ್ವವ ತಿಳಿದು ನೋಡಲು ಸಾಕ್ಷಾತ್ ಸಚ್ಚಿದಾನಂದ ಸ್ವರೂಪವಲ್ಲದೆ ಅನ್ಯವಲ್ಲವೆಂಬ ಜ್ಞಾನವೆ ಹಂದರಕ್ಕೆ ಹಾಕಿದ ಪವಳರೂಪ ಚಪ್ಪರ ಹಾಕಿದ್ದರು ನೋಡಾ. ಈ ಪ್ರಕಾಶ ಲಿಂಗಾಂಗ ಸಮರಸವುಳ್ಳ ಸ್ವಾನುಭವವುಳ್ಳ ಮದುವೆಯ ಮಾಡಿದರು ನಮ್ಮವರೆನ್ನ.

ಕಂಕಣ ಕೈದಾರವೆಂಬುದು ಚೆನ್ನಮಲ್ಲಿಕಾರ್ಜುನನ ಅರುವಿನ ಸುತ್ತು, ಜ್ಞಾನಾನುಭವ, ಕಂಕಣ ಸ್ವಾನುಭಾವದ ಸುತ್ತು, ಇದುವೆ ನನ್ನ ಕೈಗೆ ಕಟ್ಟಿದ ಕೈದಾರ ಇದರ ಘನವನೇನೆಂಬೆ ಇದು ಅರಿದೆನೆಂದರೆ ಅರಿಯಬಾರದು ಘನಕ್ಕೆ ಘನ ತಾನೆ ನೋಡಾ.

ಅಖಂಡೈಕರಸವಾದ ಘನಲಿಂಗ ಭಿನ್ನವಿಟ್ಟು ಅರಿದೆನೆಂದರೆ ಅರಿಯಬಾರದು. ಅಂತಪ್ಪ ಘನಲಿಂಗ ತಾನೆ, ಆ ಘನಲಿಂಗ ತಾನೇ ತಾನಾಗಿಪ್ಪುದು, ಅಂತಪ್ಪ ಪರಿಪೂರ್ಣಲಿಂಗ ತನ್ನಿಂದನ್ಯವಾಗಿ ಲಕ್ಷ್ಯವಿಡದೆ ಏಕಮೇವಾದ್ವಿತೀಯ ಜ್ಞಾನದಿಂದ ಲಿಂಗ ಬೆರೆದು ಲಿಂಗವಾಗಿದ್ದೆನೆಂಬುದೆ ಕಂಕಣ ಕಟ್ಟಿದ ಕೈದಾರ. ಈ ಕೈದಾರದ ಘನವು ಘನಕ್ಕೆ ಘನವು. ಇದು ತುಂಬಿದುದು ತುಳುಕದು. ಪೂರ್ಣಾತ್ ಪೂರ್ಣವು ಎಂಬುದು ನನ್ನ ಘನ ವಿಶ್ವಾಸ. ಈ ನಿಷ್ಠೆಯೊಳ್ ಸಂದೇಹಕ್ಕಿಂಬಿಲ್ಲ.

ಈ ಘನಲಿಂಗದ ಸುಖವು ಬೇಸರವಾಗದು ಸಾಕೆನಿಸದು. ಈ ಸುಖರೂಪಿ ಸುಖದ ಸುಖ ನನಗೆ ಅದುವೆ ಒಲಿದುದು, ನಾನು ಅದಕ್ಕೆ ಒಲಿದುದು, ಇದಾರು ಅರಿಯರಲ್ಲಾ,

ಅರಿತೆವೆಂದಲ್ಲಿ ಅಂಖಿಡದೋಳ್ ಖಂಡಕ್ಕಿಂಬಿಲ್ಲ, ಪೂರ್ಣದೋಳ್ ಅಪೂರ್ಣಕ್ಕಿಂಬಿಲ್ಲ. ನೀನೊಲಿದ ಶರಣಂಗೆ ನಿಸ್ಸೀಮ ಸುಖದ ಸುಖವೆ ಕಂಕಣಕೈದಾರ. ಇದುವೆ ಚನ್ನಮಲ್ಲಿಕಾರ್ಜುನನ ರಕ್ಷಾಸೂತ್ರವಾಗಿಹುದು ನೋಡಾ. ಸ್ಥಿರಸೇಸೆಯನಿಕ್ಕಿದ ನಮ್ಮವರ ಅಗಮ್ಯ ಕೃಪಾಶಿರ್ವಾದವ ನೋಡಿರೆ.

ಆ ಕೃಪಾಶಿರ್ವಾದದ ಘನವನದೇನು ಹೇಳುವದು? ತೆರೆಹಿಲ್ಲದ ಘನದ ನಡೆಯುಳ್ಳವಳಾಗು ತೆರೆಹಿಲ್ಲದ ಸಂಭಾಷಣೆಯ ಸುಖದ ಸುಖವುಳ್ಳವಳಾಗು, ತೆರೆಹಿಲ್ಲದ ಘನಲಿಂಗಮಹಿಮೆಯಲ್ಲಿ ಮಗ್ನಳಾಗು, ಆ ಸವೆಯದ ಸುಖ ಸಂಗ ಎಂದೆಂದೂ ಎಡ ಬಿಡದೆ ಸುಸಂಗಿಯಾಗಿರು ಎಂಬ ಘನಮಹಿಮರಾದ ಶರಣ ಶರಣೆಯರು ಈ ರೀತಿ ಸ್ಥಿರಸೇಸೆಯನಿಕ್ಕಿ ಚೆನ್ನಮಲ್ಲಿಕಾರ್ಜುನ ಗಂಡನ್ನ ಮದುವೆ ಮಾಡಿದರು.

**14**

**ಗುರುವೆ ತೆತ್ತಿಗನಾದ, ಲಿಂಗವೆ ಮದುವಳಿಗನಾದ,**
**ನಾನೆ ಮದುವಳಿಗೆಯಾದೆನು. ಈ ಭುವನವೆಲ್ಲವ**
**ನರಿಯಲು ಅಸಂಖ್ಯಾತರೆನಗೆ ತಾಯಿತಂದೆಗಳು.**
**ಪ್ರಭುವಿನ ಮನೆಗೆ ಸಾದೃಶವಪ್ಪ ವರನ ನೋಡಿ,**
**ಇದು ಕಾರಣ ಚೆನ್ನಮಲ್ಲಿಕಾರ್ಜುನ ಗಂಡನೆನಗೆ**
**ಮಿಕ್ಕಿನ ಲೋಕದ ಗಂಡರೆನಗೆ**
**ಸಂಬಂಧವಿಲ್ಲವಯ್ಯಾ ಪ್ರಭುವೆ.**

**ತಾತ್ಪರ್ಯ :** ಪ್ರಭುವೆ ಈ ಗುರುರೂಪಿ ತೆತ್ತಿಗನು ಘನ ಮಹಿಮ್ನನು. ಈತನೆ ಸಕಲ ಕಾಮಾಪ್ತಿಗಳ ಪೂರ್ಣಮಾಡುವ ಅನಿಮಿತ್ಯ ಬಂಧು. ಈತನಿಂದಲೆ ಅತ್ಯಂತ ದುಃಖ ನಿವೃತ್ತಿ, ಪರಮಾನಂದ ಪ್ರಾಪ್ತರೂಪ ಪ್ರಾಪ್ತಿ. ಈತನೆ ಸಕಲ ಅರುವಿನ ಅರುವು ಜ್ಞಾನಾಮೃತ, ಜ್ಞಾನಗಂಗಾ, ಜ್ಞಾನೇಶ್ವರಿ ಜ್ಞಾನಸೂರ್ಯನಾದುದರಿಂದ ಗುರುರೂಪಿ ತೆತ್ತಿಗನು.

ಸೂರ್ಯ ಬೆಳಗುವ ಬೆಳಗಾಗಿರುವದರಿಂದ ಪಿಂಡಾಂಡ ಬ್ರಹ್ಮಾಂಡಗಳ ಮೇಲೆ ಕವಿದಿರುವ ಕತ್ತಲೆಯ ಕೆಡೆಸಿ, ತನ್ನ ಪ್ರಕಾಶದಿಂದ ಜಗಕ್ಕೆಲ್ಲ ಪ್ರಕಾಶಿಸಿ ಜಗದ ವ್ಯವಹಾರಕ್ಕೆಲ್ಲ ಸೂರ್ಯನಾರಾಯಣನೆಂದೆನಿಸಿದರೂ ಹೃದಯದೋಳ್ ಹುದುಗಿದ ಅಜ್ಞಾನಂಧಃಕಾರ ಹರಿಯಲಿಲ್ಲ. ಹರಿಯದ್ದರಿಂದ ಹೃದಯದ ಘನತ್ವ ತಿಳಿಯಲಿಲ್ಲ. ಪಿಂಡಾಂಡ ಬ್ರಹ್ಮಾಂಡ ಘನತ್ವ ತಿಳಿಯದಿರುವಾಗ ಸರ್ವದಾ ಸರ್ವತ್ರ ಸರ್ವವ್ಯಾಪ್ತಿಯಾಗಿರುವ ಚಿನ್ಮಯದೇವನ ಘನ ತಿಳಿಯುವದಾದರೂ ಹೇಗೆ ?

ತಿಳಿಯದ್ದರಿಂದ ಜಗತ್ತಿನ ಮೋಹ ಹೋಗಲಿಲ್ಲ. ದೇಹಭಾವ ಬಿಡುಗಡೆಯಾಗಲಿಲ್ಲ. ಭವದ ಭೀತಿ ಹೋಗಲಿಲ್ಲ, ಪುನರಪಿ ಜನನ ಪುನರಪಿ ಮರಣ ತಪ್ಪಲಿಲ್ಲ.

ಇದು ತಪ್ಪಬೇಕಾದರೆ ಕೇವಲ ಜ್ಞಾನ ಘನವಾದ ಶ್ರೀಗುರುವಿನ ಜ್ಞಾನಬೋಧವು ನಮ್ಮ ಹೃದಯ ಪಟಲ ಮೇಲೆ ಬೀಳಬೇಕು. ಅದರಿಂದ ಮರವು ನಿರಶನವಾಗಿ ತನು ಇಂದ್ರಿಯಗಳು, ಪ್ರಾಣ ಮನ ಬುದ್ಧಿ ಚಿತ್ತಾ ಅಹಂಕಾರ ಜೀವ ಎಂಬ ಕಲ್ಪಿತವೆ ಹಾರಿ

ಹೋದಾಗ ಹೃದಯದ ಘನತ್ವ ಗೊತ್ತಾಗುತ್ತದೆ. ಅಂದರೆ ಅರುವಿನ ಹೃದಯ ಮಾಡಿದ ಗುರುಕರುಣೆಗೆ ಇನ್ನಾವುದು ಸರಿ. ಎನ್ನ ತನುವ ಕೆಡಿಸಿ, ಮನವ ಕೆಡಿಸಿ, ಭಾವ ಕೆಡಿಸಿ, ಕರಣಂಗಳ ಕೆಡಿಸಿ ಕಾಣಬಾರದ ಲಿಂಗವನ್ನೆ ಕಾಣಿಸಿ ಮದುವಳಿಗ ಮಾಡಿ ತೋರಿಸಿದ. ತಿಳಿಯಬೇಕಾದ ಜ್ಞಾನಘನವ ತಿಳಿಸಿ ಎನ್ನ ಮದುವಳಿಗ ಮಾಡಿದುದರಿಂದ ಈ ಭುವನವೆಂಬುದರಿಯಲು ಚಿಚ್ಛಕ್ತಿ ಚಿದ್ಘನವಾದುದರಿಂದ ಅಸಂಖ್ಯಾತರೆನೆಗೆ ತಾಯಿತಂದೆಗಳಾಗಿಹರು.

ಇವರೆಲ್ಲರೂ ಕೂಡಿ ಪ್ರಭುವಿನ ಮನೆಗೆ ಸಾದೃಶವಪ್ಪ ವರನೋಡಿ ಕೊಟ್ಟುದ್ದರಿಂದ ಚೆನ್ನಮಲ್ಲಿಕಾರ್ಜುನನೆ ಗಂಡ ನೆನಗೆ.

ಪ್ರಪಂಚ ಪ್ರಭುವಿನ ಮನೆ, ಪಿಂಡಾಂಡವೆಂಬುದು ಸ್ವಪ್ರಕಾಶದಿಂದ ಪ್ರಕಾಶಿಸುವ ಪಿಂಡ, ಪರ ಪ್ರಕಾಶದಿಂದ ಪ್ರಕಾಶಿಸುವ ಪಿಂಡವಲ್ಲ, ಬ್ರಹ್ಮಾಂಡವು. ನಿರಂತರ ಬೆಳಗಿನ ಮಹಾಬೆಳಗಿನಿಂದ ಬೆಳಗುವ ಬ್ರಹ್ಮಾಂಡ. ಈ ಬೆಳಗಾದರೂ ಲುಪ್ತ ಬೆಳಕಲ್ಲ. ಇದಕ್ಕೆ ಉದಯಾಸ್ತವಿಲ್ಲ, ಅಖಂಡ ಬೆಳಗು, ನಿಸ್ಸೀಮ ಬೆಳಗು ಬೆಳಗುವದರಿಂದ ಭುವನವೆಲ್ಲ ಪ್ರಭುವಿನ ಮನೆಯೇನು ನಿಜ. ಆದರೆ ಇದು ಪ್ರಭುವಿನ ಮನೆ, ಈ ಹೃದಯದಲ್ಲಿ ಬೆಳಗುವ ಅಖಂಡ ತೇಜೋಮಯ, ಈ ತೇಜೋಮಯನೆ ಸರ್ವರ ಆತ್ಮ. ಸರ್ವರ ಸ್ವರೂಪವೆಂಬುದು ತಿಳಿದಾಗ ಪ್ರಭುವಿನ ಮನೆಯಾಗುತ್ತದೆ. ಅರುವಿನ ಮನೆಯಾಗುತ್ತದೆ. ಘನಲಿಂಗಯ್ಯನ ಮನೆಯಾಗುತ್ತದೆ.

ಅದಕ್ಕಾಗಿಯೆ ಅರುವಿನ ಮನೆಯು ಪ್ರಭುವಿನ ಮನೆ. ಇದು ಅಂದರೆ ಪಿಂಡಾಂಡ ಬ್ರಹ್ಮಾಂಡ ಪ್ರಭುವಿನ ಮನೆಯಾಗಲು ಗುರುದೇವನೆ ಮುಖ್ಯಸ್ಥ. ಅದಕ್ಕಾಗಿ ಎನ್ನ ತನುವ ಶೋಧಿಸಿ ಚಿದ್ಘನ ಲಿಂಗವ ತೋರಿದ, ಮನವ ಶೋಧಿಸಿ ಮಹಾಲಿಂಗದ ಘನವ ತೋರಿದ. ಭಾವ ಶೋಧಿಸಿ ಘನಲಿಂಗವ ಮಾಡಿದುದರಿಂದ ಸಾದೃಶವಪ್ಪ ವರ ನೋಡಿ ಕೊಟ್ಟರು. ಏಕೆಂದರೆ ನನ್ನ ಸಾದೃಶವೆ ನನ್ನ ಗಂಡ, ನನ್ನ ಗಂಡನ ಸಾದೃಶವೆ ನಾನು. ಅಂದರೆ ಆತನು ಅದೃಶಿ, ನಾನು ಅದೃಶಿ, ಆತನು ದೃಶ್ಯ ದೃಕ್ ಎಂಬ ವಿಭಾಗವನ್ನು ಮೀರಿದವನು. ನಾನು ದೃಶ್ಯ ದೃಕ್ ಎಂಬ ವಿಭಾಗಕ್ಕೂ ಮೀರಿದವಳು. ಈರ್ವರ ಸ್ವರೂಪ ಒಂದೆ. ಇರವು ಒಂದೆ. ಅಲ್ಲಿ ನಾಮವಿಲ್ಲ ಅನಾಮವಿಲ್ಲ ನಾನು ನೀನು ಎಂಬುದು ಮುನ್ನವೆ ಇಲ್ಲ , ನಿಸ್ಸೀಮವು. ನುಡಿದು ಹೇಳಲಿಕ್ಕಿಂಬಿಲ್ಲ ನಿಜದಲ್ಲಿದ್ದ ಬೆರಗು. ಕುರುಹು ಅರಿವುದೆ ಏನೆಂದನಲಿಲ್ಲ ಬಯಲು. ಅಲ್ಲಿ ಏನೇನೂ ಅರಸಲಿಲ್ಲವಾದ್ದರಿಂದ ನಿರ್ನಾಮ, ನಿರ್ಗುಣ, ನಿರಂಜನ, ನಿತ್ಯನಿರಾಮಯನು ನಿರ್ಮಲ, ನಿಷ್ಕುಲಂ ಜ್ಞೇಯಂ ನಿರ್ಭೇಧ್ಯಂ ನಿರುಪಾಧಿಕಮ್ ಅದ್ವಿತೀಯಾನಂದ ಅಕ್ಷೀಣ ಅಸಾದೃಶ್ಯಮಿದು. ಇಂಥ ಘನಕ್ಕೆ ಘನವಾದ ಚೆನ್ನಮಲ್ಲಿಕಾರ್ಜುನನೆ ನನ್ನ ಸಾದೃಶವಪ್ಪ ಸವೆಯದ ಸುಖರೂಪದ ಸುಖವೆ ನನ್ನವನಾದ ಮೇಲೆ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯಾ ಎಂದು ಹೇಳಿದ್ದಾಳೆ.

**15**

**ತಪ್ಪಹೊರಸಿ ಹೊರಟಿಹನೆಂಬುದು ಸತ್ಯವೆ,**
**ತನು ಸೀರೆಯನಳಿದು ನಿರ್ವಾಣವಾದಲ್ಲಿ ,**

**ಮನದ ಭ್ರಾಂತು ನಿಶ್ಚಯವಾಗದು.**
**ಕೇಶವೆಂಬ ಸೀರೆ ಅಂಗಕ್ಕೆ ಮರೆಯಾಯಿತ್ತು.**
**ಅಪಮಾನವೆಂತು ಹರಿಯಿತ್ತು ?**
**ಅದು ಗುಹೇಶ್ವರ ಲಿಂಗಕ್ಕೆ ಸಲ್ಲದ ವೇಷ.**

**ತಾತ್ಪರ್ಯ:** ನೀನು ಕೌಶಿಕನೆಂಬ ಭವಿಯ ಮೇಲೆ ಲಿಂಗಧಾರಣವಾಗದ ತಪ್ಪ ಹೊರಸಿ ಹೊರಟಿದುದು ಸತ್ಯವೆ? ಅನಂತಕಾಲ ಹರನೇ ಗಂಡನಾಗಬೇಕೆಂದು ತಪಸಿದ್ದು ಸತ್ಯವೆ? ಸದಾ ಹರನೆ ಗಂಡನಾಗಬೇಕೆಂಬ ಸದಿಚ್ಛೆಯಿದ್ದಾಗ ಕೌಶಿಕನೆಂಬ ಭವಿಯ ಮೇಲೆ ಅಂಗವಿಕಾರವಾದುದೇಕೆ? ಕಾಮವಿಕಾರವಾದುದೇಕೆ? ಅತೀಂದ್ರಿಯಳಾದವಳಿಗೆ ಇಂದ್ರಿಯಗಳೆಲ್ಲಿಯವು? ಇಂದ್ರಿಯಗಳಿಲ್ಲದ ಇಂದ್ರಿಯಗಳಿಂದ ನೀನು ಕೌಶಿಕನ ಕಂಡುದು ಹೇಗೆ ? ಕೇವಲ ತನು ಸೀರೆಯನಳಿದು ನಿರ್ವಾಣವಾದಲ್ಲಿ ಮನದ ಭ್ರಾಂತಿ ಹೋಗದು.

ಕರಣಂಗಳ ನಿರ್ವಾಣವಾದ ಮನದಲ್ಲಿ ಕೌಶಿಕ ಗಂಡು ನೀನು ಹೆಣ್ಣು ಎಂದು ಕಲ್ಪಿಸಿದುದು ಹೇಗೆ? ಮತಿಗೆಟ್ಟ ಮತಿಯಿಂದ ಗಂಡು ಹೆಣ್ಣಿನ ನಿಶ್ಚಯವಾದುದು ಹೇಗೆ? ನಿರ್ಭಾವದಲ್ಲಿ ನಿಬ್ಬೆರಗಾದವಳಿಗೆ ಕೌಶಿಕ ಭವಿ, ನಾನು ಲಿಂಗಾಂಗಿ ಎಂಬ ಭಾವ ಬಂದುದು ಹೇಗೆ? ನಿರ್ವಾಣದಲ್ಲಿ ಮೇರೆ ದಪ್ಪಿದವಳಿಗೆ ಕೌಶಿಕ ಲಿಂಗಧಾರಣವಾದರೆ ಒಪ್ಪುವದು ಎಂದು ಸಮ್ಮತಿಸಿದುದು ಹೇಗೆ?

ನಿರ್ವಾಣವೆಂಬುದು ನಿಸ್ಸೀಮ ನೋಡವ್ವಾ, ನಿರಾಲಂಬದ ಘನವನೇನೆಂಬೆ, ನಾಮನೆನ್ನೆ ಅನಾಮನೆನ್ನೆ , ರೂಪನೆನ್ನೆ ಅರೂಪನೆನ್ನೆ , ಕಲ್ಪಿತನೆನ್ನೆ ಅಕಲ್ಪಿತನೆನ್ನೆ , ಪುಸಿ ಎನ್ನೆ ದಿಟನೆನ್ನೆ, ಗಂಡೆನ್ನೆ ಹೆಣ್ಣೆನ್ನೆ , ಪವಿತ್ರನೆನ್ನೆ ಅಪವಿತ್ರನೆನ್ನೆ , ಒಳಗೆನ್ನೆ ಹೊರಗೆನ್ನೆ , ಭಿನ್ನನೆನ್ನೆ ಅಭಿನ್ನನೆನ್ನೆ , ಅಂಗನೆನ್ನೆ ಲಿಂಗನೆನ್ನೆ , ಸಂಗನೆನ್ನೆ ನಿಸ್ಸಂಗನೆನ್ನೆ , ಅಂಬರನೆನ್ನೆ ದಿಗಂಬರನೆನ್ನೆ , ಸತಿ ಎನ್ನೆ ಪತಿ ಎನ್ನೆ , ಉಪಮಿಸಲರಿಯದ ನಿರ್ವಾಣದಲ್ಲಿದ್ದುದು ಸತ್ಯವೇ? ವಾಸನೆ ಇಟ್ಟುಕೊಂಡು ತನು ಸೀರೆ ಅಳಿದರೆ ಮನ ನಿರ್ವಾಣವಾಗದು. ಏನೊಂದುಸರಲು ಬಾರದ ಸವೆಯದ ಸುಖದ ಸುಗ್ಗಿಯಲ್ಲಿ ಮನವಿಲ್ಲ , ಮನದ ಭ್ರಾಂತಿ ಇಲ್ಲ. ಮನದ ಭ್ರಾಂತಿ ಇಲ್ಲವೆಂದರೆ ಕೇಶವೆಂಬ ಸೀರೆ ಅಂಗಕ್ಕೆ ಮರೆಯಾಯಿತು. ಅಪಮಾನವೆಂತು ಹರಿಯಿತ್ತು. ಕೇಶವೆಂಬ ಸೀರೆ ಅಂಗಕ್ಕೆ ಮರೆಯಾಗಿದ್ದ ಸಂಕೇತವೆ ಮಹಾಲಿಂಗದಲ್ಲಿ ಸಮರಸವಾಗದ ಚಿನ್ಹ ಒಲಿಯದ ಚಿನ್ಹ ಮಹಾಲಿಂಗದ ಘನತ್ವ ಅರಿಯದ ಚಿನ್ಹ ನಿರಾಲಂಬಕ್ಕೆ ಹೊದಿಕೆ ಅದಾವುದು? ಮಹಾಲಿಂಗದಲ್ಲಿ ಮನಮಗ್ನವಾದವಳಿಗೆ ಅದಾವ ಕೇಶ ಮರೆಯಾಗಬೇಕು !

ಅಲ್ಲಿ ತಾನೆಂಬುದಿಲ್ಲ, ಅನ್ಯವೆಂಬುದಿಲ್ಲ, ಕುರುಹು ಇಲ್ಲ , ಕೂನವು ಇಲ್ಲ , ಅರಸುವದಿಲ್ಲ, ಆರಾಧಿಸುವುದಿಲ್ಲ ಏನೇನೂ ಇಲ್ಲ . ನಿಜದಲ್ಲಿದ್ದ ಘನ, ಘನಕ್ಕೆ ಘನ. ನುಡಿಗಿಂಬಿಲ್ಲ ನಡೆಗಿಂಬಿಲ್ಲ ಭಾವಕ್ಕಿಂಬಿಲ್ಲ ಅದನೆಂತು ಉಪಮಿಸುವದು? ಅನುಪಮಳಾದ ನಿನಗೆ ಮಾನವಾವುದು ಅಪಮಾನವಾವುದು ? ಸೀಮೆಯ ಹಂಗು ಹರಿದವಳಿಗೆ ಅಂಗವಾವುದು ಅನಂಗವಾವುದು, ಕೇಶವಾವದು ಕೋಶವಾವುದು ವೇಷವಾವದು ? ಅದು ಗುಹೇಶ್ವರ ಲಿಂಗಕ್ಕೆ ಸಲ್ಲದ ವೇಷ ನೋಡಾ.

**16**

**ಕಾಯ ಕರ್ರನೆ ಕಂದಿದಡೇನಯ್ಯಾ?**
**ಕಾಯ ಮಿರ್ರನೆ ಮಿಂಚಿದಡೇನಯ್ಯಾ?**
**ಅಂತರಂಗ ಶುದ್ಧವಾದ ಬಳಿಕ ಚೆನ್ನಮಲ್ಲಿಕಾರ್ಜುನ**
**ಲಿಂಗವು ಒಲಿದ ಕಾಯ ಹೇಗಿದ್ದಡೇನಯ್ಯಾ ?**

**ತಾತ್ಪರ್ಯ:** ಅಕಲಂಕ ಚೆನ್ನಮಲ್ಲಿಕಾರ್ಜುನ ಮಹಾಲಿಂಗವು ಒಲಿದ ಕಾಯ ಹೇಗಿದ್ದಡೇನಯ್ಯಾ? ಮಹಾಲಿಂಗ ಒಲಿದ ದೃಷ್ಟಿಯಲ್ಲಿ ಕಾಯ ಕರ್ರನೆ ಕಂದಿದಡೇನು, ಕಾಯ ಮಿರ್ರನೆ ಮಿಂಚಿದಡೇನು? ಅಲ್ಲಿ ಕಾಯ ಅಳಿದುದಿಲ್ಲ ಉಳಿದುದಿಲ್ಲ. ಈ ಕಾಯ ಗೋಡೆಯ ಮೇಲಿನ ಭಿತ್ತಿ ಚಿತ್ತಾರನ ತೆರ ನೋಡಾ. ಭಿತ್ತಿ, ಚಿತ್ತಾರವು ನಿಜವೇ? ಚಿತ್ತಾರವಿದ್ದದ್ದು ನಿಜವೆ? ಇಲ್ಲದುದು ನಿಜವೆ ? ಏಕೆಂದರೆ ನಿಜವಾಗಿ ಅದು ಚಿತ್ತಾರವಲ್ಲ, ಚಿತ್ತಾ ಅಲ್ಲ, ಅದು ಕೇವಲ ಬಣ್ಣವಲ್ಲದೆ ಅನ್ಯವಲ್ಲ ಬಣ್ಣದೊಳಗೆ ಚಿತ್ತಾರ. ಚಿತ್ತಾರದ ಆರೋಪ ಸರಿಯೆ ! ಅಕಲಂಕವಾದ ಮಹಾಲಿಂಗದ ಘನದೋಳ್ ನಾಮವಿಲ್ಲ , ರೂಪವಿಲ್ಲ , ಕಲ್ಪಿತನಿಲ್ಲ, ಕಲ್ಪನೆಯಿಲ್ಲ , ಮನವಿಲ್ಲ , ಮಾಯೆಯಿಲ್ಲ . ಇಲ್ಲದುದು ಇಲ್ಲವೆ ಇಲ್ಲ , ಇದ್ದುದು ಇದೆ. ಅದುವೆ ಸದಾ ಇದ್ದಕ್ಕಿದ್ದಂತಿರುವ ಘನಲಿಂಗವು, ಆ ಘನಲಿಂಗ ಒಲಿದುದರಿಂದ ಕಾಯಸಂಬಂಧವೆನ್ನೆ ಅಕಾಯ ಸಂಬಂಧವೆನ್ನೆ ಅದಕ್ಕಾಗಿ ಇದು ಅತೀತ ಘನಲಿಂಗನ ಹೃದಯ. ಅಲ್ಲಿ ಅಶುದ್ಧತೆಗಿಂಬು ಇಲ್ಲ. ಅಲ್ಲಿ ಶುದ್ಧಪ್ರಸಾದ, ಸಿದ್ಧಪ್ರಸಾದ, ಪ್ರಸಿದ್ಧ ಪ್ರಸಾದ ಉಂಟು. ಈ ತ್ರಿವಿಧ ಒಂದಾದ ಮಹಾಪ್ರಸಾದ ಉಂಟು. ಇದು ಕಾರಣ ಅಂತರಂಗ ಶುದ್ಧ ನೋಡಾ.

ಅಂತರಂಗ ಶುದ್ಧವೆಂಬುದು ಗುರುಕರಣಾಜಲವೆಂಬ ಲಿಂಗಾಂಗ ಸಮರಸ ಜ್ಞಾನ ರೂಪ ಬೋಧವು. ಇದು ಅಕಲಂಕವಾದುದರಿಂದ ಶುದ್ಧಜ್ಞಾನ ಶುದ್ಧ ಅರಿವು ಇದುವೆ. ಶುದ್ಧ ಪ್ರಸಾದ ಶುದ್ಧ ಜ್ಞಾನವು ಮನದಲ್ಲಿ ತನ್ಮಯವಾಗಿ ಕರಿಗೊಂಡಿಹುದೀಗ ಸಿದ್ಧ ಪ್ರಸಾದ. ಇದುವೆ ಭಾವದಲ್ಲಿ ಭರಿತವಾಗುವುದೀಗ ಸಿದ್ಧ ಪ್ರಸಾದ. (ಪ್ರಸಿದ್ಧ ಪ್ರಸಾದ) ಈ ಮೂರು ತನ್ನೊಳಗೆ ಕಂಡು ತಾನು ಶುದ್ಧಪ್ರಸಾದ ಸಿದ್ಧ ಪ್ರಸಾದ ಪ್ರಸಿದ್ಧ ಪ್ರಸಾದವಾಗದೆ ನಿರಾಲಂಬನಾಗಿರುವುದೆ ಮಹಾಪ್ರಸಾದ. ಮಹಾಪ್ರಸಾದವೆಂಬುದು ನಿರಾಲಂಬ ಘನ ಅದ್ವಿತೀಯ ಪ್ರಸಾದವಾದ್ದರಿಂದ ಮಾತು ಮನಂಗಳಿಗೆ ಮೀರಿದುದುಕ್ಕಾಗಿ ಇದು ನಿಸ್ಸೀಮವು. ನಿಸ್ಸೀಮವೆಂಬುದು ತಾನೆ, ನಿಸ್ಸೀಮ ತಾನಾಗಿರುವದರಿಂದ ಶುದ್ಧ ಪ್ರಸಾದ ತನ್ನಿಂದಲೆ ಸಿದ್ಧವಾಗುವುದು. ಸಿದ್ಧ ಪ್ರಸಾದವು ತನ್ನಿಂದಲೇ ಸಿದ್ಧವಾಗುವುದು ಪ್ರಸಿದ್ಧ ಪ್ರಸಾದ ತನ್ನಿಂದಲೆ ಸಿದ್ಧವಾಗುವುದರಿಂದ ಮಹಾಪ್ರಸಾದರೂಪ ನಿಸ್ಸೀಮ ತಾನೆ, ನಿಸ್ಸೀಮ ತಾನಾದುದಕ್ಕಾಗಿ ತಾನೆ ಶುದ್ಧಪ್ರಸಾದ, ತಾನೆ ಸಿದ್ಧ ಪ್ರಸಾದ, ತಾನೆ ಪ್ರಸಿದ್ಧ ಪ್ರಸಾದ. ಅಂದರೆ ತಾನೆ ಗುರು, ತಾನೆ ಲಿಂಗ, ತಾನೆ ಜಂಗಮ, ತಾನೆ ಭವಿ, ತಾನೆ ಭಕ್ತ, ತಾನು ತಾನೆ. ತನ್ನ ಸ್ವಮಹಿಮೆಯು ತಾನೆ ಕಾಣುವದರಿಂದ ಇದುವೆ ಅಂತರಂಗ ಶುದ್ಧಿಯು, ಘನ ನೋಡಾ. ಇದುವೆ ಚೆನ್ನಮಲ್ಲಿಕಾರ್ಜುನ ಲಿಂಗ ಒಲಿದ ಕಾಯ. ಚೆನ್ನಮಲ್ಲಿಕಾರ್ಜುನ ಲಿಂಗ ಒಲಿದ ಕಾಯದ ಇರುವಾದುದರಿಂದ ಕಾಯ ಕರ್ರನೆ ಕಂದಿದಡೇನು ಕಾಯ ಮಿರ್ರನೆ ಮಿಂಚಿದಡೇನು?

ಈ ಕಾಯ, ಈ ಕಾಯದ ವಿಕಾರ ತಾನಾಗದಿರುವಾಗ, ಕಾಯದ ತಾದಾತ್ಮ್ಯ

ಭಾವಕ್ಕಿಂಬಿಲ್ಲದಿರುವಾಗ, ಕಾಯ ಸೀರೆ ಅಳಿದುದು ನೀವೇಕೆ ಕಾಣುವಿರಣ್ಣಾ? ಕಾಯಕ್ಕೆ ಕೇಶವೆಂಬ ಸೀರೆ ಮರೆ ಮಾಡಿದುದು ನೀವೇಕೆ ನೋಡುವಿರಣ್ಣಾ! ಕಾಯ ರಕ್ತ ಮಾಂಸಗಳಿಂದ ತುಂಬಿ ಮಿರಿ ಮಿರಿ ಮಿಂಚಿದರೇನು ? ಇದು ರಕ್ತ ಮಾಂಸಗಳಿಲ್ಲದೆ ಎಲಬು ಚರ್ಮದಿಂದ ಹೊದಿಸಿದ ಹಂದರವಾದರೇನು ? ಇದು ಚೆನ್ನಮಲ್ಲಿಕಾರ್ಜುನನ ಕಾಯ. ಮಹಾಲಿಂಗದ ಕಾಯ, ಮಹಾಲಿಂಗರೂಪಿ ಸುಖದ ಕಾಯ. ಸುಖರೂಪಿ ಸ್ವಸುಖದ ಕಾಯ. ಸ್ವಪ್ರಕಾಶದಿಂದ ಪ್ರಕಾಶಿಸುವ ಕಾಯ. ಅದು ಹೇಗಿದ್ದಡೇನಯ್ಯಾ!

**17**

**ದೇವನೊಲಿದ ನೀನೊಲಿದೆ ನೆಂಬುದು ಆದಾವುದಕ್ಕೆ ?**
**ಭಾವಶುದ್ದವಾದಲ್ಲಿ ಸೀರೆಯನಳಿದು ಕೂದಲ ಮರಸಲೇತಕ್ಕೆ ?**
**ಇದು ಅಂತರಂಗದ ನಾಚಿಕೆ ಬಾಹ್ಯದಲ್ಲಿ ತೋರಿತ್ತು.**
**ಅದು ಗುಹೇಶ್ವರ ಲಿಂಗಕ್ಕೆ ಒಲವರವಲ್ಲ .**

**ತಾತ್ಪರ್ಯ** : ದೇವನೊಲಿದ ನೀನೊಲಿದೆ ನೆಂಬುದು ಅದು ಹೇಗೆ ? ನಿನ್ನನ್ನು ಕಂಡು ದೇವನೊಲಿದನೆ? ದೇವನ ಕಂಡು ನೀನೊಲಿದೆಯೆ ? ಹಾಗಾದರೆ ದೇವನ ಸ್ವರೂಪವಾವುದು? ನಿನ್ನ ಸ್ವರೂಪವಾವುದು ? ನಾನು ನೀನು ಎಂಬ ಭಾವ ಮುಂದುಗೊಂಡಲ್ಲಿ ಅರಸಿದರಿಲ್ಲ ತಪಸಿದರಿಲ್ಲ ದಿಗಂಬರೆಯಾದರಿಲ್ಲ.

ಭಾವಶುದ್ದವಾದಲ್ಲಿ ಸಮರಸವು. ಭಾವ ಶುದ್ಧವಾಗಿರುವದೆಂದಲ್ಲಿ ಸೀರೆ ಅಳಿದು ದೇತಕ್ಕೆ ? ಕೂದಲ ಮರಸಲೇತಕ್ಕೆ ? ಇದು ಭಾವದ ಅಶುದ್ಧತೆಯು ಎದ್ದು ತೋರುತ್ತಿಹುದು ನೋಡಾ. ಭಾವದ ಅಶುದ್ಧತೆಯಿಂದಲೆ ನಾಮರೂಪ ದರ್ಶನ, ಮಾಯೆ ಮಾಟ ದರ್ಶನ, ಕರ್ತೃತ್ವ ಭೋಕ್ತೃತ್ವ ದರ್ಶನ.

ಎಲ್ಲಿಯವರೆಗೆ ಚರ್ಮಚಕ್ಷುವಿಗೆ ಪ್ರಾಧಾನ್ಯತೆ ಇದೆ. ಅಲ್ಲಿಯವರೆಗೆ ಹೃದಯದಲ್ಲಿ ದೋಷಯುಕ್ತ ಜ್ಞಾನ, ಭಾವ, ನೆನಹು, ರಾಗದ್ವೇಷ, ಅಭಿಮಾನ ಲಜ್ಜೆ ಅಂತರಂಗದಲ್ಲಿ ಹುದುಗಿಹುದು.

ಇದು ಕಾರಣ ಬಾಯಿ ಮಾತಿನಿಂದ ಭಾವ ಶುದ್ಧವಾಗಿದೆ ಅಂದರೆ ತನು ಸೀರೆ ಅಳಿದು ಕೂದಲ ಮರೆಮಾಡಿದುದು. ಇದು ಅಂತರಂಗದ ನಾಚಿಕೆ ತಾನಾಗಿಯೆ ಬಾಹ್ಯದಲ್ಲಿ ಕಾಣುವದು. ಭಾವಶುದ್ಧವಾದುದು ಜ್ಞಾನ ಚಕ್ಷುವಿನಿಂದ ಜ್ಞಾನದೃಷ್ಠಿಯು ನಿರ್ದೋಷಯುಕ್ತವು. ಅದು ಸಮಸ್ವರೂಪವು ಅಲ್ಲಿ ವಿಷಮಕ್ಕಿಂಬಿಲ್ಲ ವ್ಯಸನಿಕ್ಕಿಂಬಿಲ್ಲ ವಾಸನೆಗಿಂಬಿಲ್ಲ. ಭೇದವಿಲ್ಲ ಭಾದೆ ಇಲ್ಲ, ಅಹಂ ಇದು ಎಂಬುದು ಮುನ್ನವೇ ಇಲ್ಲ. ಶುದ್ಧ ಅರುವಿನದು ಘನಲಿಂಗಯ್ಯನದು. ಅದು ಸೀಮಾತೀತವು. ಎಲ್ಲೆಲ್ಲಿ ನೋಡಿದಡಲ್ಲಲ್ಲಿ ಪರಿಪೂರ್ಣ ಭಾವ. ಆ ಭಾವನೆ ಶುದ್ಧ ಭಾವ ಸಮಭಾವ ಅಲ್ಲಿ. ಸಾಕಾರವೆಂಬುದಿಲ್ಲ, ನಿರಾಕಾರವೆಂಬುದಿಲ್ಲ, ಬದ್ದನೆಂಬುದಿಲ್ಲ, ಬುದ್ದನೆಂಬುದಿಲ್ಲ, ಜನಸಿದುದಿಲ್ಲ, ಲಯಿಸಿದುದಿಲ್ಲ , ಇದ್ದಕ್ಕಿದ್ದಂತಿರುವ ನಿರಂಜನ ಭಾವನೆ ಶುದ್ಧಭಾವ ಭರಿತ ಭಾವ ಈ ಭಾವ. ಇಲ್ಲದಿದ್ದರೆ ಗುಹೇಶ್ವರ ಲಿಂಗಕ್ಕೆ ಒಲಿವನಲ್ಲ ಕೇಳಾ ಅಕ್ಕ.

18

**ಫಲ ಒಳಗೆ ಪಕ್ವವಾಗಿಯಲ್ಲದೆ ಹೊರಗಣ ಸಿಪ್ಪೆ ಒಪ್ಪಗೆಡದು.**
**ಕಾಮನ ಮುದ್ರೆಯ ಕಂಡು ನಿಮಗೆ ನೋವಾದೀತೆಂದು**
**ಆ ಭಾವದಿಂದ ಮುಚ್ಚಿದೆ, ಇದಕ್ಕೆ ನೋವೇಕೆ? ಕಾಡದಿರಣ್ಣಾ .**
**ಚೆನ್ನಮಲ್ಲಿಕಾರ್ಜುನ ದೇವರ ದೇವನ ಒಳಗಾದವಳು.**

**ತಾತ್ಪರ್ಯ** : ಫಲ ಒಳಗೆ ಪಕ್ವವಾಗಿಯೆ ಹೊರಗಣ ಸಿಪ್ಪೆ ಒಪ್ಪಗೆಡದು ಏಕೆಂದರೆ ಆವುದೆ ಫಲ ಒಳಗೆ ಪಕ್ವವಾದಾಗ ಹೊರಗಿನ ಸಿಪ್ಪೆಯ ಬಣ್ಣ ಕೆಡುವದು. ಸಿಪ್ಪೆಯ ಲಕ್ಷಣ ಕಂಡೆ ಒಳಗಿನ ಫಲ ಪಕ್ವವಾದದ್ದು ಸಹಜ ಸಿದ್ಧವಾಗುವದು ಹೇಗೋ ಹಾಗೆ ಕರಣಗಳೆಂಬ ಫಲ ಒಳಗೆ ಸುಜ್ಞಾನದಿಂದ ಪಕ್ವವಾದಾಗ, ಹೊರಗೆ ತೋರುವ ತನುವಿನ ಭ್ರಾಂತಿ ತನುವಿನ ಮೋಹ, ತನುವಿನ ಭಾವ ತಾನಾಗಿ ಕೆಡುವದು. ಅಂತರಂಗದಲ್ಲಿ ಕರಣಂಗಳು ಸುಜ್ಞಾನದಿಂದ ಪಕ್ವವಾಗದ ವಿನಃ ಹೊರಗಿನ ತನುವಿನ ಭ್ರಾಂತಿ ರೂಪ ದೋಷ ದೃಷ್ಟಿ, ದೋಷ ಭಾವ, ದೋಷ ಜ್ಞಾನ ಹೋಗದ್ದರಿಂದ ಪಿಂಡಾಂಡ ರೂಪಿ ದೇಹಭಾವ, ದೇಹಭಿಮಾನ ದೇಹದ ಮಮ, ದೇಹದ ನಾಚಿಕೆ ಹಾಗೂ ಬ್ರಹ್ಮಾಂಡರೂಪಿ ಲೋಕಭಾವ ಲೋಕಬುದ್ಧಿ ಲೋಕಜ್ಞಾನ ಲೋಕದ ಸತ್ಯತ್ವ, ಲೋಕ ವಾಸನೆ ಸಿದ್ದಿಸದು. ಲೋಕಾಭಿಮಾನ ಲೋಕ ಲಜ್ಜೆ ಹೋಗುವುದಿಲ್ಲ. ಹೋಗದ್ದರಿಂದ ಮಾಯಿಕ ಜ್ಞಾನವೆ ಅಧಿಕಾಧಿಕವಾಗಿ ಬದ್ಧತ್ವವೆಂಬುದು ಇದರಿಂದ ಕರಣಂಗಳೆಂಬ ಫಲ ಸುಜ್ಞಾನದಿಂದುಕ್ತವಾಗಿಲ್ಲವೆಂಬುದು ಸಹಜ ಸಿದ್ಧವಾಗುವದು. ಬಾಳೆಯ ಫಲ ಒಳಗೆ ಪಕ್ವವಾಗಿ ಹೊರಗಣ ಸಿಪ್ಪೆ ಮೊದಲಿನಂತಿರದ್ದರಿಂದ ಅದು ಸಹಜ ಸಿಪ್ಪೆ ತೆಗೆಯಲು ಹೇಗೆ ಬರುವದೊ ಹಾಗೆ.

ಯಾವ ಕರಣಂಗಳೆಂಬ ಫಲ ಜ್ಞಾನಾಮೃತರೂಪಿ ಘನಲಿಂಗಸಂಗಸುಖದಿಂದ ಪೂರ್ಣ ಪರಮಾನಂದ ರೂಪಿ ರಸಭರಿತವಾಗಿದೆ. ಭಾವ ಭರಿತವಾಗಿದೆ. ಅಲ್ಲಿ ಸ್ಥೂಲ ಕಲ್ಪಿತ ಕಾಯದ ಭ್ರಾಂತಿ ನೋಟ, ಭ್ರಾಂತಿ ಮಾಟ, ಮಾಯಾಭ್ರಾಂತಿ ಕೆಟ್ಟಿರುವದರಿಂದ ವಿಷಯಾಕಾರ ವೃತ್ತಿ ಇಲ್ಲ, ವಿಷಯವಿಲ್ಲ ವ್ಯಸನವಿಲ್ಲ, ವಾಸನೆ ಇಲ್ಲ, ಚಿಂತೆ ಇಲ್ಲ, ಭಯ ಇಲ್ಲವಾದುದರಿಂದ ಇಷ್ಟಾನಿಷ್ಟ ಬುದ್ಧಿಗೆ ಇಂಬಿಲ್ಲ . ಇಂಬಿಲ್ಲವಾದ್ದರಿಂದ ರಾಗವಾವುದು ದ್ವೇಷವಾವುದು ಸುಖವಾವುದು ದುಃಖವಾವುದು. ಅಹಂತ್ವವೆ ನಿರಶನವಾದುದರಿಂದ ಹೊರಗಣ ಸಿಪ್ಪೆ ಒಪ್ಪಗೆಟ್ಟಂತಲ್ಲವೆ ಪ್ರಭು! ಕಾಮನ ಮುದ್ರೆಯ ಕಂಡು ನಿಮಗೆ ನೋವಾದೀತೆಂದು ಆ ಭಾವದಿಂದ ಮುಚ್ಚಿದೆ. ಇದಕ್ಕೆ ನೋವೇಕೆ ಕಾಡದಿರಣ್ಣಾ , ಮಹಾಲಿಂಗ ಸಂಗಿಯಾದವಳಿಗೆ ಅಂಗಸಂಗವಿಲ್ಲ , ಅಂಗಾಂಗಗಳ ಸಂಬಂಧವಿಲ್ಲ, ನಿಸ್ಸಂಗದ ಘನತ್ವ ಕರಿಗೊಂಡವಳಿಗೆ ಇಷ್ಟ ವಿಷಯವಾವುದು, ಅನಿಷ್ಟ ವಿಷಯವಾವುದು ! ಅಂಗಾಂಗಗಳಿಂದ ನಿಮ್ಮ ದೃಷ್ಟಿಗೆ ವ್ಯವಹಾರ ಕಂಡರೂ ಅವ್ಯವಹಾರ ನೋಡಾ. ಶೀತಲದಂತೆ ಶಾಂತಸ್ವರೂಪ ರೂಪ ನೋಡಾ.

ಮಹಾಲಿಂಗದರುವಿನ ಘನತ್ವವು ಘನಕ್ಕೆ ಘನ ನೋಡಾ, ಅಲ್ಲಿ ಸದ್ಬುದ್ಧಿ, ಸಮ್ಯಜ್ಞಾನ, ಸಮತ್ವ ಸಮ ದೃಷ್ಟಿ ನೆಲೆಗೊಂಡಿರುವದರಿಂದ ಅಂಗ ಲಿಂಗ ಸಮರಸವಾದುದರಿಂದ ಅರುವಿನ ಹೃದಯವಷ್ಟೆ ಮರವಿನ ಹೃದಯವಷ್ಟೆ, ಚರವಷ್ಟೆ, ಅಚರವಷ್ಟೆ, ಸಮರತಿ ಸವೆಯದಾನಂದ ಘನ ನೋಡಾ. ವಿರೋಧವೆಂಬುದಿಲ್ಲವಾದುದರಿಂದ ಶುದ್ಧವಾಸನೆ ಅಷ್ಟೆ

ಅಶುದ್ಧವಾಸನೆ ಅಷ್ಟೆ. ಪ್ರಮಾದಕ್ಕಿಂಬಿಲ್ಲವಾದುದರಿಂದ ತ್ರಿಪುಟಿಯ ಸುಳುಹು ಮುನ್ನಿಲ್ಲ.

ಅಲ್ಲಿ ಇಚ್ಛೆ ಇಲ್ಲ ಅನಿಚ್ಛೆ ಇಲ್ಲ ಶಬ್ದ ಜ್ಞಾನಿಯಲ್ಲ, ಶಬ್ದಾನುಭಾವಿಯಲ್ಲ ಇದ್ದಕ್ಕಿದ್ದಂತಿದ್ದ ನಿಃಕಲ ಲಿಂಗದ ಘನನೋಡಾ. ಇದುವೆ ಚೆನ್ನಮಲ್ಲಿಕಾರ್ಜುನ ದೇವರ ದೇವನ ಒಳಗಾದ ಪರಿ ನೋಡಾ.

ಈ ಪರಿಯು ಅಪ್ರತಿಮನಗಮ್ಯದ ನಿಲುವ ನೋಡಾ. ಇದುವೆ ಸಕಲ ಭಾವಂಗಳ ಹಂಗು ಹರಿದ ಚಿನ್ಹ ನೋಡಾ. ಇದುವೆ ಅವಿರೋಧ ಚಿನ್ಹನೋಡಾ ಬೆಳಕು ಕತ್ತಲೆ ಒಂದೆ ಮಾಡಿದ ಚಿನ್ಹೆ ನೋಡಾ. ಇದುವೆ ಜ್ಞಾನ ವಿಜ್ಞಾನ ಒಂದಾಂದ ಘನನೋಡಾ.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರದ ವಚನ.

**19**

**ನೀ ದೇವರೊಳಗೊ, ದೇವರು ನಿನ್ನೊಳಗೊ ?**
**ಎಂಬ ಠಾವನರಿಯೆ ? ಸಿಪ್ಪೆ ಒಪ್ಪಗೆಟ್ಟಾಗ ಹಣ್ಣಿನ ಕೊಳಕಾಯಿತ್ತು.**
**ಅದು ಗುಹೇಶ್ವರನೊಪ್ಪದ ಮಾತು.**

**ತಾತ್ಪರ್ಯ** : ನೀನು ದೇವರೊಳಗೊ ದೇವರು ನಿನ್ನೊಳಗೊ ? ನೀವೀರ್ವರು ಅಂದರೆ ಒಬ್ಬರಿಗೊಬ್ಬರು ನಿನ್ನೊಳಗೆ ಅವನೊ, ಅವನೊಳಗೆ ನೀನೊ ! ಸಮರಸವಾದ ಠಾವನರಿಯೆ.

ಏಕೆಂದರೆ ಅಖಂಡೈಕರಸವಾದ ಘನಲಿಂಗದಲ್ಲಿ ಅಂದು ಇಂದು ಎಂದೆಂದೂ ಖಂಡಿತ ವಿಭಾಗಕ್ಕಿಂಬಿಲ್ಲದಿರುವಾಗ ನೀವೀರ್ವರು ಒಂದಾದ ನಿಲವಾವುದು ಸ್ಥಾನವಾವದು ? ಇರುವು ಆವುದು ? ಈ ಇರುವ ಹೇಳಿಹೆನೆಂದರೆ ನೀನು ದೇವರನ್ನು ಕಂಡಿರಬೇಕು. ದೇವನು ನಿನ್ನನ್ನು ಕಂಡಿರಬೇಕು. ಅಥವಾ ನಿನ್ನನ್ನು ಕಾಣದೆ ಅವನು ನಿನ್ನೊಳ್ ಕೂಡಿದನೆ ? ಅವನನ್ನು ಕಾಣದೆ ಅವನೊಳ್ ನೀನು ಕೂಡಿದೆಯಾ ? ಕಾಣದೆ ಕೂಡಿದುದು ಆಶ್ಚರ್ಯ ನೋಡವ್ವಾ. ಕಂಡು ಕೂಡಿಹೆನೆಂದರೆ ನಿನ್ನ ಮಹಾಲಿಂಗರೂಪನಾದ ಚೆನ್ನಮಲ್ಲಿಕಾರ್ಜುನ ದೇವರ ದೇವನು ವಾಙ್ಮನೋತೀತನು, ನಿರ್ನಾಮನು, ನಿಷ್ಕುಲನು, ನಿರ್ಬೇಧ್ಯನು, ನಿರ್ಗುಣನು, ನಿತ್ಯನು, ನಿರಾಲಂಬನು, ನಿಸ್ಸೀಮನು, ನಿರುಪಾದಿಯು, ಅಖಂಡೈಕರಸನು ಇರುವಾಗ ನೀ ದೇವರೊಳಗೊ ದೇವರು ನಿನ್ನೊಳಗೊ ಎಂಬ ಠಾವನರಿಯೆ. ಅಖಂಡೈಕರಸವಾದ ಘನಲಿಂಗವು ನಿರಂತರವು, ನಿರಾತಂಕವಿಲ್ಲದ ನಿಸ್ಸೀಮ ಬೆಳಗು, ಘನಲಿಂಗದ ದೃಷ್ಟಿಯಲ್ಲಿ ನೀನು ಇಲ್ಲದವಳು, ನಿನ್ನ ಮನ ಇಲ್ಲದುದು, ನಿನ್ನ ನಾಮರೂಪ ಗುಣಕಾರ್ಯ ಇಲ್ಲದುದು, ಈ ಪಿಂಡಾಂಡಗಳು ಬ್ರಹ್ಮಾಂಡಗಳು ಇಲ್ಲದವುಗಳು.

ಬ್ರಹ್ಮಾಂಡ ದೊಡೆಯರುಗಳು ಇಲ್ಲದುದು. ಏಕೆಂದರೆ ರಂಜನೆಗೆ ಇಂಬಿಲ್ಲ, ನಾದ ಬಿಂದು ಕಲೆಗಿಂಬಿಲ್ಲ, ನಾನಾ ವರ್ಣಂಗಳಿಲ್ಲ. ಸ್ವಗತ ಸ್ವಜಾತಿ ವಿಜಾತಿ ಬೇಧಂಗಳಿಲ್ಲ ಸಂಗವಿಲ್ಲ ಸಂಬಂಧವಿಲ್ಲ ಮೋಹವಿಲ್ಲ ನಿರ್ಮೋಹವಿಲ್ಲ, ಅಲ್ಲಿ ಉಪಾಧಿ ಇದ್ದುದಲ್ಲ ಇಲ್ಲದುದಲ್ಲ ಸಾಮಾನ್ಯ ಜ್ಞಾನವಿಲ್ಲ ವಿಶೇಷ ಜ್ಞಾನವಿಲ್ಲ . ಕಲ್ಪಿತ ವಿಶೇಷ ಜ್ಞಾನವಿಲ್ಲ . ಏಕೆಂದರೆ ಕಲ್ಪಿತನಿಲ್ಲ ಕಲ್ಪನೆಯಿಲ್ಲ. ನಿಷ್ಕಲನು, ಕಳೆಯಿಂದ ಅತೀತನು, ವಿಭಾಗದಿಂದ ಅತೀತನು, ಅಲ್ಲಿಗೆ ಆಸಕ್ತಿಯಿಂದ ಬರುವದಾಗದು ಅನಾಸಕ್ತಿಯಿಂದ ಬರುವದಾಗದು. ಯೋಗಾಭ್ಯಾಸದಿಂದ

ಬರುವದಾಗದು, ವಾದ ವಿವಾದದಿಂದಲೂ ಬರುವದಾಗದು. ನಿರ್ಬೇಧ್ಯ ಘನವಾದುದರಿಂದ ಬೇಧವಂತರಿಗಿದು ಅಸಾಧ್ಯ ನೋಡವ್ವಾ . ನೀ ಬೇಧ ಮಾಡಿ ಬೆರೆತದು ಆಶ್ಚರ್ಯ ನೋಡವ್ವಾ ! ನಿರಾಲಂಬ ಘನವಾದುದರಿಂದ ಆಲಂಬನವುಳ್ಳವಳಾಗಿ ಬೇರ್ಪಡಿಸದ ಘನದೋಳ್ ಬೇರ್ಪಡಿಸಿ ನೀ ಕೂಡಿದುದು ಆಶ್ಚರ್ಯವವ್ವಾ . ಗಗನದಂತಿರುವ ಅಚಿಂತ್ಯಾಮೃತದೋಳ್ ನೀ ಚಿಂತಿಸಿ ಸಮರಸವಾದುದು ಆಶ್ಚರ್ಯ ನೋಡವ್ವಾ . ಸಿಪ್ಪೆ ಒಪ್ಪಗೆಟ್ಟಾಗ ಹಣ್ಣಿನ ರಸ ಕೊಳಕಾದುದು. ಅಂದರೆ ತನು ನಷ್ಟ, ಮನ ನಷ್ಟ, ನೆನಹು ನಷ್ಟ , ಭಾವ ನಷ್ಟ , ಜ್ಞಾನ ನಷ್ಟವಾದರೆ ಸಿಪ್ಪೆ ಒಪ್ಪಗೆಟ್ಟಂತೆ, ಹಣ್ಣಿನ ರಸಕೊಳಕಾದಂತೆ, ಇವುಗಳೆ ನಷ್ಟವಾದಾಗ ನೀನೆಲ್ಲಿ ನಿನ್ನ ಶರೀರವೆಲ್ಲಿ , ನಿನ್ನ ಕಾಮನ ಮುದ್ರೆ ಎಲ್ಲಿ ? ನಾನೆಲ್ಲಿ ನನ್ನ ಕರಣಂಗಳೆಲ್ಲಿ ಕಾಣಿಸಿಕೊಳ್ಳುವದಾವುದು, ಕಾಣುವುದಾವುದು? ಅಹಂ ಆವುದು ಇದಂ ಆವುದು? ಇಲ್ಲದ ನಾನು ನೀನೆಂಬ ಭಾವ ಕಂಡುದು ಹೇಗೆ? ಮುಚ್ಚಿದುದು ಆವುದು, ತೆರೆದುದು ಆವುದು. ಇದ್ದುದೊಂದೆ ಇದ್ದಕ್ಕಿದ್ದಂತಿರುವ ಘನಲಿಂಗವಿರುವಾಗ ಇಲ್ಲದ ಶರೀರಗಳ ಕಂಡುದು ಹೇಗೆ? ಇದು ಗುಹೇಶ್ವರ ಲಿಂಗಕ್ಕೆ ಒಪ್ಪದ ಮಾತು.

**20**

**ಗುಣಸಂಪಾದನೆಯ ಮಾಡುವನ್ನಕ್ಕ ಕಾಮದ ಒಡಲು,**
**ಕ್ರೋಧದ ಗೊತ್ತು , ಲೋಭದ ಇಕ್ಕೆ , ಮೋಹದ ಮಂದಿರ,**
**ಮದದ ಆವರಣ, ಮತ್ಸರದ ಹೊದಿಕೆ,**
**ಆ ಭಾವವರಿತಲ್ಲದೆ ಚೆನ್ನಮಲ್ಲಿಕಾರ್ಜುನ ಕೇಳುವದಕ್ಕಿಂಬಿಲ್ಲ ಎಲೆ ಅಣ್ಣಗಳಿರಾ.**

**ತಾತ್ಪರ್ಯ:** ದೃಷ್ಟಿಯೊಳ್ ಸೃಷ್ಟಿ. ಅಲ್ಲಿಯೆ ಗುಣ ಸಂಪಾದನೆ, ಅಲ್ಲಿಯೆ ಮರವರುವಿನ ಸಂಪಾದನೆ, ಅಲ್ಲಿಯೆ ಸಂಸಾರ ಪಾರಮಾರ್ಥ, ಅಲ್ಲಿಯೆ ಅಧಃ ದೃಷ್ಟಿ ಊರ್ಧ್ವದೃಷ್ಟಿ . ಅಗಣಿತವಾದ ಘನಲಿಂಗವು ಗಣನೆಗೆ ಮೀರಿದುದು. ಅದನ್ನು ಯಾವ ದೃಷ್ಟಿಯಿಂದ ನೋಡುವನು ಅದುವೆ ಅದರ ಸಂಪಾದನೆ ಸಿದ್ದವಾಗುವದು. ದೃಷ್ಟಿರೇವ ಸೃಷ್ಟಿಯೆನ್ನುವಂತೆ ದೃಷ್ಟಿಯೆ ಸೃಷ್ಟಿಯಾಗಿದೆ. ಅದಕ್ಕಾಗಿ ಲಿಂಗಮಯ ಜಗತ್ತಿನೊಳ್ ಅಜ್ಞಾನಿಯು ಅಂಗಾಂಗಗಳನ್ನು ಕಾಣುತ್ತಾನೆ.

ಏಕೆಂದರೆ ಅಂಗಾಂಗದ ಜ್ಞಾನಿಯಾಗಿರುತ್ತಾನೆ. ಅದರದೆ ಗುಣಸಂಪಾದನೆಯಾಗುತ್ತದೆ. ಗುಣಸಂಪಾದನೆಯ ದೃಷ್ಟಿಯಿಂದ ನೋಡಲು ಈ ಶರೀರ ಕಾಮದಿಂದ ಹುಟ್ಟಿದುದಕ್ಕಾಗಿ ಕಾಮದ ಒಡಲು, ಕಾಮದಿಂದ ರಕ್ಷಣೆಯಾಗುತ್ತದೆ. ಈ ಕಾಮಕ್ಕೆ ಪ್ರತಿಕೂಲವಾಗುವಡೆ ಕ್ರೋಧ ಕಾಣಿಸಿಕೊಳ್ಳುವದು. ಇದು ಅದರ ಸಹಜ ಸ್ವಭಾವ. ಇವೆರಡು ಇದ್ದಲ್ಲಿಯೆ ಲೋಭದ ಅಗ್ರಸ್ಥಾನ. ಮೋಹದ ಮಂದಿರ, ಮದದ ಮುಸುಕು, ಮತ್ಸರದ ಹೊದಿಕೆ. ಜೀವನು ವಿಷಯದ ಆಶೆ ಸೇವನೆಯಿಂದ ಮೂರ್ಛಿತನಾಗುವುಡೆ ಮಹಾಲಿಂಗ ಸ್ವಾಯತ್ತವಿಲ್ಲ , ಅಲ್ಲಿ ವಿಷಯದ ಇಚ್ಛೆ ಬೆಳೆಯುವದರಿಂದ ಮೋಹವು ಅಧಿಕವಾಗುವುದು. ಕಾಮದ ಒಡಲೆಂಬುದು ಕಾಳರಾತ್ರಿಯು, ಇದು ಅಮವಾಸಿಯ ಕಗ್ಗತ್ತಲೆ, ಇದು ನಿಃಕಲ ಲಿಂಗದ ಘನತ್ವವನ್ನು ಅರಿಯಗೊಡದಂತೆ ಮಾಡುವದು. ಕ್ರೋಧಾಗ್ನಿಯು ಪ್ರಳಯ ಕಾಲದ ಅಗ್ನಿ , ಇದನ್ನಾರು

ಸಂಹಾರ ಮಾಡರು. ಇದು ಸರ್ವರಿಗೂ ಅಶಾಂತತೆಯನ್ನುಂಟು ಮಾಡುವುದು. ಇಚ್ಛೆಯು ಹಾಗೆಯೆ ಇದು ತೀಕ್ಷ್ಣವುಳ್ಳ ಖಡ್ಗಧಾರೆಯು. ನೆನಹಿಂಗೆ ಕೋಮಲವು ಸುಂದರವು. ಇದನ್ನು ಸ್ಪರ್ಶಮಾಡುವುಡೆ ಜೀವನವನ್ನೆ ನಾಶಮಾಡುವದಲ್ಲದೆ ಅನೇಕ ಸಂಕಟ ಕೊಡುವದು. ಲೋಭವು ಬಹು ಕೆಡುಕುಳ್ಳುದು. ಇದರಿಂದ ಘನ ಪಾಪ ಹೃದಯವೆಂಬ ಮನೆಯಲ್ಲಿ ಇದರ ಅಗ್ರಸ್ಥಾನವಾದರೆ ತೀರಿತು, ಸದಾ ಅತೃಪ್ತಿಯೆ ಅತೃಪ್ತಿ. ಇದರಿಂದ ಆಶಾರೂಪಿ ಸ್ವಾನ ವಾಸ ಮಾಡಿ, ಕ್ಷಣದೊಳ್ ರಾಗ, ಕ್ಷಣದೊಳ್ ದ್ವೇಷ, ಕ್ಷಣದೊಳ್ ಸುಖಿ, ಕ್ಷಣದೊಳ್ ದುಃಖಿ, ಕ್ಷಣ ಕ್ಷಣಕ್ಕೂ ಚಂಚಲವೆ ಅಧಿಕವಾಗಿ ಹೃದಯವನ್ನೆ ಅಮಂಗಲ ಮಾಡುವದು.

ಮಂಗಳಮಯಿ ಹೃದಯ. ಈ ಹೃದಯದಲ್ಲಿ ಮದದ ನಿವಾಸವಾಯಿತು. ಎಂದರೆ ಕುಡುಕರ ನಿವಾಸ, ಈ ಕುಡುಕನು ಸದಾಚಾರ ಸದ್ಧರ್ಮವನ್ನು ಸೇರನು. ಮೋಹದಿಂದ ಪಿಂಡಾಂಡ ಬ್ರಹ್ಮಾಂಡ ಬಂಧಿತವು, ಈ ಕೀಳು ಲೋಕವು ಬಂಧಿತವು, ಸರ್ವಲೋಕ ಮೋಹದ ಬಳಗವು, ಮತ್ಸರದ ಹೊದಿಕೆಯು. ಅದಕ್ಕಾಗಿ ಈ ಶರೀರದಲ್ಲಿ ಏನು ಸಂಪಾದಿಸಬೇಕೆಂಬ ವಾಸನೆ ಅದೆ ಅದುವೆ ಪ್ರಾಪ್ತವಾಗುವದು.

ಏಕೆಂದರೆ ಈ ಶರೀರ ಕಲ್ಪವೃಕ್ಷ ಚಿಂತಾರತ್ನ. ಶುಭ ಸಂಕಲ್ಪದಿಂದ ಶುಭವನ್ನೆ ಕಾಣುವನು. ಶುಭಾಶುಭ ಸಂಕಲ್ಪದಿಂದ ಇಷ್ಟಾನಿಷ್ಟವನ್ನು ಕಾಣುವನು. ಅನಿಷ್ಟ ಸಂಕಲ್ಪದಿಂದ ಅಶುಭವನ್ನು ಕಾಣುವನು. ಸಂಕಲ್ಪವೆಂಬುದು ಮಹಾನ್ ಶಕ್ತಿಯುಳ್ಳದ್ದು. ಈ ಮಹಾಶಕ್ತಿಯು ಊರ್ಧ್ವದೃಷ್ಟಿಯುಳ್ಳದಾಗುವುಡೆ ಅನಿಷ್ಠವಾದ ವಿಕಲ್ಪಗಳೆ ನಶಿಸಿ ಮಾನವ ಮಹಾಮುನಿಯೆಂದನಿಸಿಕೊಳ್ಳುವನು. ಇದು ಅಧೋಮುಖವುಳ್ಳದಾಗುವುಡೆ ಮಾನವ ದೈತ್ಯನೆಂದೆನಿಸಿಕೊಳ್ಳುವನು. ಅಧೋವಾಸನೆಯಿಂದ ವಿಷಯಾಸಕ್ತಿ ವಿಷಯಲಂಪಟ ಅನಾಚಾರಿ ಅಜ್ಞಾನಿ, ನಾಸ್ತಿಕ ಗರ್ವದ ಅಗ್ರಗಣ್ಯ , ನೀಚತನ ಪಾಪಿ ಮಹಾಕೃಪಣ, ಸತಿ ಸುತಾದಿಗಳ ವ್ಯಾಮೋಹಿ ಧನಕನಕದ ವ್ಯಾಮೋಹಿಯು. ಊರ್ಧ್ವವಾಸನೆಯಿಂದ ವಿವೇಕ ವೈರಾಗ್ಯಾದಿಗಳಿಂದುಕ್ತನಾಗಿ ಕೈವಲ್ಯ ಸುಖದಾಸಕ್ತಿಯುಳ್ಳುದು, ಅದು ನಿಸ್ಸಂಗದ ನಿಲಯಭೋಗ, ತ್ಯಾಗದ ನಿಲಯ, ನಿರಾಡಂಬರನಿಲಯ, ಪುರುಷಾರ್ಥ ನಿಲಯ. ಪ್ರಭು ಚೆನ್ನಮಲ್ಲಿಕಾರ್ಜುನನ ಘನ ಸುಖದವಳು ಇದ್ದು , ನೆಲೆಯಿಲ್ಲದ ನಿಲುವು, ಆವಾವ ವಾಸನೆಗಿಂಬುಗೊಡದ ನಿಲುವು ನಿಶ್ಫಲದ ನಿಲುವು ಅದು ಸವೆಯದ ಸುಖ, ಅಕ್ಷಯ ಸುಖವಾದುದರಿಂದ ಕೇಳುವದಕ್ಕಿಂಬಿಲ್ಲ ಎಲೆ ಅಣ್ಣಗಳಿರಾ.

**21**

**ಕಾಮದಿಂದ ಕಂಡ, ಕ್ರೋಧದಿಂದ ಆಸ್ತಿ,**
**ಲೋಭದಿಂದ ಸಕಲ ವಿಷಯಂಗಳು,**
**ಮೋಹದಿಂದ ನೋಡಿದೆನೆಂಬುದು ಕಾಮನ ಬಲೆಯೊಳಗೆ.**
**ಕಾಮನ ಗೆದ್ದ ತಾವು ಆವುದು ಹೇಳಾ ಗುಹೇಶ್ವರ ಲಿಂಗಕ್ಕೆ .**

**ತಾತ್ಪರ್ಯ :** ಯಾವ ಹೃದಯ ಕಾಮನೆಯಿಂದುಕ್ತವಾಗಿದೆ ಅದು ದೋಷಯುಕ್ತ ಹೃದಯ, ವಾಸನಾಹೃದಯ. ಇದು ವಿಷಯದ ನಂಜು, ಬಲುನಂಜು. ಈ ನಂಜು

ಏಕಮುಖಿಯಾಗಿರಲಾರದು. ಏಕೆಂದರೆ ವಿಷಯಾಸಕ್ತಿಯುಳ್ಳ ನಂಜು ಇದು ಭೋಗದ ನಂಜು. ಈ ನಂಜಿನಲ್ಲಿಯೆ ಇಷ್ಟಾನಿಷ್ಟ , ಶುಭಾ ಶುಭ, ಧರ್ಮಾಧರ್ಮ, ಪುಣ್ಯ ಪಾಪ, ಸ್ವರ್ಗ ನರಕ, ಸುಖ ದುಃಖ, ದೇವತಾ ದೈತ್ಯ, ಪುರುಷ-ಸ್ತ್ರೀ, ಪಂಚಭೂತ ಪಂಚವಿಷಯ. ಇಲ್ಲಿಯೆ ಪ್ರಕೃತಿ ವಿಕೃತಿ ಹೊಂದಿದ ನಿಲಯ. ಈ ವಿಕೃತಿ ದೃಷ್ಟಿಯಲ್ಲಿಯೆ ಕಾಮ ಕ್ರೋಧ ಲೋಭಗಳೆಂಬ ನಿವಾಸವಾಗಿ ಕಾಮದಿಂದ ಕಂಡ ಕ್ರೋಧದಿಂದಸ್ತಿಗಳು, ಲೋಭದಿಂದ ಸಕಲ ವಿಷಯಂಗಳು. ಇಲ್ಲಿ ಜೀವಾತ್ಮನು ವಿಕೃತಿ ದೃಷ್ಠಿಯನ್ನಾಶ್ರಯಿಸಿರುವುದರಿಂದ ತನ್ನ ಕಾಮನೆ ತನಗೆ ಈ ರೀತಿ ವಿಕೃತಿ ಹೊಂದಿ ಕಾಣಿಸುವವು. ಅದಕ್ಕಾಗಿ ''ಕಾಮನೆ ಯಮ, ಕಾಮನೆ ಧರ್ಮ, ಕಾಮನೆ ಬಂಧ, ಕಾಮನೆ ಮೋಕ್ಷವಾದ, ಕಾಮನೆ ವಿಚಿತ್ರ ವೇಷವ ಧರಿಸಿ ಜಗಕ್ಕೆ ತಾ ಕಾರಣನಾದ ಪರಮಂಗೆ ಪ್ರಕೃತಿಯ ಸಂಗದಿಂದ ಜೀವಭಾವ. ಆ ಜೀವಂಗೆ ಅಂಗನೆಯರ ಸಂಗದಿಂದ ರೌರವ ನರಕದ ಹೇತು. ಆ ದುಃಖದ ಹೇತುವಿನಿಂದ ನಾನಾ ಯೋನಿ ಜನನ. ಈ ನಾನಾ ಯೋನಿಯಲ್ಲಿ ಜನಿಸುವ ಪ್ರಕೃತಿಯ ಸಂಗದ ಇಚ್ಛೆ ಬಿಡದವಂಗೆ ಮುಕ್ತಿ ಎಲ್ಲಿಯದು ಸಿಮ್ಮಲಿಗೆಯ ಚೆನ್ನರಾಮ '' ಎಂಬಂತೆ.

ಪರಶಿವಲಿಂಗಕ್ಕೆ ಸತ್ವ ರಜ ತಮ ಗುಣಗಳ ಸಂಗದಿಂದ ಜೀವತ್ವ , ಇವನೇ ಮುಖ್ಯ ಜೀವ, ಇವನಿಂದ ಭಿನ್ನ ಭಿನ್ನ ಜೀವ ನೋಡಾ. ಸತ್ವಗುಣದಿಂದ ದೇವತಾ ಭಾವಿಯಾದ, ರಾಜಸ ಗುಣದಿಂದ ಮಾನವಾ ಭಾವಿಯಾದ, ತಮೋಗುಣದಿಂದ ಪಶುರೂಪಿ ದೈತ್ಯ ಭಾವಿಯಾದ. ಈ ಅಂಗ ಪ್ರಕೃತಿ ಅಭಿಮಾನಿಯಾಗಿ ತಾನಾರೆಂಬುದನ್ನು ತಿಳಿಯದೆ ಮರವುಳ್ಳವನಾದ. ಈ ಮರವು ತನ್ನ ಸ್ವರೂಪದ ಯತಾರ್ಥ ತಿಳಿಯದಂತೆ ಮಾಡಿದುದರಿಂದ, ತನ್ನ ನಿಜದ ಸುಖದಿಂದ ದೂರಾದನು. ಇದಲ್ಲದೆ ತಾನಾವುದು ಆಗದಿದ್ದರೂ ಆದವನೆಂದು ತಿಳಿದು ವಿಸ್ಮೃತಿಯೆ ದೃಢವಾಗಿ ಜಡದೇಹವೆ ತಾನಾಗಿ, ಮಲ ಮೂತ್ರದಭಿಮಾನಿಯಾದ. ಮೋಹಿಯಾಗಿ ವಿಷಯಾಸಕ್ತನಾದ, ಇಂದ್ರಿಯಂಗಳುಳ್ಳವನಾಗಿ ವಿಷಯಲಂಪಟಿಯಾದ, ಒಮ್ಮೊಮ್ಮೆ ಸತ್ವಗುಣಿಯಾಗಿ ಲಿಂಗಕ್ಕಭಿಮುಖನಾಗಿ ವಿವೇಕಿಯಾದ, ವಿರತನಾದ. ಸತ್ಯ, ಅಹಿಂಸೆ, ಬ್ರಹ್ಮಾಚಾರ್ಯ ಆಸ್ತೇಯ ಅಪರಿಗ್ರಹ ಧರ್ಮಂಗಳುಳ್ಳವನಾಗಿ ಇವುಗಳನ್ನು ಮೋಹದಿಂದ ನೋಡಿದುದೆ ಕಾಮನ ಬಲೆಯೊಳಗೆ. ಹೇಗೆಂದರೆ ಪರಶಿವ ಲಿಂಗವೆ ಜಡ ದೇಹದ ಅಹಂ ಮಮತ್ವವೇ ಜೀವನೆಂದೆನಿಸಿತು. ವಿವೇಕ ವೈರಾಗ್ಯಾದಿಗಳ ಅಹಂ ಮಮತ್ವದಿಂದ ಅಂತರಾತ್ಮನೆಂದಿನಿಸಿತು, ಅರುವಿನಭಿಮಾನ ಮಮತ್ವದಿಂದ ಪರಮಾತ್ಮನೆಂದೆನಿಸತು. ಆದರೆ ಇವೆಲ್ಲವುಗಳು ಮೋಹದಿಂದ ನೋಡಿದುದಕ್ಕಾಗಿ ಕಾಮನ ಬಲೆಯೊಳಗೆ ಕಾಮನ ಗೆದ್ದ ಠಾವು ಆವುದು ಗುಹೇಶ್ವರ ಲಿಂಗಕ್ಕೆ !ಅಕ್ಕ?

**22**

**ಕೆಂಡದ ಶವದಂತೆ, ಸೂತ್ರ ತಪ್ಪಿದ ಬೊಂಬೆಯಂತೆ,**
**ಜಲವರತ ತಟಾಕದಂತೆ, ಬೆಂದ ನುಲಿಯಂತೆ,**
**ಮತ್ತೆ ಹಿಂದಣಂಗ ಉಂಟೆ ಅಣ್ಣಾ ?**
**ಚೆನ್ನಾಮಲ್ಲಿಕಾರ್ಜುನನಂಗವೆ ಆಶ್ರಯವಾದವಳಿಗೆ.**

**ತಾತ್ಪರ್ಯ:** ಚೆನ್ನಮಲ್ಲಿಕಾರ್ಜುನ ಮಹಾಲಿಂಗ. ಈ ಮಹಾಲಿಂಗದಾಶ್ರಯ ಎಂಬುದು ಚಿದಂಗವು ಚಿದ್ಘನಾಂಗವು ಜ್ಞಾನಘನಾಂಗವು. ಈ ಘನಾಂಗವನ್ನಾಶ್ರಯ ಮಾಡಿದುದರಿಂದ ಕೆಂಡದ ಶವದಂತೆ ನೋಡಾ. ಈ ಮಹಾಲಿಂಗದ ಜ್ಞಾನಾಂಗದ ಮರವಾದುದರಿಂದ ದೇಹ ಇಂದ್ರಿಯಗಳು ಪ್ರಾಣ ಘನ ಬುದ್ಧಿ ಚಿತ್ತಾ ಅಹಂಕಾರ ಬದುಕಿದ್ದವು. ಯಾವಾಗ ಮಹಾಲಿಂಗದ ಆಶ್ರಯ ಮಾಡುವುಡೆ ದೇಹವೆಂಬುದು ಶವ. ಶವಕ್ಕೆ ನಾನೆಂಬುದಿಲ್ಲ ಅನ್ಯರೆಂಬುದಿಲ್ಲ . ನೋಡುವ ನೋಟವಿಲ್ಲ , ಕೇಳುವ ಕಿವಿಯಿಲ್ಲ ಘ್ರಾಣಿಸುವ ಘ್ರಾಣೇಂದ್ರಿ ಇಲ್ಲ , ರುಚಿಸುವ ರಸನೇಂದ್ರಿ ಇಲ್ಲ , ಶೀತ ಊಷ್ಣವೆಂಬುದು ಅದಕ್ಕೆ ಗೊತ್ತಿಲ್ಲ . ಅಲ್ಲಿ ಹೆಣ್ಣು ಗಂಡೆಂಬ ಭಾವವಿಲ್ಲ , ಸಂಸಾರವಿಲ್ಲ ಸಂಗವಿಲ್ಲ ಸಂಬಂಧವಿಲ್ಲ . ಧರ್ಮಾಧರ್ಮವೆಂಬುದಿಲ್ಲ , ಕರ್ತೃತ್ವವಿಲ್ಲ ಭೋಕ್ತೃತ್ವವಿಲ್ಲ ಹೇಗೊ ಹಾಗೆ ಮಹಾಲಿಂಗದ ಜ್ಞಾನಾಗ್ನಿಯಿಂದ ಅಜ್ಞಾನ ಅದರ ಕಾರ್ಯವಾದ ಅಂಗಭಾವ ನಷ್ಟವಾಗಿಹುದು. ಇದು ಕಾರಣ ನನ್ನ ಅಂಗವೆಂಬುದು ಕೆಂಡದ ಶವದಂತೆ.

ಈ ಶರೀರವೆಂಬ ಬೊಂಬೆ ಸೂತ್ರ ತಪ್ಪಿದ ಬೊಂಬೆಯಂತೆ. ಸಿನೇಮಾದಲ್ಲಿರುವ ಛಾಯಾರೂಪಿ ಚಿತ್ರದ ಬೊಂಬೆಗಳು ಸೂತ್ರರೂಪ ರೀಲುಗಳು ಸರಿಯಾಗಿದ್ದಾಗ ಅವು ಸರಿಯಾದ ಹಾವ ಭಾವಗಳಿಂದ ಕಾಣಿಸುತ್ತವೆ. ಸೂತ್ರರೂಪ ರೀಲು ಹರಿಯುವುಡೆ ಆಗ ಚಿತ್ರರೂಪಿ ಬೊಂಬೆಗಳ ಹಾವ ಭಾವ ಕಾಣಿಸದುದು ಹೇಗೋ ಹಾಗೆ ಎಲ್ಲಿಯವರೆಗೆ ಶರೀರದಲ್ಲಿ ದೇಹವಾಸನೆ ಲೋಕವಾಸನೆ ಶಾಸ್ತ್ರವಾಸನೆ ಈ ತ್ರಿವಿಧ ವಾಸನೆ ಇದೆ ವಾಸನೆಯಂತೆ ಹಾವ ಭಾವವುಳ್ಳದ್ದಾಗುವದು ದೇಹವಾಸನೆಯಿಂದ ಕೂಡಿದಾಗ ಹೆಂಣಾಗಿ ಗಂಡಾಗಿ ಸತಿ, ಸುತ, ಪತಿ ಮಾತಾಪಿತರುಗಳಾಗಿ ಒಡಹುಟ್ಟಿದವರಾಗಿ ನೆರೆಹೊರೆಯವರಾಗಿ ಇಷ್ಟ ಮಿತ್ರರಾಗಿ ಶತೃಗಳಾಗಿ ಕಾಣಿಸುವದು.

ಲೋಕವಾಸನೆಯಿಂದ ಕೂಡಿದಾಗ ತನ್ನವರಾಗಿ ಅನ್ಯರಾಗಿ ಪಿಂಡಾಂಡವಾಗಿ ಬ್ರಹ್ಮಾಂಡವಾಗಿ ವ್ಯಷ್ಠಿಯಾಗಿ ಸಮಷ್ಠಿಯಾಗಿ ಜಗವಾಗಿ ಜಗದೊಡೆಯರಾಗಿ ಧರ್ಮಾಧರ್ಮವಾಗಿ ಪುಣ್ಯ ಪಾಪವಾಗಿ ಮಾನಾಪಮಾನವಾಗಿ ಕೀರ್ತಿ ಅಪಕೀರ್ತಿಯಾಗಿ ರಾಗದ್ವೇಷಗಳ ವಶವರ್ತಿಯಾಗಿ ನಾನಾ ಪ್ರಕಾರ ರಂಜಿಸುವುದು. ಶಾಸ್ತ್ರ ವಾಸನೆಯಿಂದ ಕೂಡಿದಾಗ ಆತ್ಮಾನಾತ್ಮ ವಿಚಾರವುಳ್ಳದ್ದಾಗಿ ವಿವೇಕ ವೈರಾಗ್ಯದಿಂದ ಕೂಡಿ ಬಿಡುವವನಾಗಿ ಹಿಡಿಯುವವನಾಗಿ, ನಿತ್ಯಾನಿತ್ಯ ಜ್ಞಾನಿ, ಮರವು ಅರವು ಆಗಿ, ಅಜ್ಞಾನಿ ಜ್ಞಾನಿಗಳಾಗಿ, ಭವಿ ಭಕ್ತರಾಗಿ, ಗುರು ಶಿಷ್ಯರಾಗಿ ಬಂಧ ಮೋಕ್ಷವಾಗಿ, ಅರಿತವರಾಗಿ ಅರಿಯದವರಾಗಿ, ಖಂಡ ದೃಷ್ಠಿಯುಳ್ಳದ್ದಾಗಿರುವದೆ ಶಾಸ್ತ್ರವಾಸನೆ. ಈ ತ್ರಿವಿಧ ವಾಸನೆಗಳು ತಮ್ಮ ವಾಸನಾನು ಸಾರ ಕಾಣಿಸಲು ಹತ್ತುವವು. ಈ ತ್ರಿವಿಧ ವಾಸನಾದೋಷ ನಾಶವಾಗಬೇಕಾದರೆ ಮಹಾಲಿಂಗ ಜ್ಞಾನ ಭಾವ ಅನುಸಂದಾನದಿಂದ ತಾನಾರೆಂಬುದು ತನಗದು ನಿಶ್ಚಯವಾಗಿ ಸಿದ್ದಿಸಿದಲ್ಲಿ ದೇಹವೆಂಬುದಿಲ್ಲ ಲೋಕವೆಂಬುದಿಲ್ಲ ಶಾಸ್ತ್ರವೆಂಬುದಿಲ್ಲ ಇದ್ದುದೊಂದೆ ಮಹಾಲಿಂಗ. ಅದು ಖಂಡಿತವಿಲ್ಲದ ಅಖಂಡ. ಅದು ಪೂರ್ಣಾತ್ ಪೂರ್ಣ, ಪರಾತ್ಪರ ಚಿನ್ಮಯ. ಅದುವೆ ತನ್ನ ಸ್ವರೂಪ. ಎಲ್ಲಿ ನೋಡಿದಡಲ್ಲಿ ತಾನೆ ನಿರಂತರವಾಗಿರುವ ನಿರಾತಂಕ ಬೆಳಗು ಇದ್ದಾಗ ಅಶುದ್ದ ವಾಸನೆಗಿಂಬಿಲ್ಲ. ಆಗ ಶರೀರರೂಪಿ ಬೊಂಬೆ ನಿರ್ವಿಷಯ ಬೊಂಬೆ, ಅಕರ್ತಾ ಅಭೋಕ್ತಾ ರೂಪಿ ಬೊಂಬೆ ಯಾದುದರಿಂದ ಸೂತ್ರ ತಪ್ಪಿದ ಬೊಂಬೆ ನೋಡಾ.

**ಇದಲ್ಲದೆ ನನ್ನ ಕರಣಂಗಳು ಬತ್ತಿದ ಕೆರೆ ನೋಡಾ :** ಮಹಾಲಿಂಗ ಸುಖಿಯಾದುದರಿಂದ ಕರಣಂಗಳು ಚೆನ್ನಮಲ್ಲಿಕಾರ್ಜುನನಂಗ ಆಶ್ರಯ ಮಾಡಿರುವದರಿಂದ ಚಿದಂಗವಾಗಿಹವು. ಅದಕ್ಕಾಗಿ ನನ್ನಲ್ಲಿ ದೇಹ ದೃಷ್ಟಿ, ದೇಹಭಾವಕ್ಕಿಂಬಿಲ್ಲವಾದುದರಿಂದ ನಿರ್ವಿಕಾರಳು, ಅತೀಂದ್ರಿಯಳು, ನಿರ್ವಿಷಯಳು. ಸಂಕಲ್ಪ ವಿಕಲ್ಪದ ಸುಳುವಿನ ಸೂತಕಿ ನಾನಾಗದ್ದರಿಂದ ನನ್ನ ಕರಣಂಗಳು ಜ್ಞಾನಕಿರಣಂಗಳು ನೋಡಾ. ಅದ್ವಯಸುಖದ ಸುಖವುಳ್ಳವುಗಳು. ಅದಕ್ಕಾಗಿ ನನ್ನ ಮಹಾಲಿಂಗರೂಪಿ ಚೆನ್ನಮಲ್ಲಿಕಾರ್ಜುನನೆಂಬ ಗಂಡ ಸರ್ವತ್ರ ಸದಾ ಇದ್ದಕ್ಕಿದ್ದಂತಿರುವ ನಿಷ್ಕಲ ಘನ, ನಿರಂಜನ ಘನ, ನಿರ್ಗುಣ ಘನ, ನಿರುಪಾಧಿ ಘನಮಹಿಮನು ಇದ್ದುದರಿಂದ ಆತನ ಘನ ಸುಖದಿರುವ ನನ್ನ ಕರಣಂಗಳು. ಜಲವರತ ತಟಾಕದಂತೆ. ಏಕೆಂದರೆ ಕರಣಂಗಳಾಗಿದ್ದರೆ ಅವುಗಳ ಧರ್ಮಂಗಳಿರುತ್ತಿದ್ದವು. ಕರಣಂಗಳೆ ಚಿದಂಗ ಚಿದ್ಘನ ಚಿದಾಕಾಶದ ಕಿರಣಂಗಳಾದ ಕಾರಣ ಅಲ್ಲಿ ವಿಷಯಾಸಕ್ತಿ ಏತರದು ? ವಿಷಯಾಕಾರವೇತರದು? ವ್ಯಸನವಿಲ್ಲ ಚಿಂತೆ ಇಲ್ಲ ನೆನಹು ಇಲ್ಲದ್ದರಿಂದ ನನ್ನ ಹೃದಯ ನೀರಿಲ್ಲದ ಕೆರೆ; ಅಂದರೆ ಭಯವಿಲ್ಲದ ಕೆರೆ, ಭವವಲ್ಲದ ಕೆರೆ, ಅಭವನ ಕೆರೆ. ಇದು ಅಭವನ ಹೃದಯವಾದುದರಿಂದ ಇದು ಬೆಂದ ನುಲಿಯಂತೆ. ಅಂದರೆ ಅಹಂಕಾರ ದಗ್ಧವಾಗಿರುವದರಿಂದ ಭವಿಯಲ್ಲ ಭಕ್ತೆಯಲ್ಲ . ಛಲವಂತಳಲ್ಲ ಛಲಗೇಡಿಯಲ್ಲ , ಅರ್ಪಿತಳಲ್ಲ ಅನರ್ಪಿತಳಲ್ಲ , ಅನಾನುಭವಿಯಲ್ಲ ಅನುಭವಿಯಲ್ಲ , ಕೂಡಿದವಳಲ್ಲ ಅಗಲಿದವಳಲ್ಲ ಆವಾವ ಕರ್ತೃತ್ವದ ಹೊಣೆ ಹೊತ್ತಿಲ್ಲವಾದ್ದರಿಂದ ಹಿಂದಣಂಗವಿಲ್ಲ, ಏಕೆಂದರೆ ನಿರ್ನಾಮನಾಶ್ರಯ ಮಾಡಿದವಳಿಗೆ ನಾಮದಾಶ್ರಯವೆಲ್ಲಿ? ವಿಮಲನಾಶ್ರಯ ಮಾಡಿದವಳಿಗೆ ಮಲಮಯ ದಾಶ್ರಯವೆಲ್ಲಿ ? ನಿರುಪಾಧಿ ನಿರವಯನಾಶ್ರಯ ಮಾಡಿದವಳಿಗೆ ಉಪಾಧಿ ಎಲ್ಲಿ , ಅವಯಂಗಳೆಲ್ಲಿ ?

ನಿರ್ಗುಣನಾಶ್ರಯ ಮಾಡಿದವಳಿಗೆ ಪ್ರಕೃತಿ ಆವುದು? ಪುರುಷ ಆವುದು? ಮೇರೆದಪ್ಪಿದವನ ಆಶ್ರಯ ಮಾಡಿದವಳಿಗೆ ಕೆಡುವುದಾವುದು, ಕೆಡದ್ದಾವದು? ನಿರ್ಭೇದ್ಯನಾಶ್ರಯ ಮಾಡಿದವಳಿಗೆ ಬೇಧಾಬೇಧದಾಶ್ರಯವೆಲ್ಲಿ? ಅದ್ವಿತೀಯನಾಶ್ರಯ ಮಾಡಿದವಳಿಗೆ ಸ್ವಮತವಾವುದು? ಪರಮತವಾವುದು? ಅಕ್ಷರೋತ್ತಮನಾಶ್ರಯ ಮಾಡಿದವಳಿಗೆ ಅನಿತ್ಯವಾವುದು, ನಿತ್ಯವಾವುದು? ಅಚಿಂತ್ಯ ಅಪ್ರಮಾಣ ರೂಪ ಚೆನ್ನಮಲ್ಲಿಕಾರ್ಜುನನಂಗ ಆಶ್ರಯ ಮಾಡಿರುವದರಿಂದ ಪ್ರಮಾಣರೂಪ ಲೋಕದವರ ಸಂಬಂಧವಿಲ್ಲವಯ್ಯಾ .

**23**

**ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ,**
**ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೆ,**
**ನಾನೊಲಿದೆನಯ್ಯಾ ಚೆನ್ನಮಲ್ಲಿಕಾರ್ಜುನ ಗಂಡನೆನಗೆ,**
**ಮಿಕ್ಕ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯಾ .**

**ತಾತ್ಪರ್ಯ :** ಗಂಡರು ಈರ್ವರು. ಅಜ್ಞಾನ ದೃಷ್ಟಿಗೆ ತೋರುವ ಗಂಡ; ಲೋಕದೊಳ್ ವ್ಯಾಮೋಹಿರೂಪಿ ಸ್ತ್ರೀಯರ ಗಂಡ ಒಬ್ಬ, ಈ ಸ್ತ್ರೀಯರ ಗಂಡ ಬಹುಪುರುಷ ರೂಪಾಗಿ ತೋರುವನು. ಲಿಂಗಾಂಗ ಸಮರಸ ಜ್ಞಾನ ದೃಷ್ಟಿಗೆ ಪ್ರಕಾಶಮಯನಾಗಿ

ಸ್ವಪ್ರಕಾಶಿಸುವ ಗಂಡ ತೋರದಡಗದ ಗಂಡ. ಸ್ತ್ರೀಯರ ಕಂಡು ವ್ಯಾಮೋಹಿಯಾಗಿರುವ ಪುರುಷರೂಪಿ ಗಂಡ, ಭೋಗದ ಗಂಡ. ಈ ಗಂಡನು ಚೆಲುವನಾಗಿ ಕಾಣಿಸುತ್ತಾನೆ. ಆದರೆ ಈ ಚೆಲುವತನ ಭಯವುಳ್ಳ ಸಾವುಳ್ಳ ಕೇಡುಳ್ಳ ರೂಪನಿಂದುಕ್ತವಾದ ಚೆಲುವತನ. ನಿಜವಾದ ಚೆಲುವತನವಲ್ಲ . ಭವವಿಲ್ಲದ ಚೆಲುವ ನಿರ್ಭಯ ಚೆಲುವ. ಈತ ನಿಜವಾದ ಚೆಲುವ. ಈ ಕೇಡುಳ್ಳ ಬಾಲ್ಯ ಯೌವ್ವನ, ಮುಪ್ಪಿನಿಂದುಕ್ತವಾದ ಚೆಲುವ ಬಾಲ್ಯದಲ್ಲಿಯ ಚೆಲುವತನ ಯೌವ್ವನದಲ್ಲಿ ಇರುವುದಿಲ್ಲ . ಯೌವ್ವನದಲ್ಲಿದ್ದ ಚೆಲುವತನ ಮುಪ್ಪಿನಲ್ಲಿರುವುದಿಲ್ಲ . ಮುಪ್ಪಿನ ಲ್ಲಿದ್ದ ಚೆಲುವತನ ಸಾವಿನಲ್ಲಿರುವುದಿಲ್ಲವಾದ್ದರಿಂದ ಈತ ಕೇಡುಳ್ಳ ಚೆಲುವ, ಸಾವುಳ್ಳ ಚೆಲುವ, ಭಯವುಳ್ಳ ಚೆಲುವ, ಭವರೂಪಿ ಚೆಲುವ. ಆದರೆ ಈ ಚೆಲುವುಳ್ಳ ಸುಂದರತ್ವ ಲೋಕದೃಷ್ಟಿಗೆ ಕಾಣಿಸುತ್ತದೆ. ಈ ಸುಂದರತ್ವ ಎಲ್ಲಿಯದು ಯಾರದು? ಇದು ತನ್ನದೊ ಅನ್ಯರದೊ? ತನಗಿಂತ ಭಿನ್ನವೊ ಎಂದು ವಿಚಾರಿಸಿ ನೋಡಲು ಮತ್ತೆ ಶೃತಿ ಆಗಮಗಳನ್ನು ನೋಡಲು ಸಚ್ಚಿತ್ಸುಖಂ ಸುಂದರಂ ಸತ್ಯಂ ಶಿವಂ ಸುಂದರಂ ಎಂದು ನಮಗೆ ಬೋಧಿಸುವುದೆಂದಲ್ಲಿ , ಈ ಸುಂದರತ್ವ ಸಕಲದಲ್ಲಿ ತುಂಬಿ ತುಳಕದಂತಿರುವುದರಿಂದ, ಪಿಂಡಾಂಡ ಬ್ರಹ್ಮಾಂಡಗಳು ಬಹು ಪ್ರಿಯವಾಗಿ, ಅಲ್ಲದೆ ಬಹುಸುಂದರವಾಗಿ ಭಾಸಿಸುತ್ತವೆ. ಈ ಸುಂದರತ್ವ ಇಲ್ಲದ ಸ್ಥಾನವೇ ಇಲ್ಲ. ಮತ್ತು ಈ ಸುಂದರತ್ವದ ಹೊರತಾಗಿ ಅನ್ಯವಸ್ತು ಆವುದೂ ಇಲ್ಲವಾದ್ದರಿಂದ, ಇದು ಸರ್ವಮಂಗಳಮಯವಾಗಿರುವ ಸತ್ಯಸ್ವರೂಪಿಯಾದ ಶಿವನದೆ.

ಶಿವನೆಂದರೆ ತ್ರಿಕಾಲಬಾಧಿತವಾಗಿರುವುದಾವುದೊ ಅದುವೆ ಸತ್ಯ , ಸತ್ಯವೆಂದರೆ ಸರ್ವ ಸಮನಾದ ಸತ್ಯ. ಅದು ಸತ್ಯಾಸತ್ಯವೆಂಬ ವಿಚಾರಕ್ಕೂ ವಿಭಾಗಕ್ಕೂ ಮೀರಿದುದು. ಅದು ಆದಿ ಆಧಾರವಾಗದಂದು, ಹಮ್ಮು ಬಿಮ್ಮು ಆಗದಂದು, ಸಾಕಾರ ನಿರಾಕಾರ ಆಗದಂದು, ಇದ್ದಕ್ಕಿದ್ದಂತಿರುವ ಸರ್ವಮಂಗಳಮಯ ಸತ್‌ಸ್ವರೂಪ. ಈ ಸದ್ವಸ್ತು ಕಲ್ಪಿತ ಕಲ್ಪನೆಯಿಂದ ಗೊತ್ತಾಗದು. ನಿತ್ಯಾನಿತ್ಯವೆಂಬ ವಿವೇಕಕ್ಕೂ ಗೊತ್ತಾಗದು. ಅಲ್ಲಿ ವಿಭಾಗಕ್ಕೆಡೆಯಿಲ್ಲ . ಅಂಥ ಸತ್‌ಸ್ವರೂಪದ ಸತ್ತಾದ ಘನತ್ವವೆ ಸಕಲದರೋಳ್ ಹಾಸು ಹೊಕ್ಕಿದೆ. ಅದು ನಿಸ್ಸೀಮವು ಮತ್ತು ಸಕಲ ತತ್ವಗಳ ಸತ್ತಾಸ್ವರೂಪ. ಈ ಸತ್ತಾ ಸ್ವರೂಪವೆ ಬಹು ಸುಂದರವಾಗಿ ಭಾಸಿಸುತ್ತದೆ. ಅದುವೆ ಬಹು ಚೆಲುವ. ಈ ಚೆಲುವನೆ ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವ. ಏನೊಂದಾಗದ ಚೆಲುವ, ಇದ್ದಕ್ಕಿದ್ದಂತಿರುವ ಅಕಲಂಕ ಚೆಲುವ, ನಿರ್ಮಾಯ ಚೆಲುವ, ಸತ್ ಚಿತ್ತ ಸುಖಸ್ವರೂಪ ಚೆಲುವ. ಪೂರ್ಣ ಚೆಲುವನಾದುದರಿಂದ, ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವನೆ ನನ್ನ ಸದೃಶವಪ್ಪ ಚೆಲುವ. ಈ ಚೆಲುವುಳ್ಳವನೆ ಸಕಲ ಲೋಕಂಗಳ ಚೆಲುವ. ಅಗಮ್ಯ ಚೆಲುವ, ಈತನೇ ಚೆಂದೆನ್ನ ಚೆಲುವನಾದುದರಿಂದ ನಾನು ಈತನಿಗೆ ಒಪ್ಪಿ ರುವೆ. ಅದಕ್ಕಾಗಿ ಈ ಚೆಲುವುಳ್ಳ ಚೆನ್ನಮಲ್ಲಿಕಾರ್ಜುನನೆ ನನಗೆ ಗಂಡನಲ್ಲದೆ ಲೋಕದ ಗಂಡರ ಸಂಬಂಧ ಎನಗಿಲ್ಲ ಪ್ರಭುವೆ. ಲೋಕದಗಂಡ ಕೆಡುವ ಗಂಡ ಭವಕ್ಕೊಳಪಟ್ಟ ಗಂಡ ಭಯವುಳ್ಳ ಗಂಡ, ಈ ಗಂಡ ಲಿಂಗಾಂಗ ಸಮರಸ ತತ್ವ ತಿಳಿಯದ ಗಂಡ. ತಾನಾರೆಂದರಿಯದ ಗಂಡ, ಮರವಿನಲ್ಲಿದ್ದ ಗಂಡ, ದೇಹ ಬುದ್ಧಿಯ ಗಂಡ ದೇಹವೇ ತಾನೆಂದೆನ್ನುವ ಗಂಡ, ದಡ್ಡಗಂಡ. ನಮ್ಮವರು ಅಂದರೆ ಶರಣರು. ಲಿಂಗಾಂಗ ಸಮರಸಜ್ಞಾನಿಗಳು. ಆದುದರಿಂದ ದಡ್ಡ ಗಂಡಗೆ ಕೊಡಲಿಲ್ಲ . ಪ್ರಭುವಿನ ಮನೆಗೆ ಸಾದೃಶ್ಯವಪ್ಪ ವರನ ನೋಡಿ ಕೊಟ್ಟಿರುವುದರಿಂದ ಚೆನ್ನಮ ಲ್ಲಿಕಾರ್ಜುನನೆ ಗಂಡನೆನಗೆ. ಮಿಕ್ಕಿದ ಲೋಕದ ಗಂಡನೆನಗೆ ಸಂಬಂಧವಿಲ್ಲವಯ್ಯಾ ಹೀಗೆಂದು

ಮಹಾದೇವಿಯಕ್ಕಗಳು ಬಿನ್ನೈಸಲು.

ಇದಕ್ಕೆ ಪ್ರಭುದೇವರು ಆ ಉತ್ತರಮಂ ಖಂಡಿಸಿ ನುಡಿದ ಪ್ರಸಾವದ ವಚನ.

**24**

**ರೂಪಿಂಗೆ ಕೇಡುಂಟು, ನಿರೂಪಿಂಗೆ ಕೇಡಿಲ್ಲ.**
**ರೂಪ ನಿರೂಪನೊಡ ಗೂಡುವ ಪರಿ ಎಂತವ್ವ ?**
**ಅಸಂಬಂಧ ಸಂಬಂಧವಾಗಿ ಇದೆ.**
**ದೇಹ ಇಂದ್ರಿಯವೆಂಬ ಜಾತಿ ಸೂತಕವಿರಲು**
**ಗುಹೇಶ್ವರ ಲಿಂಗವ ಮುಟ್ಟ ಬಾರದು ಕೇಳವ್ವಾ .**

**ತಾತ್ಪರ್ಯ** : ರೂಪೆಂಬುದು ಸಾವಿನಿಂದುಕ್ತವು, ನಿರೂಪವೆಂಬುದು ಸಾವಿಲ್ಲದುದು. ರೂಪ, ಬಾಧಿತವುಳ್ಳದು. ನಿರೂಪ ಅಬಾಧಿತವು. ರೂಪ ನಿರೂಪ ನೊಡಗೂಡುವ ಪರಿ ಎಂತು? ರೂಪ ತೋರಿಕೆಯಿಂದುಕ್ತವು. ನಿರೂಪ ಸಕಲ ತೋರಿಕೆಯಿಂದ ಪಾರಾದುದು. ವ್ಯಕ್ತವು ಅವ್ಯಕ್ತ ನೊಡಗೂಡುವ ಪರಿ ಎಂತು ? ರೂಪ ಮಾಯಿಕವು ನಿರೂಪ ಮಾಯಾತೀತವು. ಮಾಯಿಕ ನಿರ್ಮಾಯನೊಡಗೂಡುವ ಪರಿ ಎಂತು? ರೂಪ ರಂಜನೆಯಿಂದುಕ್ತವು, ನಿರೂಪ ರಂಜನೆಯಿಂದ ಅತೀತವು. ರಂಜನೆಯು ನಿರಂಜನ ನೊಡಗೂಡುವ ಪರಿ ಎಂತು ? ರೂಪ ಭಾವದಿಂದುಕ್ತವು ನಿರೂಪ ಭಾವಾತೀತವು. ಭಾವ ನಿರ್ಭಾವ ನೊಡಗೂಡುವ ಪರಿ ಎಂತು ? ರೂಪ ಸ್ವಗತಾದಿ ಬೇಧವುಳ್ಳದು, ನಿರೂಪ ನಿರ್ಬೋಧ್ಯವು, ಜಾತವು ಅಜಾತ ನೋಳ್ ಸಮರಸವಾಗುವ ಪರಿ ಎಂತು? ರೂಪ ದಾಹಕವುಳ್ಳದು ನಿರೂಪ ಅದಾಹ್ಯವು ದಾಹಕವು ಅದಾಹ್ಯನೊಡಗೂಡುವ ಪರಿ ಎಂತು? ರೂಪ ನಾಮದಿಂದುಕ್ತವು, ನಿರೂಪ ಅನಾಮಯವು. ನಾಮ ಅನಾಮನೊಡಗೂಡುವ ಪರಿ ಎಂತು? ರೂಪ ಮಲಮಯವು ನಿರೂಪ ವಿಮಲಮಯವು, ಮಲಮಯವು ವಿಮಲನೊಡಗೂಡುವ ಪರಿ ಎಂತು ? ರೂಪ ನಾಶವುಳ್ಳದು ನಿರೂಪ ಅವಿನಾಶಿಯು, ಕ್ಷಯ ಅಕ್ಷಯನೊಡಗೂಡುವ ಪರಿ ಎಂತು ? ರೂಪ ಸೀಮೆಯಿಂದುಕ್ತವು, ನಿರೂಪ ಸೀಮಾತೀತವು ಸೀಮೆ ನಿಸ್ಸೀಮ ನೊಡಗೂಡುವ ಪರಿ ಎಂತು? ರೂಪ ಮಾತು ಮನಸಿಗೊಳಪಟ್ಟದ್ದು ನಿರೂಪ ಅವಾಙ್ಮನಸಗೋಚರ. ದೃಶ್ಯ ಅದೃಶಿಯ ನೊಡಗೂಡುವ ಪರಿ ಎಂತು ? ರೂಪ ಪುಸಿ ನಿರೂಪ ದಿಟ. ಪುಸಿ ದಿಟವ ನೋಡಗೊಡುವ ಪರಿ ಎಂತು? ರೂಪ ಕಲಂಕ, ನಿರೂಪ ನಿಃಕಳಂಕ. ಕಳಂಕ ಅಕಳಂಕ ನೊಡಗೂಡುವ ಪರಿಎಂತು? ರೂಪ ಭ್ರಾಂತಿಮಯ, ನಿರೂಪ ಬ್ರಹ್ಮಮಯ. ಭ್ರಾಂತಿಯು ಬ್ರಹ್ಮನೊಡಗೂಡುವ ಪರಿ ಎಂತು ? ಕೂಡಲಿಲ್ಲದ ಘನದೋಳ್ ನೀ ಕೂಡಿದ ಪರಿ ಎಂತು? ಅಚಿಂತ್ಯ ಘನದೋಳ್ ಚಿಂತನದಿಂದುಕ್ತಳಾಗಿ ನೀ ಕೂಡಿದ ಪರಿ ಎಂತು? ಗುಣಯುಕ್ತಳಾದ ನೀನು ಅಗಣಿತ ನೊಡಗೂಡುವ ಪರಿ ಎಂತು? ಇದು ಅಸಂಬಂಧ ಸಂಬಂಧವಾದುದು ಆಶ್ಚರ್ಯ ನೋಡವ್ವಾ . ಬೆಳಕು ಬೆಳಕೆ. ಕತ್ತಲೆ ಬೆಳಕನೊಡಗೂಡುವುದು ಅಸಂಬಂಧ ಸಂಬಂಧವಾಗಿದೆ. ಅಮೃತವು ಅಮೃತವೆ, ವಿಷವು ಅಮೃತವ ನೊಡಗೂಡವುದು ಅಸಂಬಂಧ ಸಂಬಂಧವಾಗಿದೆ. ದೇಹ ಇಂದ್ರಿಯವೆಂಬ ಜಾತಿ ಸೂತಕ ವಿರಲು ಗುಹೇಶ್ವರಲಿಂಗ

ಮುಟ್ಟಬಾರದು. ಜಾತನು ಅಜಾತನ ಮುಟ್ಟಬಹುದೆ? ಸೂತಕಿಯು ನಿಃಸೂತಕಿಯಾಗಬಹುದೆ? ಉಪಾಧಿಯೆಂಬ ಜಾತಿ ಸೂತಕವಿದ್ದಾಗ ನಿರುಪಾಧಿಯಾದ ನಿರಾಲಂಬನೊಡಗೂಡಬಹುದೆ? ಕಾಯವಾಸನೆ ನಿಃಕಾಯನ ಮುಟ್ಟಬಹುದೆ ಇಂದ್ರಿಯಂಗಳುಳ್ಳವಳಾಗಿ ಅತೀಂದ್ರಿಯನನ್ನು ಮುಟ್ಟಬಹುದೆ? ಅದಕ್ಕಾಗಿ ದೇಹ ಇಂದ್ರಿಯವೆಂಬ ಜಾತಿ ಸೂತಕವಿರಲು ಗುಹೇಶ್ವರ ಲಿಂಗವ ಮುಟ್ಟಬಾರದು ಕೇಳವ್ವಾ.

**25**

**ಹಾವಿನ ಹಲ್ಲು ಕಳೆದು ಹಾವನಾಡಿಸ ಬಲ್ಲರೆ ಹಾವಿನ ಸಂಗವೆ ಲೇಸು ಕಂಡಯ್ಯಾ.**
**ಕಾಯ ಸಂಗವ ವಿವರಿಸ ಬಲ್ಲರೆ ಕಾಯದ ಸಂಗವೆ ಲೇಸು ಕಂಡಯ್ಯಾ.**
**ತಾಯಿ ಠಕ್ಕಸಿಯಾದಂತೆ ಕಾಯ ವಿಕಾರವು ಚೆನ್ನಮಲ್ಲಿಕಾರ್ಜುನಯ್ಯಾ ,**
**ನೀನೊಲಿದವರ ಕಾಯಗೊಂಡಿದ್ದರೆನಬೇಡ.**

**ತಾತ್ಪರ್ಯ :** ಹಾವು ಆಡಿಸಬೇಕಾದರೆ ಅದರ ಹಲ್ಲು ಕಳೆದು ಹಾವನಾಡಿಸಬೇಕು. ಹಾಗಾದರೆ ಹಾವಿನ ಸಂಗವೆ ಲೇಸು. ಹಾಗೆಯೇ ಅದರ ಸಂಗ ಮಾಡಿದರೆ ದುಖಃಕ್ಕೆ ಕಾರಣ, ಭಯಕ್ಕೆ ಕಾರಣ, ಮೃತ್ಯುವಿಗೆ ಕಾರಣ. ಏಕೆಂದರೆ ಅದು ವಿಷಜಂತುದಿಂದುಕ್ತವಾದ ಜಂತು . ಈ ಜಂತು ಜಗವನ್ನೇ ಭಯ ಕಂಪನವನ್ನುಂಟುಮಾಡುತ್ತದೆ. ವಿಷವನ್ನು ತುಂಬಿಕೊಂಡಿರುವ ಹಲ್ಲಿನ ಸಲುವಾಗಿ ಈ ವಿಷದಂತವಿರುವುದಕ್ಕಾಗಿ ಸಕಲರು ಇದನ್ನು ನೋಡಿ ಭಯಭೀತರಾಗುತ್ತಾರೆ. ವಿಷದಂತದಿಂದುಕ್ತವಾದ ಸರ್ಪವನ್ನು ಯುಕ್ತಿಯಿಂದ ಹಿಡಿದು ಇಕ್ಕಳದಿಂದ ವಿಷದ ಹಲ್ಲುಗಳು ತೆಗೆಯಲು ಆಗ ಅದರಿಂದ ಅಪಾಯವಿಲ್ಲ, ಆಗ ಹಾವಾಡಿಗನು ನಡಗುವುದಿಲ್ಲ, ಅನ್ಯರು ನಡುಗ ಬೇಕಾಗಿಲ್ಲ. ಇದು ಕಾರಣ ಹಾವಾಡಿಗನು ಹಾವಿನ ಸಂಗ ಮಾಡಿಯೆ ಅದರಿಂದಲೆ ಸುಖರೂಪವಾಗಿ ತನ್ನ ಸಂಸಾರ ನಡೆಸುತ್ತಾನೆ.

ಲೋಕ ದೃಷ್ಟಿಗೆ ಹಾವಿನ ಸಂಗ ಕೇಡಾದರೆ, ಹಾವಾಡಿಗನಿಗೆ ಅದರ ಸಂಗ ಹೇಗೆ ಹಿತವಾಗಿದೆಯೋ ಹಾಗೆ ಕಾಯ ಸಂಗ ಮಾಡಬೇಕಾದರೆ, ಕಾಯದ ಸಂಗ ಯಾವ ರೀತಿಯಿಂದ ಮಾಡಬೇಕು ? ಇದರ ಸಂಗ ಮಾಡದ ವಿನಃ ಗತ್ಯಂತರವಿಲ್ಲ, ಗತ್ಯಂತರವಿಲ್ಲವೆಂದು ಇದರ ಸಂಗ ಮಾಡಲು ಅನರ್ಥಕ್ಕೆ ಕಾರಣ. ಕಾಯದ ಸಂಗ ವಿವರಿಸದೆ, ವಿಚಾರ ಮಾಡದೆ, ಕಾಯದ ಸ್ವರೂಪ ತಿಳಿಯದೆ, ಕಾಯದ ಸಂಗ ಮಾಡಿದುದೆ ಆಪತ್ತಿಗೆ ಕಾರಣ. ಮರವಿಗೆ ಕಾರಣ, ಅಹಂಕಾರ ಮಮಕಾರಕ್ಕೆ ಕಾರಣ, ಕಾಮಾದಿಗಳಿಗೆ ಕಾರಣ, ವಿಷಯಾಸಕ್ತಿಗೂ ವ್ಯಸನಕ್ಕೂ ಕಾರಣ, ಭವಕ್ಕೂ ಭವದ ಭೀತಿಗೂ ಚಿಂತೆಗೂ ಕಾರಣವಾಯಿತಲ್ಲದೆ, ಅಮರತ್ವಕ್ಕೆ ಕಾರಣವಾಗಲಿಲ್ಲ, ಅಕ್ಷಯ ಸುಖಕ್ಕೆ ಕಾರಣವಾಗಲಿಲ್ಲ, ಇಂದ್ರಿಯಂಗಳ ವಿಕಾರಕ್ಕೆ ಕಾರಣವಾಯಿತಲ್ಲದೆ ನಿರ್ವಿಕಾರದ ಘನತ್ವವರಿಯಲು ಕಾರಣವಾಗಲಿಲ್ಲ, ಕಾಯದ ವಿವರವನ್ನು ವಿವೇಕ ವೈರಾಗ್ಯವಂತರಾಗಿ ಅರಿಯಬೇಕು. ಮತ್ತು ಕಾಯದೊಳಗಿದ್ದವನನ್ನು ಚೆನ್ನಾಗಿ ಅರಿಯಬೇಕು.

ಕಾಯವೆಂದರೇನು? ಕಾಯವೆಂದರೆ ಇದು ಮಲ ಮೂತ್ರ ರಕ್ತ ಮಾಂಸ ಮಜ್ಜೆ ಅಸ್ಥಿಪಂಜರಗಳಿಂದುಕ್ತವಾದುದು. ಮತ್ತು ಚರ್ಮವನ್ನು ಹೊದ್ದಿಸಿದ ಹೇಯದ ಕಾಯ. ಹಾಗೂ ನವದ್ವಾರಗಳಿಂದ ಸೋರುವ ಕಾಯ. ಈ ಕಾಯದ ಅಭಿಮಾನವಾಗಲಿ, ಮಮಕಾರವಾಗಲಿ ಮಾಡುವುದು ಸರಿಯೆ ? ಮಲಮೂತ್ರಗಳನ್ನು ಯಾರಾದರೂ ಅಭಿಮಾನ ಮಮಕಾರದಿಂದಾಗಲಿ

ಮಾಡುವರೆ? ಆರು ಮಾಡರು. ಕಾರಣ ನೀನು ಕೂಡಾ ಇದರ ಅಹಂ ಮಮ ಮಾಡಬೇಡ. ಈ ಕಾಯ ಶಾಶ್ವತವೋ ? ಇದು ನೀರಿನ ಮೇಲಿರುವ ಗುರುಳೆ. ನೋಡು ನೋಡುವುದರಲ್ಲಿ ಹೇಗೆ ಒಡೆದು ಹೋಗುವುದೋ ಅದರಂತೆ ಕಾಯ ಅಶಾಶ್ವತ . ಈ ಕಾಯ ಇದ್ದಕ್ಕಿದ್ದ ಹಾಗೆ ಇರುವುದೋ ರೂಪಾಂತರ ಹೊಂದುವದೋ ? ಈ ಕಾಯ ಅಮಂಗಲಕಾಯ. ಇದ್ದಕ್ಕಿದ್ದಂತೆ ಇರುವುದು ಗೊತ್ತಿಲ್ಲ. ಇದು ಷಡಕ್ಷರ ಕಾಯ , ತಾಯಿಗರ್ಭದಲ್ಲಿದ್ದಾಗಲೂ ರೂಪಾಂತರ ಹೊಂದುತ್ತಿರುತ್ತದೆ ಹೊರಗೆ ಬಂದ ನಂತರವು ಜನನ ಬಾಲ್ಯ ಯೌವನ ಮುಪ್ಪು ಮರಣಗಳಿಂದ ರೂಪಾಂತರ ಹೊಂದುವದಲ್ಲದೆ ನೂರಾರು ನೋವಿನಿಂದ ಕೂಡಿ ಸೊರಗುವದು ಸೊಕ್ಕುವದು ಹೀಗೆ ನಡದೆ ಇರುತ್ತದೆ. ಈ ಕಾಯದಭಿಮಾನ ಮಮಕಾರ ಮಾಡಿದವರುಂಟೆ?

ಈ ಕಾಯದಭಿಮಾನ ಮಮಕಾರ ಮಾಡಿದವರೆ ಹೆಚ್ಚು, ಅವರೇ ಸಾಕಷ್ಟು ಜನ ಸಿಗುವರು. ಈ ಕಾಯದಭಿಮಾನ ಮಮಕಾರವ ಮಾಡಿ ಆರಾದರೂ ಪರಮಸುಖಿಗಳಾಗಿದ್ದಾರೆಯೆ? ಪರಮಧಾಮವನ್ನು ಕಂಡಿದ್ದಾರೆಯೇ? ಪ್ರತಿಭಾವಂತರಾಗಿದ್ದಾರೆಯೇ? ಲೋಕನಾಯಕ ರಾಗಿದ್ದಾರೆಯೇ? ಈ ಕಾಯಾಭಿಮಾನಿಗಳಾಗಿ ಆರೂ ಪರಮಸುಖಿಗಳಾಗಿಲ್ಲ ಮೋಕ್ಷಧಾಮ ನೋಡಿದವರಿಲ್ಲ. ಇದರಭಿಮಾನಿಗಳಾಗಿ ದೇವತಾದೈತ್ಯರು ದುಃಖಃಕೀಡಾದ ಇತಿಹಾಸ ಪುರಾಣಗಳಿವೆ, ಮಾನವರ ಕಥೆಗಳಿವೆ. ಇದರಿಂದ ತಮ್ಮ ಪ್ರತಿಭೆ ಹಾಳಾಗಿದ್ದು ಹಿಂದಿನವರ ಉದಾಹರಣೆಗಳಿವೆ, ಈಗಿನವರ ಉದಾಹರಣೆಗಳಿವೆ. ತಮ್ಮ ಘನತ್ವವಾದ ಆತ್ಮ ಶಕ್ತಿಯನ್ನು ಕಳೆದುಕೊಳ್ಳುವಾಗ ಈ ಮನೆಯ ನಾಯಕರು ಆಗಲು ಅನರ್ಹರು. ಇವರು ಲೋಕದ ನಾಯಕರು ಆಗುವದು ಯಾವಾಗ?

ಕಾಯದೊಳಿರುವವನು ಶಾಶ್ವತವೋ ? ಕಾಯದೊಳಗಿರುವವನು ಶಾಶ್ವತ, ಅವನು ಅವಿನಾಶಿ . ಕಾಯದೊಳಿರುವವನು ತಾನೊ ತನಗಿಂತ ಭಿನ್ನನೋ ಅಭಿನ್ನನೋ? ತನ್ನ ಮನೆಯೊಳಗಿದ್ದವ ತಾನಲ್ಲದೆ ಅನ್ಯರು ಹೇಗಾಗರೋ ಹಾಗೆ ಈ ದೇಹವೆಂಬ ಮನೆಯಲ್ಲಿದ್ದವ ದೇಹರೂಪಿ ಆತ್ಮ ತಾನು, ತನಗಿಂತ ಬೇರೆ ಯಾರೂ ಇಲ್ಲ. ಇನ್ನೊಬ್ಬನಿದ್ದರೆ ಭಿನ್ನ ಅಭಿನ್ನನೆಂದು ಹೇಳಲು ಬರುತ್ತಿತ್ತು. ತಾನೊಬ್ಬನೆ ಇರುವದರಿಂದ ಭಿನ್ನನೆನ್ನಲು ಬರದು ಅಭಿನ್ನನೆನ್ನಲು ಬರದು.

ಈ ಕಾಯದೊಳಿದ್ದವನು ಸಂಗಿಯೋ ನಿಸ್ಸಂಗಿಯೋ? ಈ ಕಾಯದೊಳಿದ್ದ ಘನ ಲಿಂಗವನ್ನು ಕೆಲವರು ಕಾಯದ ಸಂಗಿಯೆಂದು ತಿಳಿದು ಕಾಯದ ಅಹಂಕಾರ ಮಮಕಾರದಿಂದ ಕೂಡಿ ಜೀವಿಗಳೆಂದೆನಿಸಿಕೊಂಡರು. ಈ ಕಾಯದೊಳಗಿದ್ದ ಘನಲಿಂಗವ ತಿಳಿದು ಕೆಲವರು ನಿಸ್ಸಂಗಿಗಳಾಗಿ ನಿರ್ವೋಹಿಗಳಾಗಿ ನಿರಹಂಕಾರ ನಿರಾಡಂಬರದವರಾಗಿ ನಿರಾಲಂಬವಾದ ಘನಲಿಂಗ ಸುಖದಲ್ಲಿರುವದರಿಂದ ಲಿಂಗವೆನಿಸಿಕೊಂಡರೂ ಲೋಕ ಪೂಜ್ಯರಾದರು.

ಹೀಗೆ ಕಾಯ ಸಂಗ ವಿವರಿಸಿ ತಾನಾರೆಂದು ತಿಳಿದರೆ ಈ ಕಾಯ ಸಚ್ಚಿದಾನಂದ ಕಾಯವಾಗುವುದು. ಆಗ ಈ ಕಾಯದ ಸಂಗ ಲೇಸು, ಅಂದರೆ ತನ್ನ ಸ್ವರೂಪವಾದ ಘನಲಿಂಗ ಸುಖದ ಸುಖ ಇದರಿಂದಲೆ ಪ್ರಾಪ್ತವಾಗುವಾಗ ಈ ಕಾಯದ ಸಂಗ ಲೇಸಲ್ಲದೆ ಮತ್ತೇನು?

**ಕಾಯ ವಿಕಾರವೆಂಬುದು ತಾಯಿ ರಕ್ಕಸಿಯಾದಂತೆ :** ಬಾಣಂತಿಯು ಆವುದೆ ಕಾರಣದಿಂದ ಕಾಯವಿಕಾರವಾಯಿತೆಂದರೆ ತಲೆ ಕೆಟ್ಟವಳು ಎಂದು ಸಿದ್ಧವಾಗುವುದು. ಆಗ ಈ ಕೂಸಿಗೆ ಬಾಣಂತಿಯಾಗಿದ್ದರೂ ತಾಯಿಯೆ ಇದನ್ನು ಹಡದವಳಾನು ಎಂಬಂತೆ ವಿಸ್ಮೃತಿಯಾಗಿದೆ. ಅಂದರೆ ಹಡದ ಜ್ಞಾನ ಈ ಕೂಸು ನನ್ನದೆಂಬ ಭಾವನೆ ಇಲ್ಲವಾದಾಗ ಅವಳು ಆ ಕೂಸಿನ ತಾಯಿ

ಹೇಗಾಗುವಳು?

ಏಕೆಂದರೆ ಆ ಕೂಸನ್ನು ಪಾಲನೆ ಮಾಡುವ ಭಾವ ಕಳಕಳಿ ಕರುಣೆ ಕರಳುಳ್ಳವಳು ತಾಯಿ ಎನಿಸುವಳು. ತಲೆ ಕೆಟ್ಟ ತಾಯಿ ಆ ಕೂಸಿಗೆ ಪಾಲನೆ ಹೇಗೆ ಮಾಡುವಳು ? ಕಾರಣ ಕಾಯವಿಕಾರವು ಆ ಕೂಸಿಗೆ ತಾಯಿಯಾಗಿದ್ದರೂ ರಾಕ್ಷಸಿಯಾಯಿತು. ಹಾಗೆ ಜೀವನೆಂಬ ಹಸುಗೂಸಿಗೆ ಈ ದೇಹದ ಅಹಂತ್ವ ಮಮತ್ವವೆಂಬ ತಾಮಸಿ ಗುಣದ ಕಾಯವಿಕಾರ ರೂಪ ಜ್ಞಾನವಾಗಲಿ, ಭಾವವಾಗಲಿ, ಚೇತನರೂಪಿ ಜೀವನೆಂಬ ಕೂಸಿಗೆ ವಿಸ್ಮೃತಿ ದೂರ ಮಾಡದು. ತ್ರಿವಿಧ ತಾಪ ಕಳೆಯದು, ಮರವು ಹರಿಯದು, ದೇಹ ಬುದ್ಧಿ ಕೆಡಿಸದು, ಸುಖ ಶಾಂತಿಯನ್ನುಂಟುಮಾಡದು, ಭವ ಬಿಡದಿರುವಾಗ ಈ ದೇಹ ಭಾವರೂಪಿ ಕಾಯವಿಕಾರವುಳ್ಳ ತಾಯಿ ಜೀವನೆಂಬ ಹಸುಗೂಸಿಗೆ ಭವ ಭವಾಂತರದಲ್ಲಿ ಜನ್ಮ ಕೊಡುವ ಮರಣವನ್ನುಂಟು ಮಾಡುವ ರಾಕ್ಷಸಿಯು ಎನಿಸುವಳು.

ಕಾರಣ ಜೀವನೆಂಬ ಅಂಗನು ಲಿಂಗರೂಪ ಚಿತ್ಪ್ರಕಾಶ ಚಿದ್ಘನದಲ್ಲಿ ಸಮರಸವಾಗಲು ದೇಹಬುದ್ಧಿ ಇರಕೂಡದು, ದೇಹದ ಮಮಕಾರವು ಇರಕೂಡದು, ದೇಹದ ತಾದಾತ್ಮ್ಯಗೆ ಎಳ್ಳಷ್ಟು ಅವಕಾಶವಿರದಿದ್ದರೆ ಮಾತ್ರ ಚೆನ್ನಮಲ್ಲಿಕಾರ್ಜುನಯ್ಯಾ ಅದು ನೀನು ಒಲಿದವರ ಕಾಯ ಅವರನ್ನು ಕಾಯಗೊಂಡಿದ್ದವರು. ಎನಬೇಡ ಪ್ರಭುವೆ.

**26**

**ತನುಗುಣ ವಿವರಿಸಿಹೆನೆಂದರೆ ಮನಶುದ್ಧವಾಗಬೇಕು,**
**ಮನದ ಗುಣವ ವಿವರಿಸಿಹೆನೆಂದರೆ ಇಂದ್ರೀಯ ಶುದ್ಧವಾಗಬೇಕು.**
**ತನು ಮನ ಇಂದ್ರೀಯಂಗಳು ಶುದ್ಧ ಸುಯಿಧಾನವಾಗಿ**
**ಲಿಂಗಮುಖ ವೇದ್ಯವಾದಲ್ಲದೆ**
**ಗುಹೇಶ್ವರ ಬೆಸಗೊಳ್ಳಬಾರದು ತಾಯೆ .**

**ತಾತ್ಪರ್ಯ :** ತನುವೆಂಬುದು, ವ್ಯಷ್ಠಿ ಸಮಷ್ಠಿ ತನುವಲ್ಲವೆ, ಶಕಪುರುಷ ತನುವಾದರೂ ನಿಜವೆ? ಸಮ್ಯಜ್ಞಾನಿಗಳ ಶರೀರಗಳಾದರೂ ನಿಜವೆ? ಶಿವ ಭಕ್ತಿಯುಕ್ತರಾದ ಶಿವಭಾವ ಸಂಪನ್ನರಾದ ಶರೀರಗಳಾದರೂ ನಿಜವೆ? ಸಂತರ ಶಿವಯೋಗೀಶ್ವರ ಶರೀರಗಳಾದರೂ ನಿಜವೆ? ದಿನ ಪಕ್ಷ ಮಾಸ ಸಂವತ್ಸರಾದಿಗಳು ನಿಜವೆ? ಕೃತಯುಗ, ತ್ರೇತಾಯುಗ, ದ್ವಾಪರಾ, ಕಲಿಯುಗ ಇವುಗಳಾದರೂ ನಿಜವೆ? ಯುಗ ಯುಗದೊಳ್ ಅವತಾರ ಪುರುಷರೆಂದೆನಿಸಿದ ಅವರ ಪವಾಡಗಳು ನಿಜವೆ? ತತ್ವ ತಾತ್ವಿಕ ವಿಚಾರ ಇವುಗಳಾದರೂ ಶಾಶ್ವತವೆ?

ಯೋಗ ಧ್ಯಾನ ಮೌನ ಜಪ ತಪಾದಿಗಳು ನಿಜವೆ? ಅಣಿಮಾದಿ ಸಿದ್ಧ್ಯಾದಿಗಳಾದರೂ ನಿಜವೆ? ಅದಕ್ಕಾಗಿ ಘನಲಿಂಗವನರಿಯಲು ಕೇವಲ ತತ್ವ ತಾತ್ವಿಕ ವಿಚಾರ ಮಾಡಿದರೆ ಸಾಲದು ಇದ್ದಕ್ಕಿದ್ದಂತಿರುವ ನಿರಾಲಂಬವಾದ ನಿಃಕಲ ಲಿಂಗವನರಿಯಲು ಮನಸ್ಸು ಶುದ್ಧವಾಗಬೇಕು. ಮನಸ್ಸು ಶುದ್ಧವಾಗಿರುವದೆಂದರೆ ಇಂದ್ರೀಯ ಶುದ್ಧವಾಗಬೇಕು. ಈ ಇಂದ್ರೀಯಂಗಳ ದೃಷ್ಟಿಯಲ್ಲಿ ವೀರಾಧಿ ವೀರ ಗಂಭೀರತ್ವದ ಗಣನೆ ಉಳಿಯಬಾರದು. ಅವರು ಸಂಪಾದಿಸಿದ ಸ್ತುತಿನ ಗಣನೆ ಉಳಿದಿರಬಾರದು.

ಸ್ವರ್ಗದ ಗಣನೆ , ಬ್ರಹ್ಮಾದಿಗಳ ಗಣನೆ, ಅವರ ಸ್ತುತಿನಗಣನೆ ಲೋಕಂಗಳ ಗಣನೆ , ಪದವಿಗಳ ಗಣನೆ ಉಳಿದಿರಬಾರದು, ಉಳಿದಿದ್ದಲ್ಲಿ ಸತ್ಯ ಮಿಥ್ಯೆಗಳ ದೃಷ್ಟಿಯಾದರೂ ಏತಕ್ಕೆ ? ಸತ್ಯ ಮಿಥ್ಯೆಗಳುಳ್ಳ

ದೃಷ್ಟಿ ಇಂದ್ರಿಯಂಗಳು ಶುದ್ಧವಾದ ದೃಷ್ಟಿಯಲ್ಲ. ದೃಷ್ಟಿಯು ಶುದ್ಧವಾಗದಿದ್ದಾಗ ಮನವು ಮಹಾ ಲಿಂಗವಾದಲ್ಲಿವೇದ್ಯವಾಗದು. ಮಹಾಲಿಂಗದಲ್ಲಿಮನವು ವೇದ್ಯವಾದುದೆ ನಿಷ್ಕಳಂಕ ಮನ.

ಅಲ್ಲಿಅಪವಿತ್ರತೆಗೆ ಇಂಬಿಲ್ಲ. ಅಖಿಲ ಪದದೊಳ್ ಮಿಗಿಲಾದ ಪದವೆ ಸ್ವಯಪದ, ಅದುವೆ ಚಿನ್ಮಯ, ಅದುವೆ ಮಹಾಲಿಂಗ. ಮಹಾಲಿಂಗವು ಮನಸ್ಸಿಗೆ ವೇದ್ಯವಾಗದಿದ್ದಲ್ಲಿ ಅದೇತರ ಮನ? ಅದೇತರ ಇಂದ್ರಿಯ ಶುದ್ಧ, ಅದೇತರ ತನುಗುಣ ವಿವರಿಸುವದು? ತನು ಮನ ಇಂದ್ರಿಯ ಶುದ್ಧ ಸುಯಿದಾನವಾದಲ್ಲಿ ಶ್ರೇಷ್ಠ ಕೀಳು ಎಂಬುದಿಲ್ಲ, ವಿಭಾಗ ದೃಷ್ಟಿ ಗಿಂಬು ಅದೆಲ್ಲಿಯದು? ಪೂರ್ಣ ಪರಮಾನಂದ ನಿಲಯ, ಅಚಿಂತ್ಯ ಘನವಂತನ ನಿಲಯ, ಸಮ್ಯಜ್ಞಾನದ ನಿಲಯ, ಸವೆಯದಾನಂದದ ಸುಧೆ ಅಲ್ಲಿ ದೃಢವಾಗಿರುವುದರಿಂದ ಸಮಾನತ್ವ ಸಮದೃಷ್ಟಿ ಸಮಸ್ವರೂಪ ಸಿದ್ಧಿಸಿದ ಸ್ವಸಿದ್ದಾಲಯ. ಅಲ್ಲಿ ಅಹಮಿಲ್ಲ ಪರವಿಲ್ಲ ವಿಷಯವಿಲ್ಲ ವಿಷಯಿ ಇಲ್ಲ, ಅಳಿದುದಿಲ್ಲ ಉಳಿದುದಿಲ್ಲ, ನೋಡುವದಿಲ್ಲ ನೋಟ ಮುನ್ನಿಲ್ಲ. ಇದ್ದಕ್ಕಿದ್ದಂತಿದ್ದ ನಿಃಕಲ ಲಿಂಗ ಮುಖ ವೇದ್ಯವಾದುದೆ ಇಂದ್ರಿಯ ಶುದ್ಧ ನೋಡಾ ಮಹಾ ಲಿಂಗದ ಮನವಾದುದೆ ಮನದ ಶುದ್ಧ ನೋಡಾ, ಮಹಾಲಿಂಗವೆಂಬುದು ಸಮಸ್ವರೂಪವಾದ ಪರಮಸತ್ಯ , ಪರಮಸತ್ಯಸ್ವರೂಪ ದಷ್ಟಿಗೆ ಅಂಗವೆಂಬುದಷ್ಟೇ ಲಿಂಗವೆಂಬುದಷ್ಟೆ ಕಾಮವಷ್ಟೆ ಅಕಾಮವಷ್ಟೆ , ತನ್ನವರಷ್ಟೆ ಅನ್ಯರಷ್ಟೆ , ಪ್ರೇಮವಷ್ಟೆ ಅಪ್ರೇಮವಷ್ಟೆ , ಬಹುಕಾಲ ಶರೀರವಿದ್ದರಷ್ಟೆ ತತ್‌ಕ್ಷಣ ಕಾಲವಾದುದಷ್ಟೆ , ಸರ್ವಸಮನಾಗಿರುವ ಮನ. ಅದು ಉಪಮಾತೀತ ಮನ, ಇದುವೆ ತನುಗುಣ ವಿವರಿಸಿದ ಸಂಕೇತ, ಮನಶುದ್ಧವಾದ ಸಂಕೇತ, ಇಂದ್ರಿಯ ಶುದ್ಧವಾದ ಸಂಕೇತ. ಅಂದರೆ ಮನ ಮೇರೆದಪ್ಪಿದ ಘನಲಿಂಗದ ತನು. ಘನಲಿಂಗದಮನ ಘನಲಿಂಗ ದೃಷ್ಟಿಯುಳ್ಳ ಇಂದ್ರೀಯಂಗಳಾದುದರಿಂದ ಶುದ್ಧವು ಪರಮಶಾಂತಿಯ ನಿಲಯ, ಗುಹೇಶ್ವರ ಲಿಂಗದ ಇರವು ಸಾಕ್ಷಾತ್ಕಾರವಾದಾಗ ಆಗ ಅದರ ಘನತ್ವಹೇಳಬಹುದು. ಸಾಕ್ಷಾತ್ಕಾರವಾಗದ ವಿನಃ ಬಾಯಿಮಾತಿನ ಬ್ರಹ್ಮದ ಘನ ಉಪಯೋಗವಿಲ್ಲ.

27

**ತನು ಶುದ್ಧವಾಯಿತ್ತು ಶಿವಭಕ್ತರೊಕ್ಕುದ ಕೊಂಡೆನ್ನ,**
**ಮನ ಶುದ್ಧವಾಯಿತ್ತು ಅಸಂಖ್ಯಾತರ ನೆನೆದೆನ್ನ,**
**ಕಂಗಳು ಶುದ್ಧವಾಯಿತ್ತು ಸಕಲ ಪುರಾತನರ ನೋಡಿಯೆನ್ನ,**
**ಭಾವನೆ ಯೆನಗಿದು ಜೀವನವು ಕೇಳಾ ಲಿಂಗತಂದೆ .**
**ನೆಟ್ಟನೆ ಪೂಜಿಸಿ ಭವಗೆಟ್ಟೆನು ಕಾಣಾ ಚೆನ್ನಮಲ್ಲಿಕಾರ್ಜುನ.**

**ತಾತ್ಪರ್ಯ :** ಶಿವಭಕ್ತರು ಸೇವಿಸಿದ ಪ್ರಸಾದವ ಕೊಂಡು ತನು ಶುದ್ಧವಾಯಿತ್ತು. ಪ್ರಸಾದವೆಂಬುದು ಪರಮಜ್ಞಾನ ಪೂರ್ಣಜ್ಞಾನ ಗಗನ ಸದೃಶವಾಗಿರುವ ಜ್ಞಾನಾಮೃತ ಇದುವೆ ಅಖಂಡ ಪರಾತ್ಪರ ಪ್ರಸಾದ. ಇದನ್ನು ಸೇವಿಸುವದರಿಂದ ಸಕಲವು ಪ್ರಸಾದಮಯವಾಗುವುದು. ಆ ಪ್ರಸಾದವನುಂಡ ಕಾಯ ಚಿತ್ಕಾಯ ಘನಕಾಯವಾದುದರಿಂದ ತನು ಶುದ್ಧವಾಯಿತ್ತು ನೋಡಾ. ಆ ಘನ ಕಾಯದ ದೃಷ್ಟಿಯಲ್ಲಿ ಕ್ಷರಾಕ್ಷರವೆಂಬ ವಿಭಾಗ ದೃಷ್ಟಿಗಿಂಬಿಲ್ಲವಾದುದರಿಂದ ಕ್ಷರವು ಪ್ರಸಾದ, ಅಕ್ಷರವು ಪ್ರಸಾದ. ಅಂದರೆ ಕ್ಷರವು ಗುರವೆ ಅಕ್ಷರವು ಗುರುವೆ , ಕ್ಷರವು ಅರುವೆ ಅಕ್ಷರವು ಅರುವೆ. ಕ್ಷರವು ಜಂಗಮವು ಅಕ್ಷರವು ಜಂಗಮನೆ. ಅಂದೆ ಚಿದ್ಘನಾನಂದನು, ಚಿನ್ಮಯನು ಜ್ಞಾನಾನಂದವು.

ಬೋಗವು ಪ್ರಸಾದಮಯ, ಯೋಗವು ಪ್ರಸಾದಮಯ . ಮರವು ಅರಿವು ಪ್ರಸಾದಮಯ,

ಏಕೆಂದರೆ ಇದ್ದಕ್ಕಿದ್ದಂತಿರುವ ಪರಾತ್ಪರ ಪ್ರಸಾದವ ಸೇವಿಸಿರುವುದರಿಂದ ಅಲ್ಲಿ ಪರಿಚ್ಛಿನ್ನ ಭಾವಕ್ಕಿಂಬಿಲ್ಲ, ಮಾಯಿಕಕ್ಕಿಂಬಿಲ್ಲ, ವಿಷಯವಿಲ್ಲ ವಿಷಯಿ ಇಲ್ಲ. ಬೇರಾದುದಿಲ್ಲ ಕೂಡಿದುದಿಲ್ಲ. ಬೇಕಾದುದಿಲ್ಲ ಬೇಡಾದುದಿಲ್ಲ. ನನ್ನವರಿಲ್ಲ ಅನ್ಯರಿಲ್ಲ. ಅಂತರ ಇಲ್ಲ ಬಹಿರ ಇಲ್ಲ. ಅಹುದಾದುದಿಲ್ಲ ಅಲ್ಲಾದುದಿಲ್ಲ. ಗಗನದಂತೆ ಅಖಂಡವಾಗಿರುವ ಜ್ಞಾನಾಮೃತವೆ ಶಿವ ಭಕ್ತರ ಪ್ರಸಾದ. ಇದುವೆ ಲಿಂಗ ಜಂಗಮವಾದುದರಿಂದ ಪೂರ್ಣ ಪರಮಾಮೃತವು ಸಿದ್ಧವಾಗಿಹುದು. ಪ್ರಸಾದದಲ್ಲಿ ಎರಡು ವಿಧ ಒಂದು ವೈಶ್ವಾನರ ಭೂತ ಪ್ರಸಾದ. ಮತ್ತೊಂದು ನೆತ್ತಿ ಪ್ರಸಾದ, ತೃಪ್ತಿಯ ಪ್ರಸಾದ, ವೈಶ್ವಾನರ ರೂಪಿ ಜಠರಾಗ್ನಿಗೆ ಕೊಡುವ ಪ್ರಸಾದ ಅದರ ಹಸಿವು ಹಿಂಗಿಸುವ ಮಟ್ಟಿಗಷ್ಟೆ ಪ್ರಸಾದ. ಏಕೆಂದರೆ ಕೆಲವು ತಾಸು ಅಷ್ಟೆ ತೃಪ್ತಿಯಾಗಿ ಹಸಿವು ಆದ ಕೂಡಲೆ ಅತೃಪ್ತಿಯ ಲಕ್ಷಣವನ್ನೇ ಸೂಚಿಸುತ್ತದೆ.

ನೆತ್ತಿಯ ಪ್ರಸಾದ ತೃಪ್ತಿರೂಪ ತೃಪ್ತಿಯ ಘನತ್ವವನ್ನೆ ಪ್ರಕಾಶಿಸುವ ಪ್ರಸಾದ. ಇದು ಜ್ಞಾನಾಮೃತ ಪ್ರಸಾದವಾದುದರಿಂದ ಜ್ಞಾನಾನಂದದಂತಿದ್ದಿತು ನೋಡಾ. ಈ ಜ್ಞಾನಾಮೃತ ರೂಪಿ ಶಿವ ಪ್ರಸಾದ ಸೇವಿಸಿ ತನು ಶುದ್ಧವಾಯಿತ್ತು ನೋಡಾ ಈ ತನು ಶುದ್ಧವಾದ ಘನದೃಷ್ಟಿಗೆ ಪಿಂಡಾಂಡ ಬ್ರಹ್ಮಾಂಡಗಳು ಅವೆ ಇಲ್ಲವೆಂದು ಹೇಗೆ ಹೇಳುವುದು ಪಂಚಭೂತ ತನ್ಮಾತ್ರೆಗಳು ಅವೆ ಇಲ್ಲವೆಂದು ಹೇಗೆ ಹೇಳುವುದು? ನಿರ್ವಾಣ ಸುಖದೊಳ್ ವಾಣಿಗಿಂಬಿಲ್ಲ ನೋಡಾ. ಇದುವೆ ನಿಮ್ಮ ಶಿವಭಕ್ತರೊಕ್ಕುದ ಕೊಂಡ ಘನ ನೋಡಾ.

ನಿಮ್ಮವರು ಅಸಂಖ್ಯಾತರು, ನೀವು ಅಸಂಖ್ಯಾತರರು . ಗಣನೆಗೆ ಮೀರಿದವರಾರೋ ಅವರೆ ಅಸಂಖ್ಯಾತರು, ಅರಿತವರೆ ಅಸಂಖ್ಯಾತರು. ಮರವುಳ್ಳವರೆಲ್ಲ ಸಂಖ್ಯಾತರು. ತನ್ನ ಮರೆದು ವೇದಾದಿಗಳೆಲ್ಲ ಬಲ್ಲವರು ಅಸಂಖ್ಯಾತರು. ತಾನಾರೆಂದು ತನ್ನ ಸ್ವರೂಪ ಯತಾರ್ಥ ಇದ್ದಕ್ಕಿದ್ದಂತೆ ಅರಿತವರು ಅವರೇ ಅಸಂಖ್ಯಾತರು.

ಏಕೆಂದರೆ ತನ್ನ ಸ್ವರೂಪ ಗಣನೆಗೆ ಮೀರಿದುದು, ಚಿಂತನೆಗೆ ಮೀರಿದುದು ಭಾವಕ್ಕೂ ಮೀರಿದುದು, ನೆನಹಿಗೂ ಮೀರಿದುದು, ಕಲ್ಪನೆಯ ಮಾಪಿಗೂ ಮೀರಿದುದು, ಸಂಜ್ಞೆ ಸಂಕೇತಕೊಳಪಡದವರೆಲ್ಲ ಅಸಂಖ್ಯಾತರು ಅವರ್ಣೀಯರು. ನಿಃಶಬ್ಧ ಘನ ಗಂಭೀರ ಸುಖದವರೆ ಅಸಂಖ್ಯಾತರು , ಅಸಂಖ್ಯಾತರು ನಿಮ್ಮವರು, ನಿಮ್ಮವರು ಅಕಳಂಕರು ನಿಸ್ಸೀಮರು. ಅವರಲ್ಲಿ ವಿಭಾಗ ದೃಷ್ಟಿಯಿಲ್ಲ ಅವಿಚಾರವಿಲ್ಲ ವಿಚಾರವಿಲ್ಲ ಆಚಾರವಿಲ್ಲ ಅನಾಚಾರವಿಲ್ಲ, ಚಿನ್ನಿಧಿಗೆ ತಾನಾದ ಅಖಂಡ ಬೆಳಕು ಅಲುಪ್ತ ಬೆಳಕು, ಮಹಾಬೆಳಗು ನಿರ್ವಾಣ ಬೆಳಗು. ಈ ಘನ ಬೆಳಗಿನ ಬೆಳಗು ನೆನೆ ನೆನೆದು ಎನ್ನ ಮನ ಶುದ್ಧವಾಯಿತ್ತು. ನಿಮ್ಮ ಪುರಾತನರ ನೋಡಿ ಎನ್ನ ಕಂಗಳು ಶುದ್ಧವು, ಪುರಾತನರು ಎಂದರೆ ಅಂದು ಇದ್ದವರು ಇಂದು ಇದ್ದವರು ಎಂದೆಂದೂ ಇದ್ದವರಾದುದರಿಂದ ಪುರಾತನರು. ಅವರ ಇರುವಿನಲ್ಲಿ ನಾಶ ಅವಿನಾಶ ಕಾಣದವರು ಸತ್ ಅಸತ್, ಬೆಳಕು ಕತ್ತಲ ಕಾಣದವರು ಅಯ್ಯ ಇವರೆ ಪುರಾತನರು. ಅಜಕಲ್ಪ ಕೋಟಿ ವರ್ಷ ಬಾಳಿದರೂ ಪುರಾತನರಲ್ಲ, ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲ ಪುರಾತನರಲ್ಲ, ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತಿರುವ ಪರಮಸತ್ ಸ್ವರೂಪವನ್ನು ಇದ್ದಕ್ಕಿದ್ದಂತೆ ತಿಳಿದ ಸಹಜ ನಿರಾಲಂಬ ಮೂರ್ತಿಯೆ ಪುರಾತನರು. ಪುರಾತನರ ನಿಲುವು ಏನೊಂದಾಗದ ನಿಲುವು, ಅಕಳಂಕ ನಿಲುವು, ನಿರ್ವಿಕಾರ ನಿಲುವು, ಚಿನ್ಮಯ ನಿಲುವು, ಈ ನಿಲುವುಳ್ಳ ಪರಮಸತ್ ಸ್ವರೂಪರೆ ಪುರಾತನರು.ಈ ಪುರಾತನರ ನೋಡಿ ಎನ್ನ ಕಂಗಳು ಶುದ್ಧವಾಯಿತ್ತು. ನಿಮ್ಮವರ ಕೀರ್ತಿ ಕೇಳಿ ಎನ್ನ ಶ್ರೋತ್ರ ಶುದ್ಧವಾಯಿತ್ತು. ಅಹಹ ನಿಮ್ಮವರ ಕೀರ್ತಿ ಎಂಬುದು ನಿಜ ನಿವಾಸದಿರುವಿನ ಕೀರ್ತಿ ಕೇಳಿ ಎನ್ನ ಶ್ರೋತ್ರ ಶುದ್ಧವಾಯಿತ್ತು. ಸಮಸ್ವರೂಪವಾದ

ಪರಮಸತ್ಯದರುವಿನ ಕೀರ್ತಿ ಕೇಳಿ ಎನ್ನ ಶ್ರೋತೃ ಶುದ್ಧವಾಯಿತ್ತು. ನಿಸ್ಸೀಮದರುವಿನ ಕೀರ್ತಿ ಕೇಳಿ ಎನ್ನ ಶ್ರೋತೃ ಶುದ್ಧವಾಯಿತ್ತು.

ನಿಮ್ಮವರ ಭಾವನೆ ಎನಗಿದು ಜೀವನವು ಕೇಳಾ ಲಿಂಗ ತಂದೆ ಅಮೃತ ಭಾವನೆ ಮಾಡುವರಲ್ಲದೆ ವಿಷದ ಭಾವನೆ ಆರಾದರೂ ಮಾಡುವರೆ? ಅಚಿಂತ್ಯ ಸುಖದ ಭಾವನೆ ಮಾಡುವರಲ್ಲದೆ ಮಾಯಿಕ ಸುಖದ ಭಾವನೆ ಆರಾದರೂ ಮಾಡಬಹುದೆ ? ಅಕ್ಷರೋತ್ತಮ ಭಾವನೆ ಮಾಡುವರಲ್ಲದೆ ಕ್ಷರಭಾವನೆ ಆರಾದರೂ ಮಾಡಬಹುದೆ? ನಿಮ್ಮವರ ಭಾವನೆಯಿಂದ ನೆಟ್ಟನೆ ಪೂಜಿಸಿ ಭವಗೆಟ್ಟೆನು ಕಾಣಾ ಚೆನ್ನಮಲ್ಲಿಕಾರ್ಜುನ. ಅಂದರೆ ಅಖಂಡಭಾವನೆಯಿಂದ ಅಖಂಡೈಕರಸದೊಳ ಸಮರಸವಾದುದಕ್ಕಾಗಿ ಭವಗೆಟ್ಟೆ ಎಂದು ಹೇಳಿದ್ದಾಳೆ.

**28**

**ಬಸವಣ್ಣನವರ ಪಾದವ ಕಂಡೆನಾಗಿ ಎನ್ನಂಗ ನಾಸ್ತಿಯಾಯಿತ್ತು**
**ಚೆನ್ನಬಸವಣ್ಣನ ಪಾದವ ಕಂಡೆನಾಗಿ ಎನ್ನ ಪ್ರಾಣ ಬಯಲಾಯಿತ್ತು ಪ್ರಭುವೆ.**
**ನಿಮ್ಮ ಶ್ರೀಚರಣಕ್ಕೆ ಶರಣೆಂದೆನಾಗಿ ಎನ್ನ ಅರಿವು ಸ್ವಯವಾಯಿತು.**
**ಚೆನ್ನಮಲ್ಲಿಕಾರ್ಜುನ ದೇವಯ್ಯ**
**ನಿಮ್ಮ ಶರಣರ ಕರುಣವ ಪಡೆದೆನಾಗಿ ಎನಗೆ ಮತ್ತಾವುದು ಇಲ್ಲವಯ್ಯ ಪ್ರಭುವೆ.**

**ತಾತ್ಪರ್ಯ :** ದ್ವಾಪರ ಯುಗದಲ್ಲಿ ಅವತಾರವೆತ್ತ ಪರ ವಸ್ತುವಿಗೆ ಚಿದಾನಂದ ಸ್ವರೂಪಗತ ವಿರಾಟ ಸ್ವರೂಪನೀತ, ಶ್ರೀಕೃಷ್ಣ ರೂಪದಿ ಅವತಾರವೆತ್ತ ಪ್ರಭು ಈತನೆಂಬುದು ಅನನ್ಯ ಭಕ್ತರಿಗಷ್ಟೆ ಗೊತ್ತು. ಅದರಲ್ಲಿ ವಿಶೇಷವಾಗಿ ಆತನ ವಿರಾಟ ಸ್ವರೂಪವನ್ನೇ ಪ್ರತ್ಯಕ್ಷ ಕಂಡ ಅರ್ಜುನನಿಗೆ ಗೊತ್ತು.

ಇನ್ನುಳಿದ ಕೌರವಾದಿಗಳಿಗೂ ಲೋಕದವರಿಗೂ ಈತ ಪರಾತ್ಪರಾವತಾರಿಯೆಂಬುದು ಹೇಗೆ ಗೊತ್ತಿದ್ದಿಲ್ಲವೋ ಹಾಗೆ ಬಸವಣ್ಣನವರ ಲೋಕದೃಷ್ಟಿಯಿಂದ ನೋಡುವವರಿಗೆ ಗೊತ್ತಾಗಿದ್ದಿಲ್ಲ. ಆತನ ಅನನ್ಯ ಭಕ್ತರಿಗೂ ಶಿವಭಾವ ಸಂಪನ್ನರಿಗೂ ಸದಾಚಾರ ಸದ್ಭಕ್ತರಿಗೆ ಶ್ರೀ ಗುರುವಾದಾತ ಬಸವಣ್ಣನೆಂಬುದು ಚನ್ನಬಸವಣ್ಣ ಅಲ್ಲಮಪ್ರಭು ಶರಣ ಸಮೂಹ ಇವರಿಗೆಲ್ಲ ಗೊತ್ತು. ಅದರಲ್ಲಿ ವಿಶೇಷವಾಗಿ ಇವರ ಘನತ್ವ ತಿಳಿದಿರುವುದರಿಂದ ಶ್ರೀ ಬಸವರಾಜ ದೇವನನ್ನು ಲೋಕ ನೋಡಿದ ದೃಷ್ಠಿಯಿಂದ ನೋಡಲಿಲ್ಲ. ಶಿವಭಕ್ತರು ಸೇವಿಸಿದ ಪ್ರಸಾದ ತಾನು ಸೇವಿಸಿ ಆ ಪ್ರಸಾದದ ಘನತ್ವವೆ ಬಸವಣ್ಣನ ಪಾದವ ಕಾಣಿಸಿದ ಕರುಣೆಯು ನೋಡಾ. ಆ ಪಾದ ಸರ್ವವ್ಯಾಪಿಯಾದ ಪಾದ. ಸತ್‌ಪಾದ, ನಿರವಯ ಪಾದ, ಸಕಲ ಭಾವಾದಿಗಳಿಂದ ನಿರ್ಮುಕ್ತವಾದ ಪಾದ, ಸಮಪಾದ ಆವುದರೋಳ್ ಕೂಡದ ಪಾದ, ನಿರ್ವಿಕಾರ ಪಾದ, ಅವಿಭಾಗ ಪಾದ, ನಿರಾಭಾರಿ ಪಾದ, ಅಹಂತ್ವವಿಲ್ಲದ ಪಾದ, ಇದ್ದಂತ್ತಿದ್ದ ಕಾಣದ ಪಾದ. ಸ್ವತಃ ಸಿದ್ಧಪಾದ ಕಂಡೆನಾಗಿ ಎನ್ನಂಗ ನಾಸ್ತಿಯಾಯಿತು.

ಚೆನ್ನಬಸವಣ್ಣ , ಈತ ಸುಜ್ಞಾನ ದೇವ, ಈ ಘನ ಮಹಿಮನನ್ನು ಲೋಕದೃಷ್ಠಿಯಿಂದ ನೋಡಿದರೆ ತಿಳಿಯದು . ಈತನ ಅನನ್ಯ ಭಕ್ತರುಗಳಾದ ಶಿವಜ್ಞಾನ ಸಂಪನ್ನರು, ಶಿವ ಸುಖದ ಶಿವಯೋಗಿಗಳ ಶಿವ ಪ್ರಸಾದವ ಸೇವಿಸಿ ಅದರಿಂದ ತೃಪ್ತನಾಗಿ ಹೊರಹೊಮ್ಮಿದ ಜ್ಞಾನ ಘನತ್ವವೆ ಚೆನ್ನಬಸವಣ್ಣನ ಪಾದವ ಕಾಣಿಸಿದ ಕರುಣೆಯು ನೋಡಾ.

ಆ ಪಾದ ಅಕಲಂಕಪಾದ ನಿರ್ವಾಣ ಪಾದ, ಸಮ್ಯಕ ಪಾದ, ಅರುರೂಪ ಪಾದ, ಅಂಗವೆ ಲಿಂಗವಾದ ಪಾದ, ಲಿಂಗಾಂಗ ಪಾದ, ನಿರಾಳ ಪಾದ, ಬಂಧ ಮೋಕ್ಷಗಳ ಸುಳುಹಿಲ್ಲದ ಪಾದ, ಘನಪಾದ, ಚೆನ್ನಬಸವಣ್ಣನ ಪಾದ ಕಂಡೆನಾಗಿ ಎನ್ನ ಪ್ರಾಣ ಬಯಲಾಯಿತ್ತು ಪ್ರಭುವೆ. ನಿನ್ನ ಅನನ್ಯ ಭಕ್ತರುಗಳಾದ ದ್ವಿತೀಯ ಶಂಭುವೆನಿಸಿದ ಅಹಮಿಲ್ಲದ ಚಿದೀಶ್ವರನ ವರ ಪ್ರಸಾದವ ಸೇವಿಸಿ ಆ ಸೇವಿಸಿದ ಪ್ರಸಾದದ ಘನತ್ವವೆ ನಿಮ್ಮ ಶ್ರೀ ಚರಣವ ಕಾಣಿಸಿದ ಕರುಣೆಯು ನೋಡಾ.

ಪ್ರಭುವೆ ನಿಮ್ಮ ಶ್ರೀ ಚರಣದ ಘನವನೇನೆಂಬೆ, ಭಾವಾತೀತನೆನಲು ಬಾರದ ಶ್ರೀ ಚರಣ, ಶುದ್ಧಾಶುದ್ಧ ಭಾವದಿಂದ ನಿರ್ಮುಕ್ತನೆನ್ನಲು ಬಾರದ ಶ್ರೀ ಚರಣ, ಯೋಗಾಯೋಗಕ್ಕೂ ನಿಲುಕದ ಶ್ರೀ ಚರಣ, ಬೋಧಕ್ಕೂ ನಿಲುಕದ ಶ್ರೀ ಚರಣ, ಅಬೋಧಕ್ಕೂ ನಿಲುಕದ ಶ್ರೀ ಚರಣ, ಬೋಧಾಬೋಧಮಯಕ್ಕೂ ನಿಲುಕದ ಶ್ರೀ ಚರಣ, ಅಹುದೆನ್ನುವುದಕ್ಕೂ ನಿಲುಕದ ಶ್ರೀ ಚರಣ ಅಲ್ಲೆನ್ನುವದಕ್ಕೂ ನಿಲುಕದ ಶ್ರೀ ಚರಣ, ಅಪ್ರಮಾಣ ಶ್ರೀ ಚರಣ. ಏನೊಂದುಸುರಲು ಎಡೆಗೊಡದೆ ಶ್ರೀ ಚರಣಕ್ಕೆ ಶರಣೆಂದೆನಾಗಿ ಎನ್ನರಿವು ಸ್ವಯವಾಯಿತ್ತು .ಅಂದರೆ ಎನ್ನ ಸ್ವರೂಪ ಸಾಕ್ಷಾತ್ಕಾರವಾಯಿತ್ತು . ಅರುವೆಂಬುದು ಅರಿವು ಸಕಲವು ಅರುವು. ಅರುವಿನಿಂದುಕ್ತವಾದುದರಿಂದ ಅರುವು ಇದು ಪೂರ್ಣವು ಜ್ಞಾನವು ಜ್ಞಾನಸ್ವರೂಪವು. ಇದು ವಿಸ್ಮೃತಿಯಿಂದುಕ್ತವಾದುದಲ್ಲ, ಸ್ಮೃತಿಯಿಂದುಕ್ತವಾದುದಲ್ಲ, ಸ್ಮೃತಿ ವಿಸ್ಮೃತಿಯಿಂದಲೂ ಕೂಡಿದುದಲ್ಲ.

ಅದು ಕೇವಲ ಜ್ಞಾನ ಘನವು ಜ್ಞಾನಮೂರ್ತಿಯು.ಅಲ್ಲಿ ಸ್ಥಿತಿಗತಿಯನರಸಲುಂಟೆ? ವಾದವಿಲ್ಲ ವಿವಾದವಿಲ್ಲ ಇದ್ದಕ್ಕಿದ್ದಂತಿದ್ದ ಎನ್ನ ಅರುವಿನ ಇರುವು ನೋಡಾ. ಇದುವೆ ನಿಮ್ಮ ಶ್ರೀ ಚರಣದ ಘನ. ಈ ಘನಕ್ಕೆ ಶರಣೆಂದೆನಾಗಿ ಎನ್ನರಿವು ಸ್ವಯವಾಯಿತ್ತು ಚೆನ್ನಮಲ್ಲಿಕಾರ್ಜುನಯ್ಯ ಅಯ್ಯಾ ನಿಮ್ಮ ಶರಣರ ಕರುಣೆಯ ಪಡೆದೆನಾಗಿ ಎನಗೆ ಮತ್ತಾವದು ಇಲ್ಲವಯ್ಯ. ಶರಣರ ಕರುಣೆ ಜ್ಞಾನಾಮೃತ ರೂಪ ಕರುಣೆ, ತೃಪ್ತರೂಪ ತೃಪ್ತಿಯ ಕರುಣೆ, ನಿರಂಕುಶ ತೃಪ್ತಿಯ ಕರುಣೆ, ಚಿನ್ನಿಧಿ ಚಿನ್ಮಯ ಸುಖ ಪಡೆದೆನಾಗಿ ಎನಗೆ ಮತ್ತಾವದು ಇಲ್ಲವಯ್ಯಾ ಪ್ರಭುವೆ.

**29**

**ಕಾಯಶುದ್ಧವಾಯಿತ್ತೆಂದರೆ ಲಿಂಗ ನೆಲೆಗೊಳ್ಳದು,**
**ಜೀವಶುದ್ಧವಾಯಿತ್ತೆಂದರೆ ಲಿಂಗ ನೆಲೆಗೊಳ್ಳದು,**
**ಭಾವ ಶುದ್ಧವಾಯಿತ್ತೆಂದರೆ ಲಿಂಗ ನೆಲೆಗೊಳ್ಳದು,**
**ಗುಹೇಶ್ವರ ಲಿಂಗದಲ್ಲಿ ಶುದ್ಧ ಸುಯಿಧಾನಿ**
**ಆದೆನೆಂದರೆ ನಿಜವು ಸಾಧ್ಯವಾಗದು ಕೇಳಾ ಅವ್ವಾ .**

**ತಾತ್ಪರ್ಯ :** ಲಿಂಗವೆಂಬುದು ಸರ್ವತ್ರ ಸದಾ ಬಾಹ್ಯ ಅಂತರದಲ್ಲಿ ವ್ಯಾಪಿಸಿರುವ ಚಿನ್ಮಯ. ಅದು ಕೊನೆ ಮೊದಲಿಲ್ಲದ ಘನ, ಅಬಾಧಿತ ಘನ, ಸಚ್ಚಿದ್ಘನ ತೋರದಡಗದ ನಿಜಘನ, ಇದ್ದಕ್ಕಿದ್ದಂತಿರುವ ನಿಃಕಲ ನಿರಂತರವಾಗಿ ಇರುವುದೊಂದೆ ಅಖಂಡೈಕರಸ. ಈ ಯತಾರ್ಥ ಇರವು ಸಾಕ್ಷಾತ್ಕಾರವಾದಲ್ಲಿ ನಿನ್ನ ಅಂಗವಿದ್ದುದು ನಿಜವೆ, ಪ್ರಾಣವಿದ್ದುದು ನಿಜವೆ, ಇದ್ದಕ್ಕಿದ್ದಂತಿದ್ದ ನಿಜದರುವಿನ ಇರವು ನಿನಗೆ ಸ್ವಯವಾದಲ್ಲಿ ಇಲ್ಲದ ಕಾಯ ನೀಕಂಡುದು ಹೇಗೆ, ಇಲ್ಲದ ಪ್ರಾಣ ನೀಕಂಡುದು ಹೇಗೆ? ಇಲ್ಲದ ಕಾಯ ಪೂರ್ವದಲ್ಲಿ ಅಶುದ್ಧವಿದ್ದುದು ಹೇಗೆ ? ಈಗ ನೀನು ಅದನ್ನು ಶುದ್ಧ

ಮಾಡಿದುದು ಹೇಗೆ? ಇಲ್ಲದ ಪ್ರಾಣ ಶರಣರ ಸಂಗಮವಾಗದ ಮುನ್ನ ಅಪವಿತ್ರವಾದುದು ಹೇಗೆ ? ಈಗ ಶರಣರ ಸಂಗದಿಂದ ಪವಿತ್ರವಾದುದು ಹೇಗೆ ? ನಿರಂತರ ನಿರಾತಂಕವಿಲ್ಲದೆ ಇದ್ದ ಅರಿವು ಇಲ್ಲವಾದುದು ಹೇಗೆ ? ಅದು ಸ್ವಯವಾದುದು ಹೇಗೆ ? ಗುಹೇಶ್ವರ ಲಿಂಗದಲ್ಲಿ ಶುದ್ಧ ಶಾಂತಿಯುತಳಾದೆನೆಂದರೆ ನಿಜವು ಸಾಧ್ಯವಾಗದು. ಏಕೆಂದರೆ ಗುಹೇಶ್ವರ ಲಿಂಗದಲ್ಲಿ ನಿಜವೆಂಬುದು ಸಹಜವು, ಯತಾರ್ಥವು, ಅಕ್ರಿಯೆಯು. ನೀನು ಗುಹೇಶ್ವರ ಲಿಂಗದಲ್ಲಿ ಶುದ್ಧ ಸುಯಿದಾನಿಯಾದೆನೆಂದರೆ ಕ್ರಿಯೆಯು ಅಯತಾರ್ಥವು ಆದುದೆಲ್ಲ ಕೃತ್ರಿಮ. ಯತಾರ್ಥ ಇರುವಲ್ಲ, ಇದು ಯತಾರ್ಥವರಿತ ಸಂಕೇತವಲ್ಲ.

ಎಲೆ ಅವ್ವಾ, ನಿರಂತರವಾಗಿ ನಿರಾತಂಕವಿಲ್ಲದೆ ಬೆಳಗುವ ಚಿನ್ಮಯ ರೂಪಿ ಲಿಂಗ ಒಳಹೊರಗೆನ್ನದೆ ನೆಲೆಯೂರಿರುವಾಗ ನಿನ್ನ ಅಂಗವಿರಲು ಇಂಬೆಲ್ಲಿ? ಅಥವಾ ನಿನ್ನ ಕಾಯವಿದ್ದುದು ಅದಕ್ಕೆ ವಿರೋಧವಾಗಿತ್ತೇ? ಈಗ ನಿನ್ನಂಗ ನಾಸ್ತಿಯಾಗಿ ಲಿಂಗಯ್ಯ ನೆಲೆ ನಿವಾಸವಾದನೆ? ಸಮಸ್ವರೂಪ ವಾದ ಲಿಂಗಯ್ಯನಿಗೆ ನಿನ್ನ ಪ್ರಾಣವಿದ್ದುದ್ದಷ್ಟೆ ,ಬಯಲಾದುದಷ್ಟೆ ,ನಿನ್ನಂಗವಿದ್ದುದಷ್ಟೆ , ನಾಸ್ತಿಯಾದುದಷ್ಟೆ, ಕೊನೆ ಮೊದಲಿಲ್ಲದ ಘನಲಿಂಗ, ಪರಾತ್ಪರ ಲಿಂಗ, ಅಲ್ಲಿ ಪ್ರಾಣವಿರಲಿಂಬುಂಟೆ? ಇಲ್ಲದ ಪ್ರಾಣವ ನೀಕಂಡುದು ಹೇಗೆ ? ಅದು ಎಮ್ಮ ಪಾದ ಕಂಡು ಬಯಲಾದುದು ಹೇಗೆ ?

ಇದ್ದ ಜೀವ ನಿನಗೆ ಮರೆಯಾದುದು ಹೇಗೆ ? ಈಗ ಗುಹೇಶ್ವರ ಲಿಂಗದ ಶ್ರೀ ಚರಣವ ಕಂಡು ನಿನ್ನರಿವು ಸ್ವಯವಾದುದು ಹೇಗೆ ? ಗುಹೇಶ್ವರ ಲಿಂಗದ ಶ್ರೀ ಚರಣವು ಅಪ್ರತಿಮಗಮ್ಯವು, ಅವಾಙ್ಮನ ಅಗೋಚರ. ಕಂಡುದೆಲ್ಲ ಪ್ರತಿಮವು. ಕಂಡೆ ಕಾಣೆ ಕೂಡಿದೆ ಅಗಲಿದೆನೆಂದರೆ ಕರ್ಮ ಬೆಂಬತ್ತಿತ್ತು. ಭಾವಕ್ಕಿಂಬು ಮಾಡಿತ್ತು. ಇಲ್ಲದ ಭಾವ ಇಲ್ಲವೆ ಇಲ್ಲ, ಇದ್ದ ಶ್ರೀಚರಣ ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತಿರುವ ಅಗಮ್ಯ. ಆಸ್ತಿ ಆವುದು ಎಂದು ಹೇಗೆ ಹೇಳುವುದು, ನಾಸ್ತಿ ಆವುದು ಎಂದು ಹೇಗೆ ಹೇಳುವುದು.

ಗಗನದೊಳ್ ಗಗನಕುಸುಮವುಂಟೆ? ಬಂಜೆ ಮಗನ ಸುಂದರತ್ವ ನಿಜವೆ ? ಇಲ್ಲದ ಸುಂದರತ್ವ ಇಲ್ಲವೆ ಇಲ್ಲ, ಏಕೆಂದರೆ ಅವನ ಅಂಗವಿದ್ದುದು ನಿಜವೆ, ಪ್ರಾಣವಿದ್ದುದು ನಿಜವೆ, ನಿಜದಲ್ಲಿ ಬಂಜೆ ಮಗ ಇಲ್ಲದಿರುವಾಗ ಅವನ ಅಂಗ ನಾಸ್ತಿಯಾಯಿತ್ತು, ಪ್ರಾಣ ಬಯಲಾಯಿತ್ತು. ಎಂದು ಹೇಗೆ ಹೇಳುವುದು. ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತಿರುವ ಘನಲಿಂಗದೊಳ್ ಅಲ್ಲಿ ಕಲ್ಪಿತಳಾದ ನೀನು ಕಾಯ ನಿನ್ನ ಪ್ರಾಣ ಇರಲಿಂಬಿಲ್ಲದಿರುವಾಗ ನಿನ್ನಂಗ ಆಸ್ತಿ, ನಾಸ್ತಿ ಎಂದು ಹೇಗೆ ಹೇಳುವಿ. ನಿನ್ನ ಪ್ರಾಣ ಆಸ್ತಿ, ನಾಸ್ತಿ ಎಂದು ಹೇಗೆ ಹೇಳುವಿ?

ಗುಹೇಶ್ವರ ಲಿಂಗವು ನಿರಾಲಂಬವು ನಿರ್ಲೇಪವು ಘನ ಗಂಭೀರ ಸುಖಮಯವು. ನಿರಂತರವಾಗಿ ನಿರಾತಂಕವಿಲ್ಲದೆ ಬೆಳಗುವ ಅಖಂಡ ಚಿನ್ಮಯ, ಅದು ಪೂರ್ಣಾತ್ ಪೂರ್ಣವು. ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತಿದ್ದ ನಿಜ ಘನ. ಅಲ್ಲಿ ಕೃತ್ರಿಮಕ್ಕಿಂಬಿಲ್ಲ, ಕ್ರಿಯೆಕ್ಕಿಂಬಿಲ್ಲ, ಅರಸುವದಕ್ಕಿಂಬಿಲ್ಲ, ಆರಾಧಿಸುವದಕ್ಕಿಂಬಿಲ್ಲ, ಕರ್ತೃತ್ವಕ್ಕಾವುದಕ್ಕೂ ಇಂಬಿಲ್ಲ. ಎಲೆ ಅವ್ವಾ ನಿನ್ನಲ್ಲಿ ಇಲ್ಲದ ಕಾಯ ಶುದ್ಧ ಮಾಡಿದ ಕ್ರಿಯೆ ಇದ್ದುದರಿಂದ ಲಿಂಗದ ಘನತ್ವ ನೆಲೆಗೊಳ್ಳದು. ನಿನ್ನಲ್ಲಿ ಇಲ್ಲದ ಭಾವ ಶುದ್ಧ ಮಾಡಿದ ಭ್ರಮಿತನ ಇದ್ದುದರಿಂದ ಲಿಂಗದ ಘನತ್ವ ನೆಲೆಗೊಳ್ಳದು. ನಿನ್ನಲ್ಲಿ ಕರ್ಮ, ಕ್ರಿಯೆ ಅರಸುವುದು, ಆರಾಧಿಸುವ ಕೃತ್ರಿಮ ತನ್ನನ್ನಿಟ್ಟುಕೊಂಡು ಅರಿತೆ ಅರಿಯೆ ಎಂಬ ಗುಸುಟು ಇದ್ದುದರಿಂದ ಗುಹೇಶ್ವರ ಲಿಂಗದಲ್ಲಿ ಶುದ್ಧ ಸುಯಿದಾನಿ ಆದೆಯೆಂದರೆ ನಿಜವು ಸಾಧ್ಯವಾಗದು.

**30**

**ಕಾಯದೊಳಗೆ ಅಕಾಯವಾಯಿತ್ತು, ಜೀವದೊಳಗೆ ನಿರ್ಜೀವವಾಯಿತ್ತು.**
**ಭಾವದೊಳಗೆ ನಿರ್ಭಾವವಾಯಿತ್ತು. ಎನ್ನಮನದೊಳಗೆ ಘನ ನೆನಹಾಯಿತ್ತು.**
**ಎನ್ನ ತಲೆಮೊಲೆಗಳ ನೋಡಿ ಸಲುಹಿದರಾಗಿ ಚೆನ್ನಮಲ್ಲಿಕಾರ್ಜುನನ ಧರ್ಮದವಳಾನು.**

**ತಾತ್ಪರ್ಯ :** ಪ್ರಭುವೆ ಚೆನ್ನಮಲ್ಲಿಕಾರ್ಜುನನ ಧರ್ಮದವಳಾನು. ಈ ಧರ್ಮದವಳಾದುದು ನನ್ನ ಸ್ವತಂತ್ರತೆಯಲ್ಲಿ ನೋಡಾ. ಇದು ನಿಮ್ಮವರ ಕರುಣೆಯಿಂದ, ಕರುಣಾಜಲ ನಿಮ್ಮವರದು. ಕರುಣಾಮೃತವು ನಿಮ್ಮದು. ನಿಮ್ಮ ಕರುಣಾ ರಸಾಮೃತವು ಘನಕ್ಕೆ ಘನವು. ಬಸವದೇವನ ಇಚ್ಛಾನಿಚ್ಛವಿನಿರ್ಮುಕ್ತವಾದ ಕರುಣಾ ರಸವಕಂಡು ಕಾಯದೊಳಗೆ ಅಕಾಯವಾಯಿತ್ತು. ಈ ಅಕಾಯ ಸಕಲಭಾವಾದಿಗಳಿಂದ ನಿರ್ಮುಕ್ತವಾದುದು ನೋಡಾ. ಇದು ಯಾವ ಮತಾಂತರದಿಂದುಕ್ತವಾದುದಲ್ಲ . ಯಾವ ಪಕ್ಷಾಂತರಕ್ಕೆ ಹೇತುವಾದುದಲ್ಲ . ಇದರ ಅದಂತ್ವ ವಿಲ್ಲದುದರಿಂದ ಅಕಾಯ. ಇದಂತ್ವಕಾಣದ್ದರಿಂದ ಅಕಾಯ.

ನಿಮ್ಮವರ ಕರುಣಾಜಲವು ಘನವುಳ್ಳದ್ದಾದುದರಿಂದ ಚನ್ನಬಸವಣ್ಣನ ಕರುಣೆಯಲಿಂಗ ಕಂಡುದರಿಂದ ಜೀವದೊಳಗೆ ನಿರ್ಜೀವವಾಯಿತ್ತು. ನಿಮ್ಮವರ ಕರುಣೆಯ ಲಿಂಗವೆಂಬುದು ಖಂಡಿತವಿಲ್ಲದ ಅಖಂಡ. ಅಖಂಡ ಲಿಂಗದೊಳ್ ಖಂಡವ ಕಾಣದ್ದರಿಂದ ಜೀವದೊಳಗೆ ನಿರ್ಜೀವವಾಯಿತ್ತು. ನಿರ್ನಾಮಲಿಂಗದೊಳ್ ನಾಮುವ ಕಾಣದ್ದರಿಂದ ಜೀವದೊಳಗೆ ನಿರ್ಜೀವವಾಯಿತ್ತು.

ಅಕಲಂಕ ಲಿಂಗದೊಳ್ ಕಲಂಕವ ಕಾಣದ್ದರಿಂದ ಜೀವದೊಳಗೆ ನಿರ್ಜೀವವಾಯಿತ್ತು. ನಿರ್ಜೀವವೆಂಬುದು ಎರಡೆಂಬದ ನಿರ್ಜೀವ. ಒಂದೆಂಬದ ನಿರ್ಜೀವ. ಅಭೋದ ಕಾಣದ ನಿರ್ಜೀವ, ಬಂಧ ಮೋಕ್ಷಗಳ ಕಾಣದ ನಿರ್ಜೀವವಾಯಿತ್ತು. ಪ್ರಭುವೆ ನಿಮ್ಮ ಶ್ರೀಚರಣಕ್ಕೆ ಶರಣೆಂದೆನಾಗಿ ಭಾವದೊಳಗೆ ನಿರ್ಭಾವವಾಯಿತ್ತು. ಈ ನಿರ್ಭಾವದ ಘನವನೇನೆಂಬೆ, ಭಾವಾತೀತನೆನ್ನಲು ಬಾರದ ಶ್ರೀಚರಣಕ್ಕೆರಗಿ ಭಾವದೊಳಗೆ ನಿರ್ಭಾವವಾಯಿತು. ಮಾಯಾತೀತನೆನ್ನಲು ಬಾರದ ಶ್ರೀಚರಣಕ್ಕೆರಗಿ ಭಾವದೊಳಗೆ ನಿರ್ಭಾವವಾಯಿತ್ತು. ಆದಿ ಅನಾದಿ ಎನ್ನಲು ಬಾರದ ಶ್ರೀಚರಣಕ್ಕೆರಗಿ ಭಾವದೊಳಗೆ ನಿರ್ಭಾವವಾಯಿತ್ತು.

ಈ ನಿರ್ಭಾವವೆಂಬುದು ಬೋಧಕ್ಕೂ ನಿಲುಕದ ನಿರ್ಭಾವ. ಅಬೋಧಕ್ಕೂ ನಿಲುಕದ ನಿರ್ಭಾವ. ಬೋಧಾ ಬೋಧಕ್ಕೂ ನಿಲುಕದ ನಿರ್ಭಾವ. ಸಕಲ ನಿಃಕಲನೆನ್ನುವುದಕ್ಕೂ ನಿಲುಕದ ನಿರ್ಭಾವ. ಇದು ಅಹುದೆನ್ನುವದಕ್ಕೂ ನಿಲುಕದ ನಿರ್ಭಾವ. ಇದು ಅಲ್ಲೆನ್ನುವುದಕ್ಕೂ ನಿಲುಕದ ನಿರ್ಭಾವ. ನಾನನ್ನುವುದಕ್ಕೂ ನಿಲುಕದ ನಿರ್ಭಾವ. ನಿರ್ಭಾವವೆ ಎನ್ನರಿವು ನೋಡಾ. ಈ ಅರಿವಿನ ಇರುವೆ ಎನ್ನ ಮನದ ನೆನಹು ನೋಡಾ. ನೀವು ತಲೆ ಮೊಲೆಗಳ ನೋಡಿ ಸಲುಹಿದಿರಿ, ಎನ್ನ ತಲೆ ಎಂಬುದು ಚನ್ನಮಲ್ಲಿಕಾರ್ಜುನನೆ ಎನ್ನ ಗಂಡನಾಗಬೇಕೆಂಬ ತಲೆ, ರೂಹಿಲ್ಲದವನೆ ನನ್ನ ಗಂಡನಾಗಬೇಕೆಂಬ ತಲೆ, ಭವವಿಲ್ಲದ ಭಯವಿಲ್ಲದವನೆ ನನ್ನ ಗಂಡನಾಗಬೇಕೆಂಬ ತಲೆ. ಅಕಳಂಕನೆ ನನ್ನ ಗಂಡನಾಗಬೇಕೆಂಬ ತಲೆ, ಮಹಾಲಿಂಗವೆ ನನ್ನ ಗಂಡನಾಗಬೇಕೆಂಬ ತಲೆ, ಘನಸುಖದವನ ಸುಖದೊಳ್ ಸಮರಸವಾಗಬೇಕೆಂಬ ತಲೆ. ಈ ತಲೆಯೆ ನನ್ನ ತಲೆ. ಅನಂತ ಕಾಲ ತಪಸ್ಸು ಮಾಡಿದ ತಲೆ.

ಚೆನ್ನಮಲ್ಲಿಕಾರ್ಜುನನ ಪ್ರಿಯಳಾಗಬೇಕೆಂಬುದೆ ನನ್ನ ಮಮಕಾರದ ಮೊಲೆ, ಘನ ಲಿಂಗಯ್ಯನ ಪ್ರಿಯಳಾಗಬೇಕೆಂಬ ನನ್ನ ಮಮಕಾರದ ಮೊಲೆ, ಬಹುಕಾಲ ತಪ ಮಾಡಿದುದು, ಅವನ ಏಕತ್ವಸುಖದ ಪ್ರಿಯಳಾಗಬೇಕೆಂಬ ಆತುರದ ಸ್ನೇಹ ಸಂಬಂಧವೆ ನನ್ನ ಮೊಲೆ. ನಿರ್ಭಯನ ಪ್ರಿಯಳಾಗಬೇಕೆಂಬ ನನ್ನ ಮೋಹದ ಮೊಲೆ, ನನ್ನ ಭಾವ, ಪ್ರೇಮ, ಅಪಾರ ಪ್ರೀತಿ ಘನಗಂಭೀರ ಸುಖದವನ ಪ್ರಿಯಳಾಗಬೇಕೆಂಬ ನನ್ನ ತಲೆ ಮೊಲೆಗಳ ನೋಡಿ ಸಲುಹಿದಿರಾಗಿ ಚೆನ್ನಮಲ್ಲಿಕಾರ್ಜುನ ಧರ್ಮದವಳಾನು. ಆದುದರಿಂದ ಕೇಡಿಲ್ಲದ ಧರ್ಮದವಳಾನು, ಸಾವಿಲ್ಲದ ಧರ್ಮದವಳಾನು ಭಯವಿಲ್ಲದ ಭವವಿಲ್ಲದ ಧರ್ಮದವಳಾನು, ಅಮರತ್ವ ಧರ್ಮದವಳಾನು, ಘನಗಂಭೀರಾತ್ಮ ಸುಖದ ಧರ್ಮದವಳಾನು, ಸತ್ಯಜ್ಞಾನಾನಂದ ಧರ್ಮದವಳಾನು, ಗಗನದಂತಿರುವ ಜ್ಞಾನಾಮೃತ ಧರ್ಮದವಳಾನು ಪ್ರಭುವೆ.

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ

**31**

**ಕೂಡಲಿಲ್ಲದ ಘನ ಕೂಡುವ ಪರಿ ಎಂತವ್ವಾ ?**
**ಹೇಳಿದರೆ ಅದಕ್ಕದೆ ಕೊರತೆ.**
**ಗುಹೇಶ್ವರಲಿಂಗವ ಬೇರು ಮಾಡಿ**
**ಬೆರಸುವ ಪರಿ ಎಂತು ಹೇಳಾ.**

**ತಾತ್ಪರ್ಯ :** ಆತ್ಮಾನಾತ್ಮ ವಿಚಾರದಿಂದಾಗಲಿ, ಅಂಗಲಿಂಗ ಬೇರೆಂಬ ವಿಚಾರದಿಂದಾಗಲಿ ಬೇರ್ಪಡಿಸಲು ಬಾರದ ಘನವಾದುದರಿಂದ ಅವಿಚಾರವಂತರಿಗೂ ತಿಳಿಯದು, ಅಂಗ ಲಿಂಗ ಒಂದೆಂಬ ವಿಚಾರವಂತರಿಗೂ ಇದು ಹೀಗೆಯೇ ಎಂದು ತಿಳಿಸಲು ಬರದ ಅಕಥನೀಯ ಘನವಾದುದರಿಂದ ಅದು ಕೂಡಲಿಲ್ಲದ ಘನ, ಅದರೊಳ್ ನೀ ಕೂಡಿದ ಪರಿ ಎಂತವ್ವಾ ?

ಕೂಡಲಿಲ್ಲದ ಘನ ಅಂದರೆ ಆವುದರೊಳ್ ಕೂಡದ ಘನ, ಬೆರೆಯದ ಘನ, ನಿರಾಲಂಬ ಘನ ಅದರೊಳ್ ಕೂಡುವ ಪರಿ ಎಂತು ? ಕೂಡಲಿಲ್ಲದ ಘನಕ್ಕೆ ವಿಚಾರವಷ್ಟೆ ಅವಿಚಾರವಷ್ಟೆ, ಸತ್ಯವೆಂಬುದಷ್ಟೆ ಅಸತ್ಯವೆಂಬುದಷ್ಟೆ, ಅಂಗವೆಂಬುದಷ್ಟೆ ಲಿಂಗವೆಂಬುದಷ್ಟೆ ಆವುದರೊಳ್ ಕೂಡಲಿಲ್ಲದ ಘನ ಅದರೋಳ್ ನೀ ಬೇರು ಮಾಡಿ ಕೂಡುವ ಪರಿ ಎಂತು ?

ಒಂದು ಎರಡಾದುದೆ ಎರಡಾದುದು ಒಂದೆ? ಒಂದು ಎರಡಾಗದು, ಎರಡಾದುದು ಒಂದಾಗದು. ಅಲ್ಲಿ ವಿಭಾಗಕ್ಕಿಂಬಿಲ್ಲ, ವಿಚಾರಕ್ಕಿಂಬಿಲ್ಲ. ಮಾಯೆ ಇಲ್ಲ ಮಾಟವಿಲ್ಲ, ಕಾರ್ಯಕಾರಣ ಮುನ್ನಿಲ್ಲ. ಇದ್ದುದು ಇದ್ದಕ್ಕಿದ್ದಂತಿದ್ದುದು, ಅದರೋಳ್ ಇಲ್ಲದುದು ಇದ್ದಂತಾಗಿ ಇದ್ದುದರೋಳ್ ಮೊದಲು ಬೇರಾಗಿ ಹಿಂದಿನಿಂದ ಅದು ಒಂದಾಗಿ ಕೂಡಿದ ಪರಿ ಎಂತವ್ವಾ?

ದೇವ ದೇವ, ಘನಕ್ಕೆ ಘನ, ಅಕ್ರಿಯೆ ಅದು ಕ್ರಿಯೆದಿಂದುಕ್ತವೆ? ಇಲ್ಲಿ ಸಂಗವೆಂಬುದಿಲ್ಲ ನಿಸ್ಸಂಗವೆಂಬುದಿಲ್ಲ, ಪದವಿಲ್ಲ, ಸಂದಿ ಇಲ್ಲ ಏನೇನು ಇಲ್ಲ. ಘನಕ್ಕೆ ಘನ, ಅದು ಆವುದರೊಳ್ ಕೂಡದ ಘನ ಅದರೋಳ್ ನೀ ಕೂಡಿದ ಪರಿ ಎಂತವ್ವಾ ?

ಬೆರೆಯದ ಘನ ಅಂದರೆ ಅದು ಬೇರಾದುದಿಲ್ಲ, ಕೂಡುವುದಲ್ಲ, ಅಲ್ಲಿ ಭಾವಕ್ಕಿಂಬಿಲ್ಲ. ಅಭಾವಕ್ಕಿಂಬಿಲ್ಲ, ಕಲ್ಪನೆಗಿಂಬಿಲ್ಲ, ತನಗಿಂತ ಭಿನ್ನವೂ ಅಲ್ಲ ಅಭಿನ್ನವೂ ಅಲ್ಲ, ಅದನ್ನು ಬೇರು

ಮಾಡಿ ಬೆರೆಸಿದ ಪರಿ ಎಂತು ಹೇಳಾ?

ಅವರ್ಣೀಯ ಘನ , ಸತ್ಯಾಸತ್ಯವೆಂಬ ವರ್ಣನೆಗೆ ನಿಲುಕದು, ಖಂಡಾಖಂಡವೆಂಬ ವಿಚಾರಕ್ಕೆ ನಿಲುಕದು, ಚಿಚ್ಛಕ್ತಿ, ಚಿದಾಭಾಸರೆಂಬ ವಿಭಾಗ ದೃಷ್ಟಿಗೂ ದೂರವು. ಬಂಧ ಮೋಕ್ಷಗಳ ವಿಚಾರಕ್ಕೂ ಮೀರಿದುದು. ಅವರ್ಣೀಯ ಘನವೆಂಬುದು ನುಡಿಗೊಳಗಾಗದ ಘನ, ನಡೆಗೊಳಗಾಗದ ಘನ, ಇದ್ದಕ್ಕಿದ್ದಂತಿದ್ದ ಘನ, ಆವುದರೋಳ್ ಕೂಡಲಿಲ್ಲದ ಘನ, ಅದರೋಳ್ ನೀ ಕೂಡಿದ ಪರಿ ಎಂತವ್ವಾ?

ನೀರಾಲಂಬ ಘನವೆಂಬುದು ಆವುದರೋಳ್ ಕೂಡದ ಘನ, ಕೂಡಲಿಲ್ಲದ ಘನವಿರುವಾಗ ಆಸ್ತಿಕರಾಗಿ ಬಂದು ಕೂಡಿಹೆನೆಂದರೂ ಕೂಡದ ಘನ, ನಾಸ್ತಿಕರಾಗಿ ಬಂದು ಕೂಡಿಹೆನೆಂದರೂ ಕೂಡದ ಘನ, ಸರ್ವಸಂಗ ತ್ಯಾಗ ಮಾಡಿ ಕೂಡಿಹೆನೆಂದರೂ ಕೂಡದ ಘನ, ನಿರ್ವಾಣ ಘನವಿರುವಾಗ ವಾದ ಮಾಡಿ ಕೂಡಿಹನೆಂದರೂ ಕೂಡದ ಘನ, ಸಂವಾದವ ಮಾಡಿ ಕೂಡಿಹೆನೆಂದರೂ ಕೂಡದ ಘನ, ಅಚಿಂತ್ಯ ಘನವಿರುವಾಗ ಅಂಗ ಚಿಂತನ ಮಾಡಿ ಕೂಡಿಹೆನೆಂದರೂ ಕೂಡದ ಘನ, ಲಿಂಗ ಚಿಂತನ ಮಾಡಿ ಕೂಡಿಹೆನೆಂದರೂ ಕೂಡಲಿಲ್ಲದ ಘನ, ಲಿಂಗಾಗ ಸಮರಸ ಮಾಡಿ ಕೂಡಿಹೆನೆಂದರೂ ಕೂಡಲಿಲ್ಲದ ಘನ, ನೀ ಬೇರು ಮಾಡಿದ ಪರಿ ಎಂತವ್ವಾ ?

ಅಚಿಂತ್ಯ ಘನ ಚಿಂತನಕ್ಕೊಳಪಡದು, ಭವಕ್ಕೊಳಪಡದು, ನೆನಹಿಂಗೆ ಒಳಪಡದು, ನಿರ್ಣಯಕ್ಕೊಳಪಡದು, ಧೂಮ ಮಾರ್ಗಕ್ಕೊಳಪಡದು, ದೀಪ್ತಿ ಮಾರ್ಗಕ್ಕೊಳಪಡದು, ಖಂಡಿತವಿಲ್ಲದ ಅಖಂಡವು, ಅಲ್ಲಿ ಕಾಣಿಸಿಕೊಳ್ಳುವ ದೃಶ್ಯವಿಲ್ಲ, ಕಾಣುವ ದೃಕ್ ಇಲ್ಲ, ಅದರೊಳ್ ನೀ ಕೂಡಿದ ಪರಿ ಎಂತವ್ವಾ ? ಹೇಳಿದರೆ ಅದಕ್ಕದೆ ಕೊರತೆ. ಕೂಡಲಿಲ್ಲದ ಘನ ಅದು ಗಗನಾಕಾರದಂತೆ. ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತಿದ್ದ ಜ್ಞಾನಾಮೃತ, ಬಯಲಿನಂತೆ, ನಿಸ್ಸೀಮವಾದುದೊಂದೆ ಅದನ್ನು ಇನ್ನೊಬ್ಬನು ಕಾಣುವದೆಂತು, ಕೂಡುವುದೆಂತು. ಗುಹೇಶ್ವರ ಲಿಂಗದಲ್ಲಿ ಬೇರು ಮಾಡಿ ಅದನ್ನು ನೀನು ಕಂಡುದೆಂತು ಕೂಡಿದುದೆಂತು ?

ಪೂರ್ಣವಾದ ಜ್ಞಾನಾಮೃತ ಆಕಾಶದಂತೆ ನಿರಂತರವಾಗಿದೆ. ಅದು ವಿಶುದ್ಧಘನ, ನಿರ್ವಾಣ ಘನ, ನಿರಂತರ ಘನ ಅಲ್ಲಿ ಪ್ರಕೃತಿ ಇಲ್ಲ , ಪುರುಷ ಇಲ್ಲ , ಪಂಚಭೂತಗಳಿಲ್ಲ , ಪಂಚ ತನ್ಮಾತ್ರೆಗಳಿಲ್ಲವಾದ್ದರಿಂದ ಕೆಡಿಸುವ ಮಾಯಿಕವಿಲ್ಲ. ಕೂಡಿಸುವ ಸಜಾತಿ ಇಲ್ಲ. ವಿಷಮತ್ವವು ಇಲ್ಲ, ಸಮತ್ವವೂ ಇಲ್ಲ, ವಾಚ್ಯವಿಲ್ಲ ಲಕ್ಷ್ಯವಿಲ್ಲ, ಏನೇನೂ ಇಲ್ಲವೆಂಬುದಕ್ಕೂ ಇಂಬಿಲ್ಲದ ಗುಹೇಶ್ವರ ಲಿಂಗದಲ್ಲಿ ಬೇರು ಮಾಡಿ ಬೆರಸುವ ಪರಿ ಎಂತವ್ವಾ,

ಇರುವುದೆಲ್ಲ ಆದಿ ಮಧ್ಯ ಅಂತ್ಯವಾಗದೆ ಇದ್ದಕ್ಕಿದ್ದಂತಿರುವ ನಿರಂತರವಾಗಿರುವ ನಿರಾತಂಕವಿಲ್ಲದೆ ಬೆಳಗುವ ಚಿನ್ಮಯ, ಅಲ್ಲಿ ಕೂಡಿದುದಿಲ್ಲ, ಅಗಲಿದುದಿಲ್ಲ ಅಲ್ಲಿ ಯೋಗವಾವುದು ವಿಯೋಗವಾವುದು ? ಐಕ್ಯವಾವುದು, ಅನೈಕ್ಯವಾವುದು ? ವಿಭಾಗಕ್ಕಿಂಬಿಲ್ಲದ ಗುಹೇಶ್ವರ ಲಿಂಗದಲ್ಲಿ ನೀ ಬೇರು ಮಾಡಿ ಬೆರಸುವ ಪರಿ ಎಂತು ?

ಅಕ್ಕನ ಪ್ರತ್ಯುತ್ತರ.

**32**

**ಗಟ್ಟಿದುಪ್ಪ ತಿಳಿದುಪ್ಪಕ್ಕೆ ಹಂಗುಂಟೆ ಅಯ್ಯಾ ?**
**ದೀಪಕ್ಕೆ ದೀಪ್ತಿಗೆ ಭೇದ ಉಂಟೆ ಅಯ್ಯಾ ?**
**ಅಂಗಕ್ಕೆ ಆತ್ಮಂಗೆ ಭಿನ್ನವುಂಟೆ ಅಯ್ಯಾ ?**

**ಎನ್ನಂಗವನು ಶ್ರೀಗುರು ಮಂತ್ರವ ಮಾಡಿ ತೋರಿದನಾಗಿ**
**ಸಾವಯವ ನಿರವಯಕ್ಕೆ ಭಿನ್ನವಿಲ್ಲವಯ್ಯ.**
**ಚೆನ್ನಮಲ್ಲಿಕಾರ್ಜುನ ದೇವರ ಬೆರಸಿ**
**ಮತಿಗೆಟ್ಟವಳ ಏತಕ್ಕೆ ನುಡಿಸುವಿರಯ್ಯಾ ಪ್ರಭುವೆ.**

**ತಾತ್ಪರ್ಯ :** ಅಯ್ಯಾ ಹೆತ್ತುಪ್ಪ ತಿಳಿದುಪ್ಪವಾಗಲು, ತಿಳಿದುಪ್ಪ ಹೆತ್ತುಪ್ಪವಾಗಲು ಹಂಗುಂಟೆ, ಆಸೆಯುಂಟೆ ? ತಿಳಿದುಪ್ಪವೆ ಹೆತ್ತುಪ್ಪವಲ್ಲವೆ, ಹೆತ್ತುಪ್ಪವೆ ತಿಳಿದುಪ್ಪವಲ್ಲವೆ ? ಇದ್ದುದೊಂದೆ. ನಾಮ ರೂಪ ಎರಡಾಗಿ ತೋರಿದರೂ ಇದ್ದುದೊಂದೆ. ತಿಳಿ ಗಟ್ಟಿಯಾಗಿ ಕಂಡರೂ ಅದುವೆ.

ದೀಪಕ್ಕೆ ದೀಪ್ತಿಗೆ ಭೇದವುಂಟೆ? ಪ್ರಕಾಶಮಯವಾದ ದೀಪ ಮತ್ತು ಅದರ ಬೆಳಗುವಿಕೆ ಬೇರೆಯೆ ? ಅಂದರೆ ಬೆಳಕು ಬೆಳಗುವಿಕೆ ಬೇರೆಯೆ ? ಬೆಳಕು ಬೇರೆ ಅದರ ಕಿರಣ ಬೇರೆಯೆ ? ಇದ್ದುದೊಂದೆ ದೀಪ್ತಿ ಅದುವೆ, ದೀಪ ಅದುವೆ. ಬೆಳಕು ಎಂದರೂ ಅದುವೆ. ಬೆಳಗುವಿಕೆ ಎಂದರೂ ಅದುವೆ. ಪ್ರಕಾಶಮಯವೆಂದರೂ ಅದುವೆ. ಇದ್ದುದೊಂದೆ ಬೇರೆ ಬೇರೆ ಹೆಸರಿನಿಂದ ಕರೆದರೂ ಅದುವೆ.

ಅಂಗಕ್ಕೂ ಆತ್ಮನಿಗೂ ಭೇದ ಉಂಟೆ ? ಅಂಗನು ಅರುವೆ, ಲಿಂಗವು ಅರುವೆ, ಇದ್ದುದೊಂದೆ ಅರುವು, ಅಂಗನು ಸಚ್ಚಿದ್ರೂಪನು , ಆತ್ಮನು ಸಚ್ಚಿದ್ರೂಪನು, ಇದ್ದುದೊಂದೆ ಸಚ್ಚಿದ್ಘನ.

''ಅಸ್ತಿ ಭಾತಿಯೆಂಬ ಎನ್ನ ಸತ್ಯದಲ್ಲಿ ನಾಮರೂಪು ಎಂಬ ಹುಸಿಯೆಂತು ಜನಿಸಿತೆಂದರಿಯೆನಯ್ಯ ಇಲ್ಲದ ಹೆಸರುಳ್ಳ ಚಿತ್ರದಂತೆ ರೂಪು ನಾಮವೀತೆರನೆಂದರಿಯದೆ ತೊಳಲಿ ಬಳಲುತಿರ್ದೆನಯ್ಯ ಕೂಡಲ ಚೆನ್ನಸಂಗಯ್ಯ ಸಂಸಾರ ಬಂಧನವೆನಗಿದೆ ಕಂಡಯ್ಯ.''

ಸತ್ಯದಲ್ಲಿ ಪುಸಿ ಜನಿಸಿತೆಂದರಿಯೆನು, ಬೆಳಕಿನಲ್ಲಿ ಕತ್ತಲೆ ಜನಿಸಿತೆಂದರಿಯೆನು, ಅಮೃತದೊಳ್ ಕಹಿ ಜನಿಸಿತೆಂದರಿಯೆನು, ಚಿತ್ರದಲ್ಲಿ ತಾರಾ, ಲತಾ, ರಾಜಕುಮಾರ ಇವರ ಹೆಸರು ನಿಜವೆ ? ನಿಜವಾಗದಿದ್ದಲ್ಲಿ ಅವರ ಅಭಿನಯ ನಿಜವೆ ? ಅಭಿನಯವೆ ನಿಜವಾಗದಿದ್ದಲ್ಲಿ ಆ ಅಭಿನಯದಲ್ಲಿ ಕಾಣಿಸುವ ತೊಳಲುವಿಕೆ ಬಳಲುವಿಕೆ ರೂಪಿ ಸಂಸಾರ ನಿಜವೆ ? ಏಕೆಂದರೆ ಬಣ್ಣ ಬಣ್ಣವೆ!ಅದು ಚಿತ್ರವಲ್ಲ! ಚಿತ್ರವೆ ಆಗದಿರುವಾಗ ತಾರಾ, ಲತಾ, ರಾಜಕುಮಾರ ಹುಟ್ಟಿದುದು ಪುಸಿ. ಇದ್ದುದು ಪುಸಿ, ತೊಳಲಿ ಬಳಲುವ ಅಭಿನಯ ಪುಸಿ. ಪುಸಿ ಹುಟ್ಟಿತೆಂದು ಹೇಗೆ ತಿಳಿಯುವುದು ? ಹುಟ್ಟಿಯೆ ಇಲ್ಲವೆಂದು ತಿಳಿದ ಮೇಲೆ ಲಯವಾಗುವುದೆಂದು ಹೇಗೆ ತಿಳಿಯುವುದು ? ಅದಕ್ಕಾಗಿ ಬಣ್ಣವು ಚಿತ್ರರೂಪವಾಗಿ ಕಂಡರೂ ಅದುವೆ. ಬಣ್ಣವಾಗಿದ್ದರೂ ಬಣ್ಣವೆ. ಬಣ್ಣವು ಸದಾ ಇದ್ದಕ್ಕಿದ್ದ ಹಾಗೆ ಇರುವುದರಿಂದ ನಿರಂತರವು ಹೇಗೋ ಹಾಗೆ ಸಚ್ಚಿದ್ರೂಪವೆಂಬ ಎನ್ನ ಸತ್ಯದಲ್ಲಿ ಹೆಂಗೂಸು, ಗಂಡುಗೂಸು ಎಂಬ ಪುಸಿಯುಳ್ಳ ನಾಮರೂಪವು ಹೇಗೆ ಜನಿಸಿತೆಂದರಿಯೆ, ಕಲ್ಪಿತವಾಯಿತೆಂದರಿಯೆ, ಸತ್ಯದೊಳ್ ಅಸತ್ಯವುಂಟೆ ? ಬೆಳಕಿನೋಳ್ ಕತ್ತಲೆ ಜನಿಸಿದುದುಂಟೆ? ಅಮೃತದೋಳ್ ಕಹಿ ಜನಿಸಿದುದುಂಟೆ ? ಅಮೃತ ಅಮೃತವೆ, ಸತ್ಯವು ಸತ್ಯವೆ, ಬೆಳಕು ಬೆಳಕೆ, ಸತ್ಯದೋಳ್ ಪುಸಿಯುಳ್ಳ ನಾಮರೂಪು ಹುಟ್ಟಿತೆಂದರಿಯೆ, ಹುಟ್ಟಿತೆಂದರಿಯಲು ಬಾರದಿದ್ದಲ್ಲಿ ಇದ್ದುದೆಂದು ಹೇಗೆ ಹೇಳುವುದು, ಲಯವಾದುದೆಂದು ಹೇಗೆ ಹೇಳುವುದು.

ಸತ್ಯವಾದ ಸಚ್ಚಿದ್ರೂಪ ಸತ್ಯವೆ. ವ್ಯಕ್ತವಾಗಿ ಕಂಡರೂ ಅದುವೆ ಅವ್ಯಕ್ತಾಗಿ ಕಂಡರೂ ಅದುವೆ. ಸತ್ಯವೆಂಬ ಸಚ್ಚಿದ್ರೂಪ ನಿರಂತರ ಇದ್ದಕ್ಕಿದ್ದ ಹಾಗೆ ಇರುವುದರಿಂದ ಅಂಗಕ್ಕೂ ಆತ್ಮನಿಗೂ ಬೇಧವಿಲ್ಲವೆಂದು ಹೇಳಿದ್ದಾಳೆ. ಸತ್ಯವೆಂಬುದು ಸರ್ವಮಂಗಳ ನಿರಂತರವಾಗಿರುವ ತತ್ವ. ಇದು

ನಿರಂತರವಾಗಿ ಆತಂಕವಿಲ್ಲದೆ ಬೆಳಗುವ ಬೆಳಗು, ನಿರಾಲಂಬ ಬೆಳಗು, ಇದುವೆ ಸರ್ವ ಸಮನಾಗಿರುವ ಸತ್ಯ.

ತುಪ್ಪದ ಹಾಗೆ ಹೆತ್ತಿದರು ಅದುವೆ, ತಿಳಿಯಾದರೂ ಅದುವೆ. ಅಂಗವು ತಿಳಿದುಪ್ಪಕ್ಕೂ ಗಟ್ಟಿದುಪ್ಪಕ್ಕೂ ಹೇಗೆ ಸಮಸ್ವರೂಪವಾದ ಸತ್ಯವಾಗಿದೆಯೋ ಹಾಗೆ ಎನ್ನಂಗವನ್ನು ಶ್ರೀಗುರು ಮಂತ್ರ ಮಾಡಿ ತೋರಿದ ಘನವನೇನೆಂಬೆ? ಎನ್ನಂಗವೆಂಬುದು ನುಡಿಗೆಡೆಗೊಡದ ಘನವ ತೋರಿದುದರಿಂದ ಶೃತಿಗಗೋಚರವಾದ ಅಂಗವಾಯಿತಲ್ಲಾ, ಕಿವಿಗೆ ಕೇಳದ ಮಂತ್ರ ಘನವಾಯಿತಲ್ಲ ಅಂದರೆ ಎನ್ನಂಗ ಕಿವಿಗೆ ಕೇಳದ ಘನವೆ ಮಂತ್ರವಾಯಿತು. ನುಡಿಗೆಡೆಗೊಡದ ಘನವ ಮಾಡಿ ತೋರಿದುದರಿಂದ ಎನ್ನಂಗವೆಂಬುದು ಚಿಂತನೆಗೆ ನಿಲುಕದ ಅಚಿಂತ್ಯಪ್ರಮಾಣ ಗಮ್ಯವಾಯಿತಲ್ಲ. ಇದನ್ನಾರಯ್ಯಾ ಹೀಗೆಯೇ ಎಂದು ನಿರ್ಣಯಿಸುವದು.

ಎನ್ನಂಗ ನುಡಿಗೆಡೆಗೊಡದ ಘನವಾದ್ದರಿಂದ ನನ್ನೋಳ್ ಅಂಗಕ್ಕೂ ಆತ್ಮಕ್ಕೂ ಭೇದವೆಲ್ಲಿಯದು? ಅಂಗನೆಂದರೂ ನುಡಿಗೆಡೆಗೊಡದ ಘನವೆ , ಲಿಂಗನೆಂದರೂ ನುಡಿಗೆಡೆಗೊಡದ ಘನವೆ, ಅಂಗನೆಂದರೂ ಚಿಂತನೆಗೆ ನಿಲುಕದ ಅಚಿಂತ್ಯನೆ, ಲಿಂಗನೆಂದರೂ ಚಿಂತನೆಗೆ ನಿಲುಕದ ಅಚಿಂತ್ಯನೆ.

ಅಂಗನೆಂದರೂ ಪ್ರಮಾಣಂಗಳಿಗೆ ನಿಲುಕದ ಅಪ್ರಮಾಣನೆ, ಲಿಂಗನೆಂದರೂ ಪ್ರಮಾಣಗಳಿಗೆ ನಿಲುಕದ ಅಪ್ರಮಾಣನೆ, ಅಂಗನೆಂದರೂ ಅಳತೆಗೂ ಗಣನೆಗೂ ಭಾವಕ್ಕೂ ಮೀರಿದ ಅಗಮ್ಯನೆ, ಆತ್ಮನೆಂದರೂ ಅಳತೆಗೂ ಗಣನೆಗೂ ಭಾವಕ್ಕೂ ಮೀರಿದ ಅಗಮ್ಯನೆ.

ಎನ್ನ ನುಡಿಗೆಡೆಗೊಡದ ಘನ ನಡೆಗೆಡೆಗೊಡದ ಘನವಾಗಿರುವುದರಿಂದ, ಸಕಲಕ್ಕೂ ಸಮಸ್ವರೂಪವಾದ ಘನ, ಸಕಲಕ್ಕೂ ಸಮಸ್ವರೂಪವಾದ ಘನರೂಪಿ ಎನ್ನಂಗವಾದುದರಿಂದ ಅಂಗಕ್ಕೆ ಆತ್ಮಕ್ಕೆ ಭೇದವುಂಟೆ ಭಿನ್ನವುಂಟೆ? ಏಕೆಂದರೆ ನುಡಿಗೂ ನಡೆಗೂ ಮೀರಿದುದರಿಂದ ಖಂಡಿತವಿಲ್ಲದ ಅಖಂಡವು ಎನ್ನಂಗವಾದುದರಿಂದ ಸಾವಯವ ನಿರವಯಕ್ಕೆ ಭಿನ್ನವಿಲ್ಲವಯ್ಯ. ದೀಪಕ್ಕೆ ದೀಪ್ತಿಗೆ ಭೇದವುಂಟೆ?

ದೀಪವೆಂಬುದು ಸರ್ವಮಂಗಳಮಯವಾಗಿರುವ ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತಿರುವ ದೀಪ . ದೀಪವೆಂಬುದು ನಿರಂತರವಾಗಿ ಆತಂಕವಿಲ್ಲದೆ ಬೆಳಗುವ ಬೆಳಗು. ಇದುವೆ ಪೂರ್ಣಮದಃ ಪೂರ್ಣಮಿದಂ ರೂಪಿ ದೀಪ. ಪೂರ್ಣಾತ್ ಪೂರ್ಣವಾಗಿರುವ ದೀಪ . ಈ ದೀಪವೆ ಎನ್ನಂಗವಾದಾಗ ಸಾವಯವ ನಿರವಯಕ್ಕೆ ಭಿನ್ನವಿಲ್ಲವಯ್ಯ.

ಎನ್ನಂಗವು ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣವಿರುವುದರಿಂದ ಸಾವಯವ ಅದುವೆ, ನಿರವಯ ಅದುವೆ ಅಂದರೆ ಸಾವಯವವಾಗಿ ಕಂಡರೂ ಸರ್ವಮಂಗಳಮಯ, ನಿರಂತರವಾಗಿರುವ ತತ್ವ ನಿರವಯವೆನಿಸಿಕೊಂಡರೂ ಸರ್ವಮಂಗಳಮಯ, ನಿರಂತರವಾಗಿರುವ ತತ್ವ, ದೀಪಕ್ಕೆ ದೀಪ್ತಿಗೆ ಭೇದವುಂಟೆ? ಏಕೆಂದರೆ ಬೆಳಕು ಬೆಳಗುವಿಕೆಯನ್ನು ವಿಭಾಗ ಮಾಡಲು ಬರುವುದೆ ? ಇದು ಕಾರಣ ದೀಪ ದೀಪ್ತಿ ಎರಡು ಒಂದೆ ಹೇಗೋ ಹಾಗೆ ಸಾವಯವ ನಿರವಯ ವಿಭಾಗ ಮಾಡಲು ಬಾರದ್ದರಿಂದ ಸಾವಯವವೆಂದರೂ ಅದುವೆ ನಿರವಯವೆಂದರೂ ಅದುವೆ. ಇದ್ದುದೊಂದೆ ನಾಮ, ಎರಡಲ್ಲದೆ ಇರುವುದು ಒಂದೆ. ಸಾವಯವ ನಿರವಯವೆಂದೆನಿಸಿದರೂ ಒಂದೆ. ಕ್ಷರ ಅಕ್ಷರವೆಂದೆನಿಸಿಕೊಂಡರೂ ಅದುವೆ. ಆತ್ಮ ಅಂಗವೆಂದೆನಿಸಿಕೊಂಡರೂ ಅದುವೆ. ಎನ್ನಂಗವೆ ಖಂಡಿತವಿಲ್ಲದ ಅಖಂಡವಾದ್ದರಿಂದ ಸಕಲ, ನಿಃಕಲ ಅದುವೆ. ಎನ್ನಂಗವೆ

ಅಕ್ಷರೋತ್ತಮವಾಗಿರುವುದರಿಂದ ಷಡಕ್ಷರಿ ಅದುವೆ ಪಂಚಾಕ್ಷರಿ ಅದುವೆ ಎರಡಕ್ಷರ ಅದುವೆ ಒಂದೇ ಅಕ್ಷರ ಅದುವೆ, ಇದಲ್ಲದೆ ಸಕಲ ತತ್ವಂಗಳು ಅದುವೆ ನೋಡಾ. ಅದಕ್ಕಾಗಿ ಸಾವಯುವ ನಿರವಯಕ್ಕೆ ಭಿನ್ನವಿಲ್ಲನೋಡಾ.

ಸಾವಯುವ ನಿರವಯುವೆಂಬುದು ಅರಿವುಡೆ ಒಂದೆ, ಅರಿಯದ ಪ್ರಮಾದದಿಂದ ಮಾಯಿಕದೃಷ್ಟಿ ಅಜ್ಞದೃಷ್ಟಿ ಅದುವೆ, ಮರವು ಅರುವೆಂಬ ವಿಭಾಗ ದೃಷ್ಟಿ , ಬಂಧಮೋಕ್ಷಗಳೆಂಬ ಖಂಡ ದೃಷ್ಠಿ. ಈ ಖಂಡದೃಷ್ಠಿ ಯಾವಾಗ ಭ್ರಾಂತಿ ರೂಪವಾಗಿ ಇದು ಇದೆ ಇಲ್ಲವೆನ್ನಲು ಬಾರದಷ್ಟು ಅತ್ಯಂತ ಅಭಾವವಾದಾಗ ಆಗ ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತಿರುವ ಖಂಡಿತವಿಲ್ಲದ ಅಖಂಡ ಒಂದೆ ಪರಮಸತ್ಯ. ಅದುವೆ ಸರ್ವಮಂಗಳಮಯ ನಿರಂತರವಾಗಿರುವ ತತ್ವ ಅದುವೆ, ಎನ್ನಂಗ ಅದುವೆ, ಪೂರ್ಣಾತ್ ಪೂರ್ಣ ಅರುವು.

ಅರುವಿನೋಳ್ ನಾಮರೂಪವೆಂಬ ಕಲ್ಪಿತವಾಗಿಹುದು ಅದುವೆ, ವ್ಯಷ್ಟಿ ಶರೀರ, ಸಮಷ್ಟಿ ಶರೀರಗಳಾದಂತಾಗಿ ಜಗವಾಗಿ ಜಗದ ವ್ಯವಹಾರವಾಗಿ ಭಾಸಿಸುವುದು . ಚಿದ್ಘನದೋಳ್ ನಾಮರೂಪದ ವೈಚಿತ್ರವನೇನೆಂಬೆ ? ಇದು ಅಗ್ನಿಯೋಳ ಊಷ್ಣತ್ವ, ಚಂದನದೋಳ್ ಸುಗಂಧತ್ವ, ಚಂದ್ರಮನೋಳ್ ಪ್ರಕಾಶ ಶೀತಲ ಬೇರೆಂದು ಭಾವಿಸಲುಂಟೆ? ಅರುವು ಅರುವಿನೋಳ್ ಅನುಭವ, ಅನುಭವದೋಳ್ ಅಹಂತ್ವ, ಅಹಂತ್ವದೋಳ್ ಅವಿದ್ಯೆ ಅವಿದ್ಯೆದೋಳ್ ಜೀವ, ಜೀವತ್ವದೋಳ್ ಮನಸ್ಸು, ಮನಸ್ಸಿನೋಳ್ ಪ್ರಾಣ, ಪ್ರಾಣದೋಳ್ ಇಂದ್ರಿಯಂಗಳು ಇಂದ್ರಿಯಂಗಳೋಳ್ ದೇಹವು ಬೇರಲ್ಲ, ದೇಹಕ್ಕಿಂತ ಜಗತ್ತು ಬೇರಲ್ಲ, ಇದು ಮಹಾ ಚಕ್ರವು. ಈ ಚಕ್ರವು ಮಹಾ ಪ್ರವೃತ್ತನಂತೆ ತೋರಿದರೂ ಅಪ್ರವೃತ್ತವು. ಸಾವಯುವ ನಿರವಯ ಅಂಗ ಆತ್ಮ ಇವುಗಳ ಘನವದೇನು ಹೇಳುವುದು.

ಅರುವು ಎಂಬುದು ನಿರವಯ, ಅರುವಿನ ಅನುಭಾವವೆ ಸಾವಯುವ. ಚಿದ್ಘನವೆಂಬುದು ಆತ್ಮ, ಚಿದ್ಘನದನುಭವವೆ ಅಂಗ. ಚಿದ್ಘನ ಚಿದ್ಘನದನುಭವ ಬೇರೆಯೇ, ಅರುವು ಅರುವಿನ ಅನುಭವ ಬೇರೆಯೇ. ಬೇರೆ ಎಂದಡೆ ವಿಭಾಗಿಸಲು ಬರುವುದುಂಟೆ, ಬಾರದಿದ್ದಲ್ಲಿ ಕೂಡಿರುವುದುಂಟೆ? ಕೂಡದಿದ್ದಲ್ಲಿ ಅರುವೆಂಬುದು ಅರುವು, ಅರುವಿನ ಅನುಭವವೆಂಬುದು ಅರುವು ನೋಡಾ. ಅನುಭವವೆಂಬುದು ಅಹಂ , ಅಹಂತ್ವವೆ ಅಭಾಸನು , ಅಭಾಸನು ಅರುವು ಬೇರಾಗದ್ದರಿಂದ ಅಂಗ ಲಿಂಗ, ಲಿಂಗ ಅಂಗವೆಂದರಿತಲ್ಲಿಯೆ ಅಲ್ಲಿಯೇ ಕಾಣಿರೋ ಕೂಡಲ ಚೆನ್ನಸಂಗಯ್ಯ . ಲಿಂಗ ನಿರಂತರ ಅಲ್ಲಿಯೆ ಕಾಣರೋ ಎಂದು ಹೇಳಿದ್ದಾರೆ.

ಅಂಗನೇ ಆತ್ಮವಾದಲ್ಲಿಸಾವಯುವ ನಿರವಯುವಾದುದರಿಂದ ಅಭಾಸನೆಂಬುದು ಮನಸ್ಸು, ಮನಸ್ಸೆಂಬುದು ಅಭಾಸ, ನಾಮ ಎರಡಲ್ಲದೆ ಇರುವುದು ಒಂದೇ ಅದನ್ನು ಬೇರು ಮಾಡಿ ಕಾಣಲುಂಟೆ? ಕಾಣದಿದ್ದಲ್ಲಿ ಮನಸ್ಸೆಂಬುದು ಅಂಗ ಅಂಗನೆಂಬುದು ಆತ್ಮ, ಆತ್ಮನೆಂಬುದು ಬ್ರಹ್ಮ, ಪರಬ್ರಹ್ಮ ಇದುವೆ ನೋಡಾ.

ಮನಸ್ಸೇ ಇಂದ್ರಿಯಗಳು, ಇಂದ್ರೀಯಂಗಳೆಂಬುದು ದೇಹ, ದೇಹವೆಂಬುದು ಅಂಗ, ಇಂದ್ರಿಯಂಗಳು ದೇಹ ಬೇರು ಮಾಡಿ ಭೇದವ ಕಾಣಲುಂಟೆ, ಕಾಣದಿದ್ದಲ್ಲಿ ಇಂದ್ರಿಯಗಳೆಂಬುದು ದೇಹ, ದೇಹವೆಂಬುದು ಅಂಗ, ದೇಹ ಅಂಗ ಬೇರು ಮಾಡಿ ಭೇದವ ಕಾಣಲುಂಟೆ? ಕಾಣದಿದ್ದಲ್ಲಿ ದೇಹ ಅಂಗವೆಂಬುದು ಒಂದೆ ನೋಡಾ. ಅಂಗವೆಂಬುದು ಆತ್ಮ , ಆತ್ಮನೆಂಬುದು ಬ್ರಹ್ಮ . ದೇಹವೆಂಬುದು ಬ್ರಹ್ಮ. ಜಗತ್ತೆಂಬುದು ಬ್ರಹ್ಮ . ಒಂದೇ ವಸ್ತುವೆ ದ್ವಿತೀಯ ನಾಮುಪಡೆದಂತೆ.

''ಘನಗಂಭೀರ ಮಹಾವಾರುಧಿಯಲ್ಲಿ ನೆರೆ, ತೊರೆ, ಬುದ್ಬುದ, ಪೇನ ತರಂಗಗಳು

ತೋರಿತ್ತಲ್ಲಾ ಎಂದೊಡೆ ಅವು ಬೇರಾಗಬಲ್ಲುದೆ ? ಪರಶಿವನೆಂಬ ಅಂಬುದಿಯಲ್ಲಿ ಸಕಲ ಬ್ರಹ್ಮಾಂಡಗಳಾದವಲ್ಲದೆ ಬೇರಾಗಬಲ್ಲುದೆ ? ಇದು ಬೇರೆಂಬ ಅರೆಮರುಳರ ನಾನೇನೆಂಬೆ ವಿಶ್ವ ತಿಳಿದು ನೋಡಲು ಚಿಮ್ಮಲಿಗೆಯ ಚೆನ್ನರಾಮ ಲಿಂಗವು ತಾನೆ.''

ಸಮುದ್ರದಲ್ಲಿ ತೋರುವ ನೆರೆ, ತೊರೆ, ಬುದ್ಬದ ಪೇನ ತರಂಗಗಳೆಲ್ಲ ಸಮುದ್ರದ ಉದಕವಲ್ಲದೆ ಅನ್ಯವಲ್ಲ, ಸಮುದ್ರವು ಉದಕವೆ, ನೆರೆ, ತೊರೆ, ಪೇನ ತರಂಗವು ಉದಕವೆ, ಉದಕದ ಜ್ಞಾನವಾಗದ್ದರಿಂದ ಸಮುದ್ರ ಅದರಲ್ಲಿ ತೋರುವ ನೆರೆ, ತೊರೆ, ಬುದ್ಬುದ ಪೇನ ತರಂಗಗಳಾಗಿ ಭಾಸಿಸುತ್ತಿದ್ದವು. ಉದಕದ ಜ್ಞಾನವಾಗುವಡೆ ನೆರೆ, ತೊರೆ, ಪೇನ ತರಂಗಗಳ ರೂಪದಿಂದ ಕಂಡರೂ ಉದಕವೆ. ಸಮುದ್ರವೆಂದೆನಿಸಿದರೂ ಉದಕವೆ. ಉದಕವೆಂಬುದು ನಿಸ್ಸೀಮವು ಹೇಗೋ ಹಾಗೆ ಎನ್ನಂಗವೆಂಬುದು ನಿರಂತರವಾಗಿರುವ ಆತಂಕವಿಲ್ಲದ ನಿಸ್ಸೀಮ ಬೆಳಗು, ಅದುವೆ ಗಗನದಂತೆ ಅಖಂಡವಾಗಿರುವ ಜ್ಞಾನಾಮೃತವಾದ್ದರಿಂದ ನನಗೆ ಅಂಗವೆಂಬುದಷ್ಟೆ ಆತ್ಮನೆಂಬುದಷ್ಟೆ, ವ್ಯಕ್ತವಷ್ಟೆ ಅವ್ಯಕ್ತವಷ್ಟೆ, ಸಾವಯವ ಅಷ್ಟೆ, ನಿರವಯವಷ್ಟೆ.

ಏಕೆಂದರೆ ಏನೊಂದುಪಮಿಸಲೆಡೆಗೊಡದೆ ಎನ್ನಂಗವೆಂಬ ಅಂಬುದಿಯಲ್ಲಿ ಪಿಂಡಾಂಡ, ಬ್ರಹ್ಮಾಂಡ, ಅಂಗ, ಆತ್ಮ, ಚಿದ್ಶಕ್ತಿ ಚಿದಾಭಾಸ ಸಾವಯವ ನಿರವಯ ಪ್ರಕೃತಿ ಪುರುಷಗಳೆಂಬ ಸಕಲ ತತ್ವಂಗಳು ಎನ್ನಂಗದ ಸತ್ ಸ್ವರೂಪವಲ್ಲದಲ್ಲದನ್ಯವಲ್ಲ, ಇದು ತಾನಾರೆಂದು ಯತಾರ್ಥ ತಿಳಿದ ಅರುವಿಗೆ ಸ್ವತಃ ಸಿದ್ಧವು. ವೇದ್ಯವೂ ಆಗಿದೆ. ಬೇಧಜ್ಞಾನಿಗೆ ತಿಳಿಯದು. ಅಕ್ಕನು ಯತಾರ್ಥ ಜ್ಞಾನಿಯಾಗಿರುವುದರಿಂದ ಸಾವಯವ ನಿರವಯಕ್ಕೆ ಭೇದವಿಲ್ಲವೆಂದು ತನ್ನ ಖಂಡಿತವಿಲ್ಲದ ಅಖಂಡದ ಘನತ್ವವನ್ನೇ ಸಿದ್ಧ ಮಾಡಿದ್ದಾಳೆ. ಇದು ಕಾರಣ ಅಖಂಡೈಕರಸವಾದ ಚೆನ್ನಮಲ್ಲಿಕಾರ್ಜುನ ದೇವರ ಬೆರಸಿ, ಮತಿಗೆಟ್ಟವಳ ಏತಕ್ಕೆ ನುಡಿಸುವಿರಯ್ಯ ಪ್ರಭುವೆ ಎಂದು ಹೇಳಿದ್ದಾಳೆ. ಅಕ್ಕ ಮತಿಗೆಟ್ಟವಳು ಅಂದರೆ ಮತಿಗತಿಗೆ ಮೀರಿದವಳು. ಮರುವರುವಿಗೆ ಮೀರಿದವಳು. ನೆನಹು ನಿರ್ಣಯಕ್ಕೂ ಮೀರಿದವಳು. ಏಕೆಂದರೆ ಎನ್ನಂಗವನು ಶ್ರೀಗುರು ಮಂತ್ರ ಮಾಡಿ ತೋರಿದುದರಿಂದ ಮತಿಗೆಟ್ಟವಳು ಅಂದರೆ ಶೃತಿಗಗೋಚರ, ವಾಙ್ಮನಕ್ಕಗೋಚರ ನಡೆಗೆಡೆಗೊಡದ ಘನ, ನುಡಿಗೆಡೆಗೊಡದ ಘನವಾದ್ದರಿಂದ ಮತಿಗೆಟ್ಟವಳನ್ನು ಏತಕ್ಕೆ ನುಡಿಸುವಿರಯ್ಯ.

### 33

**ಅಂಗವ ಲಿಂಗಮುಖದಿಂದರ್ಪಿಸಿ ಅಂಗ ಅನಂಗವಾಯಿತ್ತು.**
**ಮನವ ಅರುವಿಂಗರ್ಪಿಸಿ ಮನ ಲಯವಾಯಿತ್ತು.**
**ಭಾವ ತೃಪ್ತಿಗರ್ಪಿಸಿ ಭಾವ ಬಯಲಾಯಿತ್ತು.**
**ಅಂಗ ಮನ ಭಾವವಳಿದ ಕಾರಣ ಕಾಯ ಅಕಾಯವಾಯಿತ್ತು.**
**ಎನ್ನ ಕಾಯದ ಸುಖದ ಭೋಗದ ಲಿಂಗವೆ ಭೋಗಿಸುವುದಾಗಿ**
**ಶರಣಸತಿ ಲಿಂಗಪತಿಯಾದೆನು.**
**ಇದು ಕಾರಣ ಚೆನ್ನಮಲ್ಲಿಕಾರ್ಜುನನೆಂಬ**
**ಗಂಡನ ಒಳ ಹೊಕ್ಕು ಬೆರೆಸಿದೆನು.**

**ತಾತ್ಪರ್ಯ :** ಮನೆಯೊಳಗುಳ್ಳ ಕತ್ತಲೆ ಬೆಳಕಿನ ಮುಖಕ್ಕರ್ಪಿಸಿದಾಗ ಕತ್ತಲೆ ಎತ್ತ ಕಡೆಗೆ

ಹೋಯಿತೆನ್ನುವುದು ಗೊತ್ತಾಗದು. ಆದರೆ ಬೆಳಕಿನ ಮುಖ ಯಾವುದು ? ಅದರ ಬೆನ್ನಾವುದು, ಹೊಟ್ಟೆ ಆವುದು, ಇದು ಗೊತ್ತಾಗುವದೆ? ಜಗದ ಕತ್ತಲೆ ಕೆಡಬೇಕಾದರೆ ಸೂರ್ಯನ ಮುಖದಿಂದಲ್ಲವೆ, ಸೂರ್ಯನ ಮುಖ ಬೆಳಕು, ಅವನ ಸಕಲ ಅಂಗಾಂಗಗಳು ಬೆಳಕು. ಅಲ್ಲಿ ಇವು ಕರ್ಮೇಂದ್ರಿಯಂಗಳು, ಇವು ಜ್ಞಾನೇಂದ್ರಿಯಂಗಳು ಎಂದು ಗುರುತಿಸಬಹುದೆ. ಸೂರ್ಯ ಬೆಳಕಿನ ಮುದ್ದೆ , ಪೂರ್ಣ ಪ್ರಕಾಶಮಯ ಕತ್ತಲೆ ಧ್ವಂಸ ಮಾಡುವ ಶಕ್ತಿ. ತೇಜೋಶಕ್ತಿ ಹೇಗೋ ಅಂಗವೆಂಬ ವಿಕಲ್ಪ ರೂಪ ಕತ್ತಲೆಯನ್ನು ಸಚ್ಚಿದ್ರೂಪ ಮುಖಕ್ಕರ್ಪಿಸಿದಾಗ ಅಂಗವೆಂಬ ಅಜ್ಞಾನಂಧಃಕಾರ ರೂಪಿ ವಿಕಲ್ಪ ಎತ್ತ ಕಡೆಗೆ ಹೋಯಿತ್ತು ಎನ್ನುವುದು ಗೊತ್ತಾಗದ್ದರಿಂದ ಅಂಗ ಅನಂಗವಾಯಿತ್ತು. ಮನವೆಂಬುದು ಕಲ್ಪನಾಮಯ. ಇದು ಅರುವಿಂಗರ್ಪಿಸುವುಡೆ, ಮನ ಲಯವಾಗುವುದು. ಹೇಗೆಂದರೆ ಕಲ್ಪನೆಯಿಂದುಕ್ತವಾದ ಮನ ಲಯವಾಗಬೇಕಾದರೆ ಕಲ್ಪನಾತೀತವಾದ ಯಾವ ಅರುವುಂಟೊ ಆ ಅರುವುಳ್ಳವನಾಗಿ ನೋಡುವುಡೆ ಕಲ್ಪನೆಯುಳ್ಳ ಮನವೆ ಲಯವಾಗುವುದು.

ಅರುವೆಂಬುದು ಚಿದ್ಘನ. ಇದು ಅಲುಪ್ತ ಪ್ರಕಾಶ ಸರ್ವವ್ಯಾಪಿಯು. ಸರ್ವತ್ರ ಸದಾ ಒಳಹೊರಗೆನ್ನದೆ ಭರಿತವಾದ ಅರುವು. ಕೆಡದ ಅರುವು, ಅಕಲಂಕ ಅರುವು, ನಿರ್ವಿಕಾರ ಅರುವು. ನಿಸ್ಸೀಮ ಅರುವು ಈ ಅರುವಿಂಗರ್ಪಿಸುವುದೆ ಮನ ಲಯವಾಗುವುದು. ಅಂಗವೆಂಬುದು ಕಲ್ಪಿತ, ಮನವೆಂಬುದು ಕಲ್ಪಿತ ಭಾವವೆಂಬುದು ಬಯಕೆಯಿಂದುಕ್ತವು. ಅಂಗ ಅಸ್ತಿ , ಭಾತಿ ಮುಖಕ್ಕರ್ಪಿಸಿ ಅಂಗ ಅನಂಗವಾಯಿತ್ತು. ಮನವು ಅಕಲಂಕ ಅರುವು, ನಿರ್ವಿಕಾರ ಅರುವಿಗರ್ಪಿಸಿ ಮನ ಲಯವಾಯಿತ್ತು. ಭಾವರೂಪಿ ಬಯಕೆಯುಳ್ಳ ಜೀವನ ಸವೆಯದಾನಂದ ರೂಪಿ ತೃಪ್ತಿಗರ್ಪಿತವಾಗಿ ಭಾವ ಬಯಲಾಯಿತ್ತು.

ಭಾವಕ್ಕೆ ನಿರ್ಭಾವದ ದರ್ಶನವಾಗದ ವಿನಃ ಅದರ ಬಯಕೆ ಹಿಂಗದು. ಅದಕ್ಕಾಗಿ ಭಾವವೆ ಜನ್ಮಕ್ಕೆ ಈಡು. ನಿರ್ಭಾವವೆ ಜನ್ಮಕ್ಕೆ ಕಾಡುಗಿಚ್ಚು. ಕಾರಣ ಭಾವ ಬಯಲಾಗಬೇಕಾದರೆ ನಿರ್ಭಾವವೆ ಮುಖ್ಯ. '' ಕಾಯ ನಾನೆಂದರೆ ಕರ್ಮಕಾಂಡ. ಈಶಾರ್ಪಣವೆಂದರೆ ಭಕ್ತಕಾಂಡಿ, ಸಕಲ ಕರ್ಮಗಳಿಗೆ ಸಾಕ್ಷಿ ನಾನೆಂದರೆ ಜ್ಞಾನಕಾಂಡಿ, ಕಾಂಡತ್ರಯವಿಲ್ಲದ ಅಖಂಡನ ತೋರಾ ಕಪಿಲಸಿದ್ಧ ಚೆನ್ನಮಲ್ಲಿಕಾರ್ಜುನ''

ದೇಹ ತಾನೆಂದರೆ ಕರ್ಮಿಯು, ತನು ಮನ ಧನ ಈಶ್ವರನಿಗೆ ಅರ್ಪಿತವೆಂದರೆ ಭಕ್ತನು, ಗುಣವೆ ಗುಣದಿಂದುಕ್ತವಾಗಿದೆ. ನಾನು ಇವುಗಳಿಗೆ ಸಾಕ್ಷಿಯು, ಅಸಂಗನೆನ್ನುವವನು ಜ್ಞಾನಾಭಿಮಾನಿಯು, ಇವು ಮೂರು ಕಾಂಡತ್ರಯವುಳ್ಳವುಗಳು ಅಂದರೆ ಮಾಯಿಕದಿಂದುಕ್ತವು, ಭಾವದಿಂದುಕ್ತವು, ಭಾವ ಬಯಲಾಗಬೇಕಾದರೆ ಖಂಡಿತವಿಲ್ಲದ ಅಖಂಡರೂಪಿ, ನಿರ್ಭಾವ ತೃಪ್ತಿಗರ್ಪಿಸಿದಾಗ ಭಾವ ಬಯಲಾಗುವದು. ನಿರ್ಭಾವದ ಘನವದೇನು ಹೇಳುವುದು. ಅಂಗನೆನ್ನೆ ಲಿಂಗನೆನ್ನೆ , ರೂಪನೆನ್ನೆ ಅರೂಪನೆನ್ನೆ , ಸಂಗನೆನ್ನೆ ನಿಸ್ಸಂಗನೆನ್ನೆ , ನಾಮನೆನ್ನೆ ಅನಾಮನೆನ್ನೆ , ಸಹಜನೆನ್ನೆ ನಿಜನೆನ್ನೆ ಅನಿಜನೆನ್ನೆ , ಅಚಲನೆನ್ನೆ ಖಂಡಿತನೆನ್ನೆ, ಶೂನ್ಯನೆನ್ನೆ ನಿಶ್ಶೂನ್ಯನೆನ್ನೆ ಏನೂ ಎನ್ನದೆ ಪರಮಾನಂದದ ಘನವ ಕಂಡು ಏನೂ ಎನ್ನಲು ಬಾರದಂತಾದಲ್ಲಿ ಭಾವ ಬಯಲಾಗುವುದು.

ನಿರ್ಭಾವರೂಪಿ ನಿರ್ಮಾಯನ ಸುಖ ಸುಖವೆ ಸುಖವು, ಆನಂದವೆ ಘನಾನಂದವು, ಅದು ಸವೆಯದಾನಂದ, ಬೇಸರವಾಗದ ಆನಂದ, ಸಾಕೆನಿಸದ ಆನಂದ ತುಂಬಿರುವಾಗ ಆಗ ಅಕ್ಕನ ದೃಷ್ಠಿಯಲ್ಲಿ ಅಂಗವಿಲ್ಲ, ಮನವಿಲ್ಲ, ಭಾವವಿಲ್ಲದ ಕಾರಣ ಕಾಯ ಅಕಾಯವಾಗಿತ್ತು.

ಪ್ರಭು ಎನ್ನ ಕಾಯದ ಸುಖದ ಭೋಗವ ಲಿಂಗವೆ ಭೋಗಿಸುವದರಿಂದ ಶರಣ ಸತಿ

ಲಿಂಗಪತಿಯಾದೆನು. ಎನ್ನ ಕಾಯವೆಂಬುದು ಅಕಾಯ ನೋಡಾ, ಏನೊಂದುಸುರಲು ಬಾರದ ಕಾಯ. ನನ್ನ ಗಂಡನಾದರೂ ನುಡಿಗೆಡೆಗೊಡದ ಘನವಾಗಿರುವುದರಿಂದ ಎನ್ನ ಕಾಯದ ಸುಖದ ಭೋಗವ ಲಿಂಗದೇವನೆ ಭೋಗಿಸುವನು. ನನ್ನ ಕಾಯವೆಂಬುದು ಏನೆಂದುಸರಲು ಬಾರದ್ದರಿಂದ ಅಂಗನೆನ್ನೆ , ಲಿಂಗನೆನ್ನೆ , ರೂಪನೆನ್ನೆ , ಅರೂಪನೆನ್ನೆ , ನಿಸ್ಸಂಗನೆನ್ನೆ , ಸಂಗಿ ಎನ್ನೆ , ನಿಸ್ಸಂಗಿ ಎನ್ನೆ, ನಾಮನೆನ್ನೆ, ಅನಾಮನೆನ್ನೆ, ಕೂಡಿದೆನೆನ್ನೆ, ಅಗಲಿದೆನೆನ್ನೆ, ಸಹಜನೆನ್ನೆ ಏನೂ ಎನ್ನಲು ಬಾರದ್ದೆಂಬುದೆ ಅಕಾಯ ನೋಡಾ. ವಾಣಿ ಮನಕ್ಕಿಂಬು ಕೊಟ್ಟುದೆಲ್ಲ ಕಾಯವೆನಿಸಿತ್ತು.

ಅದಕ್ಕಾಗಿ ನನ್ನ ಕಾಯ ಸುಖದ ಭೋಗ ವಾಙ್ಮನೋತೀತವಾದ ಲಿಂಗದೇವ ಭೋಗಿಸುವದರಿಂದ ಶರಣಸತಿ ಲಿಂಗಪತಿಯಾದೆನು. ಇದು ಕಾರಣ ಚೆನ್ನಮಲ್ಲಿಕಾರ್ಜುನನೆಂಬ ಗಂಡನ ಒಳಹೊಕ್ಕು ಬೆರೆಸಿದೆನು.ಅಂದರೆ ನಿಃಶಬ್ದ ಘನಗಂಭೀರ ಸುಖವೆ ನನ್ನಗಂಡ. ಶರಣಸತಿ ಲಿಂಗಪತಿ, ಎಂಬುದು ಕೂಡ ಬಿಟ್ಟಿದ್ದೆ .ಅಂಗನೆನ್ನೆ , ಲಿಂಗನೆನ್ನೆ , ರೂಪನೆನ್ನೆ , ನಿರೂಪನೆನ್ನೆ , ನಾಮಿ ಎನ್ನೆ, ಅನಾಮಿ ಎನ್ನೆ, ಕೂಡಿದನೆನ್ನೆ, ಅಗಲಿದೆನೆನ್ನೆ ಎಂಬುವದು ಕೂಡಾ ಬಿಟ್ಟಿದ್ದೆ. ಒಳಹೊಕ್ಕಂತೆ ಸ್ವಯಸುಖದೊಳ್ ಸುಖದ ಸುಖವಾದುದೆ ಬೆರತಂತೆ, ಬೆರೆಸಿದಂತೆ ಎಂದು ಹೇಳಿದ್ದಾಳೆ.

**34**

**ನಾ ಸತ್ತೆನೆಂದು ಹೆಣ ಕೂಗಿದುದುಂಟೆ ?**
**ಬೈಚಿಟ್ಟ ಬಯಕೆ ಕರೆದುದುಂಟೆ ?**
**ಹೆಪ್ಪಿಟ್ಟ ಹಾಲು ಸಿಹಿಯಪ್ಪುದೆ,**
**ಈ ಮಾತು ಒಪ್ಪವಲ್ಲ ಗುಹೇಶ್ವರ ಲಿಂಗಕ್ಕೆ.**

**ತಾತ್ಪರ್ಯ :** ಎಲೆ ಅವ್ವಾ, ಹೆಣವೇನಾದರೂ ನಾ ಸತ್ತೆನೆಂದು ಕೂಗಿದುದುಂಟೆ ? ಕೂಗಿದರೆ ಅದು ಹೆಣವೇನವ್ವಾ ? ಹೆಣವು ಎಂದಾದರೂ ಕೂಗಿದುದುಂಟೆ ? ಇದು ಆಶ್ಚರ್ಯ ನೋಡವ್ವಾ, ಏಕೆಂದರೆ ಚೆನ್ನಮಲ್ಲಿಕಾರ್ಜುನನೆಂಬ ಗಂಡನ ಒಳ ಹೊಕ್ಕು ಬೆರೆಸಿದವಳಿಗೆ ಅಲ್ಲಿ ವಾಣಿಗಿಂಬಿಲ್ಲ, ನಿರ್ವಾಣದ ನಿಲಯ ನಿಬ್ಬೆರಗಿನ ಬೆಳಗು. ಅಲ್ಲಿ ಉದಯವಾದುದಿಲ್ಲ, ಅಸ್ತವಾದುದಿಲ್ಲ, ಮರೆತುದಿಲ್ಲ ಅರಿತುದಿಲ್ಲ, ಶುದ್ಧವಿಲ್ಲ, ಅಶುದ್ಧವಿಲ್ಲ, ದೃಶ್ಯವಿಲ್ಲ, ದೃಕ್ ಇಲ್ಲ, ಅಲ್ಲಿ ಒಳಹೊಕ್ಕುದು ಹೇಗೆ? ಒಳಹೊಕ್ಕು ಬೆರೆಸಿದ ಮೇಲೆ ನೀ ಕಥನ ಮಾಡಿದುದು ಹೇಗೆ? ಇದು ಆಶ್ಚರ್ಯ ನೋಡವ್ವಾ,

ನಿರ್ಮಲ ನಿಜ ಘನ. ಅದು ಸೀಮಾತೀತ, ಉಪಮಾತೀತವು, ಉಪಮೆಯುಳ್ಳದ್ದಾಗದು. ಅವಿಲಕ್ಷ್ಯವು, ವಿಲಕ್ಷಣವುಳ್ಳದ್ದಾಗದು, ನಿಃಶಬ್ದ ಘನಗಂಭೀರರೂಪಿ ಸುಖವು ಶಬ್ದರೂಪ ಚೆನ್ನಮಲ್ಲಿಕಾರ್ಜುನನೆಂಬ ವಾಣಿಗೆ ನಿಲುಕದು. ನಿರ್ಭಯ ಚೆಲುವ ಭಯವುಳ್ಳ ಚೆಲುವನಾಗನು. ಅಮರತ್ವವು ಮೃತ್ಯುವಿಗೊಳಪಡದು. ಏನೊಂದುಸರಲು ಬಾರದ ಘನ, ಆವಾವ ಲಕ್ಷಣವುಳ್ಳದ್ದಾಗದು. ನೀನಾವ ಲಕ್ಷಣವುಳ್ಳವಳಾಗಿ ಒಳ ಹೊಕ್ಕೆ ಒಳಹೊಕ್ಕ ಮೇಲೆ ನೀನು ಕೂಗಿದುದು ಇದು ಆಶ್ಚರ್ಯ ನೋಡಾ.

ಬೈಚ್ಚಿಟ್ಟ ಬಯಕೆ ಕರೆದುದುಂಟೆ, ಹೂಳಿಟ್ಟ ಹೆಣ ಆರನ್ನಾದರೂ ಕ್ಕರೆದುದುಂಟೆ? ಚೆನ್ನಮಲ್ಲಿಕಾರ್ಜುನ ರೂಪಿ ಘನಲಿಂಗ ಜ್ಞಾನ, ಇದು ಬೈಚಿಟ್ಟ ಬಯಕೆ ಅಲ್ಲವೆ. ಇದು ಅನಂತ ಕಾಲದ ಬೈಚಿಟ್ಟ ಬಯಕೆ ಅಲ್ಲವೆ. ಇದು ನಿನ್ನ ಲಿಂಗಾಂಗ ಸಮರಸ ಜ್ಞಾನರೂಪಿ ನಿಧಾನ. ಸಮ್ಯಜ್ಞಾನ

ರೂಪಿ ನಿಧಾನ, ಸಮರತಿ ಸಮಕಲೆಯುಳ್ಳ ನಿಧಾನ, ದ್ವಿಪದ ಕಾಣದ ನಿಧಾನ, ವಾಚ್ಯ ಲಕ್ಷ್ಯ ಕಾಣದ ನಿಧಾನ, ಸಂಗ ನಿಸ್ಸಂಗ ಕಾಣದ ನಿಧಾನ, ಧ್ಯಾನಧಾರಣಾದಿಗಳ ಕಾಣದ ನಿಧಾನ, ಇದು ಸಕಲಕ್ಕು ಅತೀತ ಜ್ಞಾನರೂಪಿ ನಿಧಾನ, ಅಖಂಡ ಜ್ಞಾನರೂಪಿ ನಿಧಾನ.

ಈ ಜ್ಞಾನ ಘನರೂಪಿ ನಿಧಾನಕ್ಕೆ ವಿದ್ಯಾ ಅಷ್ಟೆ ಅವಿದ್ಯಾ ಅಷ್ಟೆ, ಅಂಗನೆಂಬುದಷ್ಟೆ, ಲಿಂಗನೆಂಬುದಷ್ಟೆ, ಮರವಷ್ಟೆ, ಅರುವಷ್ಟೆ ಇದು ಸರ್ವಸಮನಾಗಿರುವ ಸತ್ಯ ಜ್ಞಾನರೂಪಿ ನಿಧಾನ, ಅಗಮ್ಯ ನಿಧಾನ, ಇದು ಕರೆದುದುಂಟೆ?

ಹೆಪ್ಪಿಟ್ಟ ಹಾಲು ಸಿಹಿಯಾದುದುಂಟೆ? ಹೆಪ್ಪಿಟ್ಟ ಹಾಲು ಕೆಡುವದು ಸಹಜ. ಆದರೆ ನಿನ್ನ ಮಾತು ಹೆಪ್ಪಿಟ್ಟ ಹಾಲು ಸಿಹಿ ಎಂದಂತಾಗುವದಲ್ಲವ್ವಾ, ಹೇಗೆಂದರೆ ಅಂಗವೆಂಬುದು ಹಾಲು, ಲಿಂಗಮುಖವೆಂಬ ಜ್ಞಾನವು ಮುಟ್ಟಿದ ಮೇಲೆ ಅಂಗ ಅನಂಗವಾಯಿತ್ತು. ಅಂದರೆ ಅದು ಕೆಟ್ಟಿತ್ತು. ಮನವೆಂಬ ಕಲ್ಪನಾರೂಪ ಹಾಲು ಅರು ರೂಪಿ ಜ್ಞಾನವ ಮುಟ್ಟಲು ಮನವೆಂಬ ಹಾಲು ಕೆಟ್ಟಿತ್ತು. ಭಾವವೆಂಬ ಹಾಲು ತೃಪ್ತಿರೂಪ ತೃಪ್ತಿ ಮುಟ್ಟಲು ಭಾವರೂಪ ಹಾಲು ಕೆಟ್ಟಿತ್ತು. ಕೆಟ್ಟ ಅಂಗ, ಕೆಟ್ಟ ಮನ ಕೆಟ್ಟ ಭಾವ, ಅದು ಪುನಃ ಸಿಹಿಯಾದುದು ಹೇಗವ್ವಾ? ನೀನು ಸಿಹಿಯಾದುದು ಎಂದು ಹೇಳಿದರೆ ಇದು ಒಪ್ಪಿಗೆಯಾದುದಲ್ಲ, ಸಮ್ಮತವಾದುದಲ್ಲ ಗುಹೇಶ್ವರ ಲಿಂಗಕ್ಕೆ.

ಇದಕ್ಕೆ ಅಕ್ಕಗಳ ಪ್ರತ್ಯುತ್ತರ

**35**

**ಸತ್ತ ಹೆಣ ಕೂಗಿದುದುಂಟು, ಬೈಚಿಟ್ಟ ಬಯಕೆ ಕರೆದುದುಂಟು.**
**ಹೆಪ್ಪಿಟ್ಟ ಹಾಲು ಗಟ್ಟಿಗೊಂಡು ಸಿಹಿಯಾದುದುಂಟು.**
**ಇದು ನಿಶ್ಚೈಸಿ ನೋಡಿ ಚೆನ್ನಮಲ್ಲಿಕಾರ್ಜುನನಲ್ಲಿ.**

**ತಾತ್ಪರ್ಯ** : ಪ್ರಭುವೆ ಸತ್ತ ಹೆಣ ಕೂಗಿದುದುಂಟು. ಅದು ಕೂಗಬಹುದು ಕೂಗದಿರಬ ಹುದು, ಆದರೆ ಸತ್ತ ಹೆಣದ ಘನವನಾರು ಬಲ್ಲರು. ಅಸತ್ ಹೆಣ ಅದು ಮೊದಲೇ ಅಸತ್, ಅದು ಕೂಗಿದುದು ಹೇಗೆ ?

ಸತ್ತ ಹೆಣವೆಂದರೆ ಮಾತಾಡಿದರೂ ಮಾತಾಡಿದುದಲ್ಲ , ಸತ್ ಸ್ವರೂಪದ ಘನವ ತಿಳಿಯುವುಡೆ ಸಕಲ ಶರೀರಗಳು ಸತ್ ಸ್ವರೂಪವೆ, ಸ್ಥಾವರ ಜಂಗಮ ಜಗವೆಲ್ಲ ಸತ್ ಸ್ವರೂಪವೆ.

ಆಚಾರ ಅನಾಚಾರದಿಂದುಕ್ತವಾದ ಶರೀರವಾಗಲಿ ಅವು ಸತ್ ಸ್ವರೂಪ ಶರೀರಗಳೇ. ಅಂದರೆ ಸತ್ ಹೆಣದ ಸದೃಶವು

ಜ್ಞಾನಿ ಶರೀರವಾಗಲಿ, ಅಜ್ಞಾನಿ ಶರೀರವಾಗಲಿ, ನಾಯಿ, ಕತ್ತೆ, ಆನೆ, ಸಿಂಹ, ಪಶು, ಪಕ್ಷಿ, ವಿಷಜಂತು, ನಾನಾವರ್ಗದವು ಇರಲಿ ಅವು ಸತ್ ಶರೀರದ ಶರೀರಗಳು. ಅಂದರೆ ಸತ್ತ ಹೆಣದ ಸದೃಶವು.

ಸತ್ತ ಹೆಣದ ದೃಷ್ಟಿಯಲ್ಲಿ ಹೇಗೆ ಶ್ರೇಷ್ಟರಿಲ್ಲ , ಕೀಳರಿಲ್ಲ , ತನ್ನವರಿಲ್ಲ , ಅನ್ಯರಿಲ್ಲ , ನಾನೆಂಬುದಿಲ್ಲ , ನೀನೆಂಬುದಿಲ್ಲ , ಹೇಗೋ ಹಾಗೆ ಸತ್ ಸ್ವರೂಪದ ಜ್ಞಾನವಾದಲ್ಲಿ ಅಲ್ಲಿಯೂ ಇವೆಲ್ಲ ಸಮಾನವು.

ಆ ಸತ್ತ ಹೆಣಕ್ಕೆ ದೋಷದೃಷ್ಟಿ , ಭೇದ ದೃಷ್ಟಿ ಹೇಗಿಲ್ಲವೋ ಹಾಗೆ ಸತ್ ಸ್ವರೂಪವನರಿತ

ಸಮ್ಯಜ್ಞಾನಿಯ ದೃಷ್ಟಿ, ಅಕಲಂಕ ದೃಷ್ಟಿ. ಅಲ್ಲಿ ಪಾಪಿಗಳಷ್ಟೆ, ಪುಣ್ಯಾತ್ಮರುಗಳಷ್ಟೆ, ಮೂಢರಷ್ಟೆ, ಅಮೂಢರಷ್ಟೆ, ಸತ್ತುದಷ್ಟೆ, ಬದುಕಿದುದಷ್ಟೆ, ಏಕೆಂದರೆ ಸರ್ವಸಮನಾಗಿರುವ ಸತ್ ಸ್ವರೂಪ ಸ್ವಮಹಿಮ್ನವು. ಅದು ತಾನೆ ತಾನಾದುದು.

ಅದಕ್ಕೆ ಬಂಧನವಷ್ಟೆ, ಮುಕ್ತ ಅಷ್ಟೆ, ಆಸೆ ಅಷ್ಟೆ, ನಿರಾಶೆ ಅಷ್ಟೆ, ಕ್ಷೋಭೆ ಅಷ್ಟೆ, ಅಕ್ಷೋಭೆ ಅಷ್ಟೆ ಸಮ ಸ್ವರೂಪವಾಗಿರುವ ಸತ್ ಸ್ವರೂಪ. ಅದು ಅವಿರೋಧವಾದುದರಿಂದ ಸತ್ತ ಹೆಣವಲ್ಲವೆ. ಈ ಸತ್ತ ಹೆಣದ ದೃಷ್ಟಿಯಲ್ಲಿ ವಿಭಾಗಕ್ಕಿಂಬಿಲ್ಲ. ವಿಕಲ್ಪಕ್ಕಿಂಬಿಲ್ಲ. ಇಲ್ಲಿ ಲೋಕದೃಷ್ಟಿಗೆ ಕಾಣುವ ಶರೀರಗಳು ಬದುಕಿದವೂ ಅಲ್ಲ, ಸತ್ತವೂ ಅಲ್ಲ, ಇದು ಅಲೌಕಿಕ ದೃಷ್ಟಿಯು ದಿವ್ಯದೃಷ್ಟಿಯುಳ್ಳದ್ದು. ಈ ದಿವ್ಯ ದೃಷ್ಟಿಯುಳ್ಳ ಸತ್ತ ಹೆಣ ಕೂಗಿದುದುಂಟು ಅದು ಕೂಗಿದಾಗ ನಿರಂತರವಾಗಿರುವ ಆತಂಕವಿಲ್ಲದ ಸತ್‌ಸ್ವರೂಪದ ಘನತ್ವ ತಿಳಿಯುವುದು. ಆಗ ಸತ್ತ ಹೆಣ ಕೂಗಿದುದುಂಟು ಎಂಬುದು ಗೊತ್ತಾಗುವದು ಬೈಚಿಟ್ಟ ಬಯಕೆ ಕರೆದುದುಂಟು, ಅದು ಭೋಗಿಸುವ ಪಕ್ವಕಾಲ ಬಂದಾಗ, ಅದು ತಾನಾಗಿಯೇ ಕೈಗೆ ಸೇರುವದರಿಂದ ಅದು ಬೈಚಿಟ್ಟ ನಿಧಾನ ಕರೆದಂತಾಗಲಿಲ್ಲವೆ. ಏಕೆಂದರೆ ಬೈಚಿಟ್ಟ ನಿಧಾನ ತನ್ನದಾದುದರಿಂದ ಅವನ ಕೈಗೆ ತಾನಾಗಿಯೇ ಹೇಗೆ ವಶವಾಯಿತೋ ಹಾಗೆ ಬಹುಜನ್ಮದೋಳ್ ಹರನೆ ಗಂಡನಾಗಲು ಅನಂತ ಕಾಲ ತಪಿಸುತ್ತಿದ್ದೆ, ಆ ತಪಸ್ಸಿನ ಪುಣ್ಯ ಅವನೊಡಗೂಡಬೇಕೆಂಬ ಅತಿ ತವಕವಾಗಿ ನಮ್ಮವರಿಗೆ ಕೇಳಿಕೊಂಡಾಗ ಅವರು ಶಶಿಧರನ ಹತ್ತಿರ ಕಳುಹಿಸಿದರು. ಗುರುವೆ ತೆತ್ತಿಗನಾಗಿ ಅಸಂಖ್ಯಾತರೆ ತಂದೆ ತಾಯಿಗಳಾಗಿ ಪ್ರಭುವೆಂಬ ನನ್ನ ಸಾದೃಶವಪ್ಪ ವರನ ತೋರಿದುದು ಬೈಚಿಟ್ಟ ನಿಧಾನವಲ್ಲವೆ, ಭಸ್ಮವನೆ ಹೂಸಿ ಕಂಕಣವನೆ ಕಟ್ಟಿ ಚೆನ್ನಮಲ್ಲಿಕಾರ್ಜುನ ತನಗೆ ನಾನಾಗಬೇಕೆಂದು ಕೈ ಹಿಡಿದಿದ್ದು ಬೈಚಿಟ್ಟ ಬಯಕೆ ತಾನೆ ಕರೆದಂತಾಗಲಿಲ್ಲವೆ.

ಹೆಪ್ಪಿಟ್ಟ ಹಾಲು ಸಿಹಿಯಾದುದುಂಟು. ಈ ಕಾಯ ಹೆಪ್ಪಿಟ್ಟ ಹಾಲು, ಮನವು ಹೆಪ್ಪಿಟ್ಟ ಹಾಲು, ಭಾವ ಹೆಪ್ಪಿಟ್ಟ ಹಾಲು, ಕೆಟ್ಟ ಅಂಗ, ಕೆಟ್ಟ ಮನ, ಕೆಟ್ಟ ಭಾವ ಅಂದರೆ ಅಂಗ ಅನಂಗ, ಮನ ಘನ ಮನ, ಭಾವ ನಿರ್ಭಾವ, ಇದು ಹೆಪ್ಪಿಟ್ಟ ಹಾಲು ಗಟ್ಟಿಗೊಂಡ ಘಟ್ಟಿ ನೋಡಾ.

ಈ ಗಟ್ಟಿಗೊಂಡ ಕೆನೆಮೊಸರು ಅಣ್ಣ ಕಿನ್ನರಯ್ಯ, ಅಣ್ಣ ಬಸವದೇವ, ನೀವು ಪ್ರಭುಗಳು, ನಿಮ್ಮ ಕರುಣೆಯೆಂಬ ಕಡಗೋಲಿನಿಂದ ಕಡೆಯಲು ಅದು ಬೆಣ್ಣೆಯಾಗಿ ತುಪ್ಪವಾಗಿ ಸಿಹಿಯಾದುದುಂಟು. ಅಂದರೆ ಅಖಂಡ ಸುಖಿಯಾದುದುಂಟು. ಇದು ನಿಶ್ಚಯಿಸಿ ನೋಡಿ ಚೆನ್ನಮಲ್ಲಿಕಾರ್ಜುನನಲ್ಲಿ. ಅಂದರೆ ನಿಮ್ಮ ಸ್ವಸ್ವರೂಪದಲ್ಲಿ ನಿಂತು ನೋಡಿರಿ ಎಂದು ಅಕ್ಕ ಹೇಳಿದ್ದಾಳೆ.

**36**

**ಇದು ಎನಗೆ ಆಶ್ಚರ್ಯ ಹೇಳವ್ವಾ, ಕಾಯವಿಲ್ಲದ ಸುಖವ**
**ಜೀವವಿಲ್ಲದ ಭವವ ಆ ಠಾವು ಹೇಳಾ ಗುಹೇಶ್ವರ ಲಿಂಗಕ್ಕೆ.**

**ತಾತ್ಪರ್ಯ :** ಸತ್ತ ಹೆಣ ಕೂಗಿದುದು ಎನಗೆ ಆಶ್ಚರ್ಯ. ಬಚ್ಚಿಟ್ಟ ಬಯಕೆ ಕರೆದುದು ಎನಗೆ ಆಶ್ಚರ್ಯ. ಹೆಪ್ಪಿಟ್ಟ ಹಾಲು ಗಟ್ಟಿಗೊಂಡು ಸಿಹಿಯಾದುದು ಎನಗೆ ಆಶ್ಚರ್ಯ. ಹೇಳವ್ವಾ, ಸತ್ತ ಹೆಣಕ್ಕೆ ಕಾಯವಿಲ್ಲ, ಸತ್ತ ಸುಖ ಕಾಯವಿಲ್ಲದ ಸುಖ. ವಾಕ್ಕಿನಿಂದ ಕಥನವಾದ ಸುಖ, ಸತ್ತ ಸುಖವಲ್ಲ, ಮನದ ನೆನಹಿನ ಸುಖವು ಸತ್ತ ಸುಖವಲ್ಲ, ಬುದ್ಧಿಯಿಂದ ಹೀಗೆಯೇ ಎಂದು ನಿರ್ಧಾರದಿಂದುಂಟಾದ ಸುಖವು ಸತ್ತ ಸುಖವಲ್ಲ, ಭಾವದಿಂದ ಭಾವಿಸುವ ಸುಖವು. ಸತ್ ಸುಖವಲ್ಲ, ಸುಖದ ಸುಖವಲ್ಲ.

ಅದು ಅಚಿಂತ್ಯ ಸುಖ. ಅನುಪಮ ಸುಖ, ಅಕಥನೀಯ ಸುಖ, ಗಣನೆಗೆ ಮೀರಿದ ಸುಖ. ಈ ಸುಖವೆ ಸವೆಯದ ಸುಖ. ನಿರಂತರ ಸುಖ, ಅಖಂಡ ಸುಖ, ನಿರಾಲಂಬ ಸುಖವೆ ಕಾಯವಿಲ್ಲದ ಸುಖ.

ಈ ಸುಖವೆ ಇದು ಆವುದರೊಳ್ ಕೂಡದ ಸುಖ. ತಾನೆ ತಾನಾದ ಸುಖ. ಇರುವುದೆಲ್ಲ ಇದ್ದಕ್ಕಿದ್ದಂತಿರುವ ನಿರಂತರ ತತ್ವ. ಅಲ್ಲಿ ಅಂತರ ಬಹಿರ ಎನ್ನುವದಕ್ಕಂಬಿಲ್ಲ. ಸೀಮೆ ಇಲ್ಲ, ಸಂಕೇತವಿಲ್ಲ, ಪವಿತ್ರವಿಲ್ಲ, ಅಪವಿತ್ರವಿಲ್ಲ, ಇಲ್ಲಿ ಸಾಕಾರ ನಿರಾಕಾರ ಹೇಗೆ ಸಾಧ್ಯ, ಗುಣ ಗುಣಿ ಹೇಗೆ ಸಾಧ್ಯ, ಇದ್ದುದೆಲ್ಲ ಅಬಾಧಿತ ತತ್ವ. ಅಪಾರ ತತ್ವ, ಇದ್ದಕ್ಕಿದ್ದಂತಿರುವ ನಿರಂತರವಾಗಿರುವ ನಿಜಾತ್ಮ. ಅಲ್ಲಿ ನಿತ್ಯಾನಿತ್ಯ ಹೇಗೆ ಸಾಧ್ಯ ? ರೂಪಾರೂಪ ಹೇಗೆ ಸಾಧ್ಯ ? ಅದು ನಿಃಕಲ ಘನ ಬೇರ್ಪಡಿಸಲಾಗದ ಘನ ಕಾಣಿಸಿಕೊಳ್ಳುವುದಲ್ಲ, ಕಾಣುವುದಲ್ಲ ಅದನ್ನು ನೀ ಕಂಡುದು ಹೇಗೆ ?

ಅಲ್ಲಿ ಪ್ರಮಾತೃ ಪ್ರಮಾಣ ಪ್ರಮೇಯವೆಂಬುದು ಮುನ್ನಿಲ್ಲ. ಮಾಯೆ ಇಲ್ಲ ಮಾಟವಿಲ್ಲ ಇದುವೆ ಜೀವವಿಲ್ಲದಭವವ ಆ ಠಾವು ಹೇಳಾ ಗುಹೇಶ್ವರ ಲಿಂಗಕ್ಕೆ. ಚಿದಾಕಾಶವಾದ ಚಿದ್ಘನವು ಸ್ವಮಹಿಮ್ನವು. ಅಲ್ಲಿ ಅಂಗಾಂಗ ಇದ್ದುದಲ್ಲ, ಅಳಿದುದಲ್ಲ, ಉಳಿದುದಲ್ಲ, ಸಂಗವುಳ್ಳದಲ್ಲ, ನಿಸ್ಸಂಗವುಳ್ಳದಲ್ಲ ಬಯಲು ಬಯಲೆ.

ನಿಸ್ಸೀಮ ಘನ ಇದ್ದುದು ಇದ್ದಕ್ಕಿದ್ದಂತೆ ಇದ್ದುದು. ಅದರೋಳ್ ನೀ ಒಳ ಹೊಕ್ಕು ಬೆರಿಸಿದ ಠಾವು ಆವುದು ಹೇಳಾ. ಅನಂತವಾದ ಘನದಲ್ಲಿ ಆದಿ ಆವುದು, ಮಧ್ಯ ಆವುದು, ಅಂತ್ಯ ಆವುದು ಖಂಡಿತವಿಲ್ಲದಖಂಡವು ಅಖಂಡವಾಗುವುದೆ ? ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತಿದ್ದ ನಿರಾತಂಕವಿಲ್ಲದ ಬೆಳಗಿನೋಳ್ ಊರ್ಧ್ವ ದೃಷ್ಟಿ ಆವುದು, ಅಧೋದೃಷ್ಟಿ ಆವುದು ? ಅಲ್ಲಿ ಬೆಳಕು ಆವುದು, ಕತ್ತಲೆ ಆವುದು ? ಕೇವಲ ಜ್ಞಾನ ಘನದೋಳ್ ಅಜ್ಞಾನವಾವುದು, ಜ್ಞಾನವಾವುದು? ಚಿನ್ಮಯದೋಳ್ ಜಡವಾವುದು, ಚೇತನವಾವುದು ? ನಿರಾಲಂಬದೋಳ್ ಆಲಂಬನವುಳ್ಳವಳಾಗಿ ನೀ ಒಳ ಹೊಕ್ಕು ಬೆರೆಸಿದ ಠಾವು ಆವುದು ಹೇಳಾ.

ಚಿನ್ಮಯವು ವಾಣಿಗೆ ಮೀರಿದ ಪದವು, ಚಿಂತನೆಗೆ ಮೀರಿದ ಪದವು ಇದು ಅಖಂಡೈಕರಸವು, ಸವೆಯದ ಸುಖವು ಸ್ವಸುಖವು. ಅದು ಅದ್ವಿತೀಯವಾದ ಅಕಳಂಕ ಗಗನಸದೃಶವು. ನಿಸ್ಸೀಮವಾದ ಪರಮಸತ್ಯವು. ಅಲ್ಲಿ ಪ್ರವೃತ್ತಿಯೂ ಇಲ್ಲ ನಿವೃತ್ತಿಯೂ ಇಲ್ಲ, ತಾನೇ ತಾನಾಗಿರುವ ಸ್ವಮಹಿಮ್ನವು ಆಕಾಶದಂತೆ ಸ್ಥಿತವು.

ಅಲ್ಲಿ ದ್ವೈತಕ್ಕಿಂಬಿಲ್ಲ, ಏಕ ಚಿದ್ಘನ ಪಾಷಾಣದಂತೆ ತಾನೆ ತನ್ನೋಳ್ ಸ್ಥಿತವಾದುದೆ ಪರಮ ಸತ್ಯವು. ಅದು ಜಡವೆಂದೆನಿಸದು, ಚೇತನವೆಂದೆನಿಸದು, ಸರ್ವಸಂಕಲ್ಪದಿಂದ ಅತೀತವು. ಅತೀತವೆಂಬುದು ಅಚೈತ್ಯ, ಚಿನ್ಮಾತ್ರವು ಸತ್ ಪದದೋಳ್ ಅಸತ್ ಪದದ ಸುಳುವಾದರೂ ಉಂಟೆ ? ಸಂಬಂಧವಾದರೂ ಉಂಟೆ ? ಚಿತ್ ಪದದೊಳ್ ಕೆಡುವ ಪ್ರಕಾಶದ ಸುಳುವಾದರೂ ಉಂಟೆ ? ಪೂರ್ಣದೋಳ್ ಅಪೂರ್ಣತ್ವಕ್ಕಾದರೂ ಇಂಬುಂಟೆ ? ಚಿದ್ಘನದೋಳ್ ಚಿಂತನರೂಪ ಚಿತ್ತಾ ಉಂಟೆ? ಸೂರ್ಯನೋಳ್ ಕತ್ತಲು ಉಂಟೆ ? ಕತ್ತಲೆ ಇಲ್ಲವಾದಲ್ಲಿ ರಾತ್ರಿ ಆವುದು? ಹಗಲು ಆವುದು ? ಸೂರ್ಯನನ್ನು ಯತಾರ್ಥ ತಿಳಿದಲ್ಲಿ ಅಲ್ಲಿ ಬರ ಹೋಗುವ ದಿನರಾತ್ರಿಗಳಿರಬಹುದೆ? ಅದ್ವಿತೀಯವಾದ ಘನ ಲಿಂಗ ಸುಖವೆ ಕಾಯವಿಲ್ಲದ ಸುಖ, ಜೀವವಿಲ್ಲದ ಭವವ ನೀ ಒಳ ಹೊಕ್ಕು ಅರಸಿದ ಠಾವು ಆವುದು ಹೇಳಾ ಗುಹೇಶ್ವರ ಲಿಂಗಕ್ಕೆ.

37

**ಮರದೊರಗಿ ಕನಸ ಕಂಡ ಹೇಳುವಲ್ಲಿ ಸತ್ತ ಹೆಣ ಎದ್ದಿತ್ತು.**
**ತನ್ನ ಋಣ ನಿಧಾನ ಎದ್ದು ಕರೆದಿತ್ತು.**
**ಹೆಪ್ಪಿಟ್ಟ ಹಾಲು ಘಟ್ಟಿತುಪ್ಪವಾಗಿ ಸಿಹಿಯಾಯಿತ್ತು.**
**ಇದಕ್ಕೆ ತಪ್ಪ ಸಾದಿಸಲೇಕೆ, ಚೆನ್ನಮಲ್ಲಿಕಾರ್ಜುನ ದೇವರ ದೇವನಣ್ಣಗಳಿರಾ.**

**ತಾತ್ಪರ್ಯ** : ತಾನು ನಿದ್ರೆಯಲ್ಲಿ ಮಲಗಿದ ಶರೀರಕ್ಕೆ ಅಲ್ಲಿ ತಾನು ಶರೀರವೆಂಬ ಜ್ಞಾನವಿದೆಯೆ ? ಲೋಕದ ಜ್ಞಾನವಾದರೂ ಇದೆಯೆ ? ಅಥವಾ ಅದಕ್ಕೆ ನಾನು ಜ್ಞಾನಿ ಅಜ್ಞಾನಿ ಎಂಬ ಅರಿವಾದರೂ ಇದೆಯಾ ? ಮಾನಾಪಮಾನಂಗಳ ಜ್ಞಾನವಾದರೂ ಇದೆಯೆ? ಸ್ತುತಿ ನಿಂದೆಗಳ ಶಬ್ದ ಜ್ಞಾನವಾದರೂ ಇದೆಯೆ ? ಅಲ್ಲಿ ಧರ್ಮಾಧರ್ಮಂಗಳ ಅರಿವಾದರೂ ಇದೆಯೆ? ಕೊನೆಗೆ ಅನ್ಯರು ಇವರು ನಾನು ಬೇರೆಂಬ ಭೇದ ಜ್ಞಾನವಾದರೂ ಅದಕ್ಕೆ ಇದೆಯೆ? ಆವಾವ ಭಾವಕ್ಕಿಂಬಿಲ್ಲದಿರುವಾಗ ಇದು ಸತ್ತ ಹೆಣವಲ್ಲವೆ ? ಇಂಥ ಸತ್ತ ಹೆಣದಂತೆ ಇರುವ ಶರೀರದಲ್ಲಿ ಕನಸು ಕಂಡುದು ನಿಜವೋ, ಅನಿಜವೋ ? ಅನಿಜವೆ ಆಗಿದ್ದರೆ ಕನಸಿನಲ್ಲಿ ಕಂಡ ಅನುಭವ ಹೇಳುತ್ತಿದ್ದಿಲ್ಲ, ಹೇಳುವದೆಂದಲ್ಲಿ ನಿದ್ರೆಯಲ್ಲಿ ಕನಸು ಕಂಡುದು ನಿಜವೆಂಬುದು ಸಿದ್ಧವಾಗುತ್ತದೆ. ಅದಕ್ಕಾಗಿ ಮರದೊರಗಿ ಕನಸ ಕಂಡು ಹೇಳುವಲ್ಲಿ ಸತ್ತ ಹೆಣ ಎದ್ದಿತ್ತು. ಸತ್ ಸುಖದಲ್ಲಿ ಮನ ಮಗ್ನವಾದ ಸತ್ ಶರೀರದ ದೃಷ್ಠಿಯಲ್ಲಿ ಅಲ್ಲಿ ವಿಷಯವಿಲ್ಲ, ವಿಷಯಿ ಇಲ್ಲ, ಇಂದ್ರೀಯಂಗಳಿಲ್ಲ, ವಿಷಮ ದೃಷ್ಟಿಗಿಂಬಿಲ್ಲ , ವಾಸನೆಯಿಲ್ಲ , ವ್ಯಸನ ಇಲ್ಲ ಸುಖವಿಲ್ಲ , ದುಃಖವಿಲ್ಲ , ಗರ್ವವಿಲ್ಲ , ನಿಗರ್ವವಿಲ್ಲ , ಆಶೆಯಿಲ್ಲ , ನಿರಾಶೆಯಿಲ್ಲ , ಪ್ರಿಯವಾದುದಿಲ್ಲ , ಅಪ್ರಿಯವಾದುದಿಲ್ಲ , ಇಚ್ಛೆಯಿಲ್ಲ, ಅನಿಚ್ಛೆಯಿಲ್ಲ, ವಿವೇಕವಿಲ್ಲ, ಅವಿವೇಕವಿಲ್ಲ, ನಾನೆಂಬುದಿಲ್ಲ, ನನ್ನದೆಂಬುದಿಲ್ಲ, ಅಲ್ಲಿ ಹೆಣ್ಣು ಗಂಡೆಂಬ ಜಾತಿ ಕುಲ ವಿಚಾರವಿಲ್ಲದೆ ನಿರಾಲಂಬ ಸುಖದಿಂದುಕ್ತವಾದ ಶರೀರವಿದು ಸತ್ತ ಹೆಣವಲ್ಲವೆ.

ಇಲ್ಲಿಯ ಕನಸು ಕಂಡುದು ನಿಜವೋ ಅಥವಾ ಅನಿಜವೋ ? ಅನಿಜವೆ ಆಗಿದ್ದರೆ ಕನಸಿನಲ್ಲಿ ಕಂಡ ಅನುಭವ ಹೇಳುತ್ತಿದ್ದಿಲ್ಲ. ಹೇಳುವದೆಂದಲ್ಲಿ ಸತ್ ಸುಖದಲ್ಲಿ ಮನ ಮಗ್ನವಾದರೂ ಕನಸು ಕಂಡುದು ನಿಜವೆಂದು ಸಿದ್ಧವಾಗುತ್ತದೆ. ಅಂದರೆ ಸವೆಯದ ಸುಖದ ಸುಖಿಯಾದರೂ ಕನಸು ಕಂಡು ಹೇಳುವಲ್ಲಿ ಸತ್ತ ಹೆಣ ಎದ್ದಿತ್ತು. ಒಂದು ಅಜ್ಞಾನಯುಕ್ತ ಕನಸಾದರೆ ಮತ್ತೊಂದು ಜ್ಞಾನಯುಕ್ತ ಕನಸು. ಇದು ಜ್ಞಾನಯುಕ್ತ ಕನಸಾದುದರಿಂದ ಸಮಸ್ತ ಜ್ಞಾನಘನವಂತರ ಒಂದೇ ಮತವಾದುದರಿಂದ ಅರುವಿನ ಕನಸು. ಚಿನ್ಮಯ ಕನಸು, ಚಿದ್ಘನ ಕನಸು, ಚಿದಾಕಾಶ ಕನಸು, ಸಚ್ಚಿದಾನಂದ ಕನಸು, ಇದು ಸಮ್ಯಕ ದರ್ಶಿಗಳ ಕನಸು. ಸಮಭಾವಿಗಳ ಕನಸು, ವ್ಯವಹಾರದೊಳಗಾದರೂ ಸಮರೂಪಿಗಳು, ವಿಸ್ತಾರ ರೂಪ ಜಗಜ್ಜಾಲವೂ ಅವರ ದಿವ್ಯ ದೃಷ್ಟಿ ಯಲ್ಲಿ ಚಿನ್ಮಯ ಸತ್ತೆಯು. ನಿರ್ವಾಣ ಸುಖದಲ್ಲಿದ್ದವರ ಘನವನೇನೆಂಬೆ.

ಅವರ ಹೃದಯ ಘನಲಿಂಗದ ನಿಜ ನಿವಾಸ, ವ್ಯವಹಾರವು ಲಿಂಗ ಘನದ ಘನಸುಖ ವುಳ್ಳದ್ದಾಗಿರುವದರಿಂದ ಕೊಡುವುದು ಲಿಂಗ ಘನ, ಕೊಳ್ಳುವುದು ಲಿಂಗ ಘನ, ಮಾಡುವವನು ಲಿಂಗ ಘನ, ಶತೃ ಮಿತ್ರರು ಲಿಂಗ ಘನವು.

ಸರ್ವವು ಮಹಾ ಲಿಂಗ ರೂಪಾಗಿ ಭಾಸಿಸುವದರಿಂದ ಮಹಾಲಿಂಗದೊಳ್ ಮಗ್ನವಾದ

ಘನವು ಘನಕ್ಕೆ ಘನ ನೋಡಾ. ಹೃದಯವು ಮಹಾಲಿಂಗ ಸುಖವುಳ್ಳದ್ದಾದುದರಿಂದ ಹೃದಯವು ಮಹಾಲಿಂಗ ನೋಡಾ.

ಅಲ್ಲಿ ಫಲದಾಶೆ ನಿರಸನವಾದ್ದರಿಂದ ವ್ಯವಹಾರ ಲಿಂಗ ಘನ ನೋಡಾ. ಪ್ರಿಯಾ ಪ್ರಿಯತ್ವ ದರ್ಶನದಿಂದ ಇಂದ್ರಿಯಂಗಳು ದೂರವಾಗಿರುವುದರಿಂದ ಇಂದ್ರಿಯಂಗಳು ಅತೀಂದ್ರಿಯಂಗಳು ಇವು ಲಿಂಗಘನ ನೋಡಾ.

ತನ್ನೊಳ್ ನಾನತ್ವವಿಲ್ಲವಾದ್ದರಿಂದ ಶತೃ ಮಿತ್ರರು ಲಿಂಗಘನ ನೋಡಾ. ಅದಕ್ಕಾಗಿ ಸತ್ತ ಹೆಣದ ಕನಸಾದರೂ ಸತ್ ಸ್ವರೂಪದ ಸತ್ತಾ ಅಲ್ಲದೆ ಅನ್ಯವಲ್ಲವು.

ಬೈಚಿಟ್ಟ ಬಯಕೆ ಕರೆಯಬೇಕಾದರೆ ತನ್ನ ಋಣ ನಿಧಾನವಾದ್ದರಿಂದ ಅದು ಕರೆದಿತ್ತಲ್ಲವೆ, ಹಸ್ತಗತವಾಯಿತ್ತಲ್ಲವೆ. ಅರಸಿದರಿಲ್ಲ , ಹರಸಿದರಿಲ್ಲ , ದೀರ್ಘ ಪ್ರಯತ್ನ ಮಾಡಿದರಿಲ್ಲ , ಬಳಲಿದರಿಲ್ಲ , ಬಯಸಿ ನೆಲ ಅಗಿದರೂ ಇಲ್ಲ, ನಾನಾಕಾರ್ಯ ಮಾಡಿದರೂ ಇಲ್ಲ . ಬೈಚಿಟ್ಟ ಬಯಕೆ ತಾನಾಗಿಯೆ ಕರೆಯಬೇಕಾದರೆ ಅದು ತನ್ನ ಋಣ ನಿಧಾನವಾದ್ದರಿಂದದು ಕೈಗೆ ಸೇರುವದೆಂದರೆ ಬೈಚಿಟ್ಟ ಬಯಕೆ ಎದ್ದು ಕರೆದಂತಾಗಲಿಲ್ಲವೆ. ಬಸವಣ್ಣನ ಪಾದ, ಚೆನ್ನಬಸವಣ್ಣನ ಪಾದ, ಇದಲ್ಲದೆ ಅಸಂಖ್ಯಾತ ಶರಣರ ಪಾದ ಹಾಗೂ ನಿಮ್ಮ ಶ್ರೀಚರಣ ಇದುವೆ ಬೈಚಿಟ್ಟ ಬಯಕೆ. ಇದಲ್ಲದೆ ಮಡಿವಾಳ ಮಾಚಿ ತಂದೆ, ಸಿದ್ಧರಾಮ ಶಿವಯೋಗಿ ತಂದೆ ಮತ್ತು ಶರಣೆಯರು ಇವರುಗಳು ಬೈಚಿಟ್ಟ ಬಯಕೆ ಅಲ್ಲವೆ. ಈ ಸುಜ್ಞಾನ ನಿಧಿ ಅಖಂಡ ಜ್ಞಾನಾಮೃತ ನಿಧಿ, ಕಲ್ಯಾಣ ರೂಪದಿಂದ ಪ್ರಕಾಶಿಸಿ ತಾನೆ ಕರೆದುದು . ಇದು ನನ್ನ ಋಣ ನಿಧಾನವಾದ್ದರಿಂದ ಎದ್ದು ಕರೆದಿತ್ತು ನೋಡಾ.

ಈ ಜ್ಞಾನಾಮೃತ ಘನ ಬೈಚಿಟ್ಟ ಬಯಕೆ. ಅರಸಿದರೂ ಕಾಣುವುದಲ್ಲ . ತೊಳಲಿ ಬಳಲಿ ಬೆಂದು ಬೆಂಡಾದರೂ ಕಾಣುವದಲ್ಲ , ಇದು ಅಹಕಾಲಕ್ಕೆ ಸಾಧ್ಯವಾಗುದು, ಶಿವನೊಲಿದಲ್ಲದೆ ಕೈಗೂಡದು ಚೆನ್ನಮಲ್ಲಿಕಾರ್ಜುನ ನೆನಗೊಲಿದನಾದುದರಿಂದ ಈ ಬೈಚಿಟ್ಟ ಬಯಕೆ ರೂಪಿ ಕಲ್ಯಾಣದ ಕೈವಲ್ಯ ಋಣ ನಿಧಾನ ಎದ್ದು ಕರೆದಿತ್ತು . ಹೆಪ್ಪಿಟ್ಟ ಹಾಲು ಘಟ್ಟಿ ತುಪ್ಪವಾಗಿ ಸಿಹಿಯಾಗಿತ್ತು. ಇದು ನಿಜವು ಹೇಗೆಂದರೆ ನನ್ನ ಕಾಯ ಹೆಪ್ಪಿಟ್ಟ ಹಾಲು. ನನ್ನ ಇಂದ್ರಿಯಂಗಳು ಹೆಪ್ಪಿಟ್ಟ ಹಾಲು. ನನ್ನ ಭಾವ ಹೆಪ್ಪಿಟ್ಟ ಹಾಲು ಅದು ಕಿನ್ನರಯ್ಯನ ದರ್ಶನದಿಂದ ಘಟ್ಟಿಯಾಯಿತ್ತು. ಇದು ಘಟ್ಟಿಯಾದುದು ನೋಡಿ, ನೀವು ನಿಮ್ಮ ದಿವ್ಯ ಜ್ಞಾನ ಘನವೆಂಬ ಕಡಗೋಲಿನಿಂದ ಕಡೆಯಲು ಅದು ಬೆಣ್ಣೆಯಾಗಿ ಘಟ್ಟಿತುಪ್ಪವಾಗಿ ಸಿಹಿಯಾಯಿತ್ತು ಅಂದರೆ ಸುಖರೂಪವಾಗಿತ್ತು. ಇದಕ್ಕೆ ತಪ್ಪಸಾಧಿಸಲೇಕೆ ? ಅರಿಯದವರು ಇದಕ್ಕೆ ತಪ್ಪು ಸಾಧಿಸಲಿ ಅರಿತವರಾದ ನೀವು ಚೆನ್ನಮಲ್ಲಿಕಾರ್ಜುನ ದೇವರ ದೇವಣ್ಣಗಳು ನೀವು ಇದಕ್ಕೆ ತಪ್ಪು ಸಾಧಿಸುವದೆ ಪ್ರಭುವೆ.

**38**

**ಇದು ಲೇಸಾಯಿತ್ತು ತುಂಬಿದ ಲೆಖ್ಖಕ್ಕೆ ಮತ್ತೊಂದೆಂದು**
**ಕಡೆಗಾಣಿಸುವಂತೆ, ಸ್ಥಾಣುವಿನ ಮರೆಯ ಚೋರನಂತೆ,**
**ಅಂಬುಧಿಯ ಕೊಂಬಿನಲ್ಲಿದ್ದ ವಿಹಂಗಮನಂತೆ.**
**ಎಲ್ಲಿ ಬಂದಡೂ ಗುಹೇಶ್ವರನೆಂಬ ಭಾವ ಒಂದಾಗಿತ್ತು.**

**ತಾತ್ಪರ್ಯ :** ಇದು ಒಪ್ಪಿಗೆಯಾದುದು, ಸಮ್ಮತವಾದುದು, ಶುಭವಾದುದು. ಇದು ತುಂಬಿದ

ಲೆಖ್ಖ. ಆವುದು ತುಂಬಿ ತುಳುಕದಿರುವುದೋ ಅದುವೆ ತುಂಬಿದ ಲೆಖ್ಖ. ಇದು ಗಗನ ಸದೃಶವಾದ ಲೆಖ್ಖ. ಗಗನವು ಹೇಗೆ ಸಕಲ ಲೋಕದೋಳ್ ತುಂಬಿ ತುಳಕದಂತಿರುವದು. ಇದು ಒಂದೆ ಅಲ್ಲವೆ, ಗಗನದಂಥ ಬೈಲು ಇನ್ನೊಂದು ಇದೆಯೆ ? ಘಟದಲ್ಲಿ ಕಂಡರೂ ಅದುವೆ, ಮಠದಲ್ಲಿ ಕಂಡರೂ ಅದುವೆ, ಜಲದಲ್ಲಿ ಕಂಡರೂ ಅದುವೆ, ಹಳ್ಳಿ ನಗರಗಳಲ್ಲಿ ಕಂಡರೂ ಅದುವೆ, ದೇಶ ವಿದೇಶಗಳಲ್ಲಿ ಕಂಡರೂ ಅದುವೆ, ಅದರ ಹೊರತು ಅನ್ಯವಾವುದು ಇಲ್ಲ . ಇದಕ್ಕೆ ಘಟಾಕಾಶ, ಮಠಾಕಾಶ, ಮೇಘಾಕಾಶ, ಜಲಾಕಾಶ, ಮಹಾಕಾಶವೆಂದರೂ ಅದುವೆ, ಅದು ಕೇವಲ ಆಕಾಶವತ್ತ ಆಕಾಶವಲ್ಲದೆ ಅನ್ಯ ಹೇಗಲ್ಲವೋ ಹಾಗೆ ತುಂಬಿದುದು ಬೈಲು, ಬೈಲೆಂಬುದು ಅದು ಖಂಡವಾಗದ್ದರಿಂದ ನಿಸ್ಸೀಮವಾದುದು. ಬಯಲು ನಿಸ್ಸೀಮವಾದುದರಿಂದ ಅದು ಒಂದೆ ಎಂದು ಹೇಳಿದಂತೆ ! ಇದರ ಉತ್ತರ ಸರಿಯಾಗಿ ತೆಗೆದಂತೆ. ಹಾಗೆ ತುಂಬಿದ ಲೆಖ್ಖವೆಂದರೆ, ಆವುದು ಒಳ ಹೊರಗೆನ್ನದೆ ತುಂಬಿರುವುದೋ ಅದರ ಲೆಖ್ಖ ಪೂರ್ಣದ ಲೆಖ್ಖ, ಅಖಂಡ ಲೆಖ್ಖ, ಅದ್ವಿತೀಯ ಲೆಖ್ಖ, ಅಗಣಿತ ಲೆಖ್ಖ, ನಾಮ ಅನಾಮ ಒಂದಾದ ಲೆಖ್ಖ, ರೂಪಾರೂಪ ಒಂದಾದ ಲೆಖ್ಖ, ಎಲ್ಲಿ ನೋಡಿದಡಲ್ಲಿ ನಿರಂತರವಾಗಿರುವ ನಿರಾತಂಕವಾದ ಸರ್ವಮಂಗಳ ಮಯ ಸತ್ಯವನ್ನು ಕಾಣುವ ಲೆಖ್ಖ.

ಮಾಯ, ಅವಿದ್ಯೆ ಎಂಬ ವಿಭಾಗಕ್ಕೆಡೆಗೊಡದ ಲೆಖ್ಖ. ಸಾವಯವ ನಿರವಯ ಒಂದಾದ ಲೆಖ್ಖ, ಅಂಗಕ್ಕೂ ಆತ್ಮನಿಗೂ ಭೇದ ಮಾಡದ ಲೆಖ್ಖ, ನಿತ್ಯಾನಿತ್ಯ ಕಾಣದ ಲೆಖ್ಖ, ಭಾವ ನಿರ್ಭಾವ ಒಂದಾದ ಲೆಖ್ಖವೆ ತುಂಬಿದ ಲೆಖ್ಖ. ಪೂರ್ಣದ ಲೆಖ್ಖವಾದುದರಿಂದ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದುಚ್ಯತೆ ಅಂದರೆ ಆದಿಯು ಪೂರ್ಣವು ಮಧ್ಯವು ಪೂರ್ಣವು, ಅಂತ್ಯವು ಪೂರ್ಣವು. ಅದು ಪೂರ್ಣ, ಇದು ಪೂರ್ಣ, ಉಳಿದುದು ಪೂರ್ಣವು. ಪೂರ್ಣವು ಪೂರ್ಣವಾಗಿದೆ ಎಂದು ಉತ್ತರ ಬರುತ್ತದೆ.

ನಿಸ್ಸೀಮ ಲೆಖ್ಖ , ಸೀಮೆ ಆವುದಕ್ಕಿಲ್ಲವೋ ಅದು ಒಂದೇ ಒಂದು. ನಿಸ್ಸೀಮೆ ಸೀಮೆಯುಳ್ಳದ್ದಾಗಿದ್ದರಿಂದ ಸಕಲ ನಿಷ್ಕಲವನ್ನು ನಿಸ್ಸೀಮದ ಘನ ತತ್ವಸ್ವರೂಪವೆಂದು ಸಿದ್ಧಮಾಡುವುದೆ ನಿಸ್ಸೀಮದ ಉತ್ತರವ ಕಡೆಗಾಣಿಸಿದಂತೆ ಅನಂತನ ಲೆಖ್ಖ, ಅನಂತನಿಗೆ ಆದಿ ಮಧ್ಯ ಅಂತ್ಯವ ಕಲ್ಪಿಸದಿಹುದೆ ಅನಂತನ ಲೆಖ್ಖ. ಅನಂತನ ಲೆಖ್ಖದಲ್ಲಿ ಆದಿಯು ಅಂದರೆ ಸೃಷ್ಟಿಗಿಂತ ಪೂರ್ವದಲ್ಲಿ ಅದು, ಸೃಷ್ಟಿಯು ಅದುವೆ, ಸೃಷ್ಟಿಯು ಅಂತ್ಯದಲ್ಲಿ ಅದುವೆ ಎಂದು ಸಿದ್ಧ ಮಾಡುವದೆ ಅನಂತನ ಉತ್ತರವ ಕಡೆಗಾಣಿಸಿದಂತೆ !

ಅದ್ವಿತೀಯನ ಲೆಖ್ಖ ಎರಡನ್ನೂ ಕಾಣದಿಹುದೆ ಅದ್ವಿತೀಯ ಲೆಖ್ಖ , ಅಂಗ ಲಿಂಗವನ್ನು ಕಾಣದಿಹುದೆ ಅದ್ವಿತೀಯ ಲೆಖ್ಖ , ಅಕ್ಷರವನ್ನು  ಕಾಣದಿಹುದೆ ಅದ್ವಿತೀಯ ಲೆಖ್ಖ . ಅಂದರೆ ಅದ್ವಿತೀಯನು ಅಂಗ ಲಿಂಗವೆಂದು ದ್ವಿತೀಯ ನಾಮ ಪಡೆದರೂ ಅಂಗನೂ ಅದ್ವಿತೀಯನು, ಲಿಂಗನು ಅದ್ವಿತೀಯನು ಎಂದು ಸಿದ್ಧ ಮಾಡುವುದೆ ಅದ್ವಿತೀ ಯನ ಉತ್ತರ ಕಡೆಗಾಣಿಸಿದಂತೆ. ಅಗಣಿತ ಲೆಖ್ಖ ಗಣಿತಕ್ಕೆ ಮೀರಿದುದೆ ಅಗಣಿತ ಲೆಖ್ಖ, ಗುಣಂಗಳ ಗಣಿತಕ್ಕೆ ಮೀರಿರುವುದೆ ಅಗಣಿತ. ಅಗಣಿತನ ಗಣಿತದಲ್ಲಿ ಸತ್ಯ ಅಸತ್ಯವ ಕಾಣದಿಹುದ ಅಗಣಿತನ ಲೆಖ್ಖ. ಮುಕ್ತ ಬದ್ಧರ ಕಾಣದಿಹುದೆ ಅಗಣಿತನ ಲೆಖ್ಖ ಏನೊಂದುಸರಲು ಎಡೆಗೊಡದಿಹುದೆ ಅಗಣಿತನ ಉತ್ತರವ ಕಡೆಗಾಣಿಸಿದಂತೆ.

ರೂಪ ಅರೂಪ, ನಾಮ ಅನಾಮ, ಅಂಗ ಲಿಂಗ, ಸಾವಯವ ನಿರವಯ ವಿಷಯ ನಿರ್ವಿಷಯ ಶಬ್ದ ಅಶಬ್ದ, ಸರ್ಶ ಅಸ್ಪರ್ಶ, ಗಂಧ ಅಗಂಧ ಎಲ್ಲಿ ನೋಡಿರ್ದಡಲ್ಲಿ ಏಕ ಮೇವ ಅದ್ವಿತೀ ಯವಾದ ಘನಲಿಂಗ ಸಿದ್ಧ ಮಾಡುವುದೆ ತುಂಬಿದ ಲೆಖ್ಖಕ್ಕೆ ಮತ್ತೊಂದೆಂದು ಕಡೆಗಾಣಿಸುವಂತೆ.

ಸ್ಥಾಣುವಿನ ಮರೆಯ ಚೋರನಂತೆ ಇದ್ದೆಯಲ್ಲ ಅಕ್ಕ . ಮೋಟ ಮರದಾಶ್ರಯ ಮಾಡಿಕೊಂಡ ಕಳ್ಳಿಯಂತೆ ಇದ್ದೆಯಲ್ಲ ಅಕ್ಕ . ಚೆನ್ನಮಲ್ಲಿಕಾರ್ಜುನನೆಂಬ ಘನಲಿಂಗಾಶ್ರಯ ಮಾಡಿಕೊಂಡ ಕಳ್ಳಿಯಂತೆ ಇದ್ದೆಯಲ್ಲ . ಮೋಟಮರದೊಳ್ ಕಳ್ಳನಿದ್ದುದು ನಿಜವೆ ? ಕಳ್ಳನೆಂಬುದು ಮೋಟ ಮರವಲ್ಲದೆ ಅನ್ಯ ವಲ್ಲ ಹೇಗೋ ಹಾಗೆ ಲಿಂಗಪತಿ ಚೆನ್ನಮಲ್ಲಿಕಾರ್ಜುನನೆಂಬ ಮೋಟಮರದೊಳ್ ಅಂಗಸತಿರೂಪಿ ಕಳ್ಳಿ . ನೀನು ಇದ್ದುದು ನಿಜವೆ ? ಹೇಳಲು ಅಷ್ಟೆಸತಿ ಅಲ್ಲದೆ, ನಿಜವಾಗಿ ನಿನ್ನರೂಪ ನಿರೂಪ. ನಿನ್ನನಾಮ ನಿರ್ನಾಮ, ಕಥನಕ್ಕೆ ಮಾತ್ರ ಸತಿಪತಿಗಳಾಗಿಹೆನೆಂಬ ನೆಪವ ಹೇಳುವಿ. ನಿನ್ನರಿವು ಮಾತ್ರ ಅಕಥನೀಯವಾಗಿದೆ. ಅದಕ್ಕಾಗಿ ಅಕ್ಕನು ಅನುಪಮಳಾಗಿದ್ದರೂ ಅಖಂಡ ಜ್ಞಾನಯಾನದಲ್ಲಿ ಹಾರಾ ಡುತ್ತಿದ್ದಾಳೆ. ಇದು ಕಾರಣ ಅಕ್ಕನಿಗೆ ಎಲ್ಲಿನೋಡಿದರೂ ಘನ ಲಿಂಗವು, ಭಾವ ಭರಿತವಾಗಿಪ್ಪುದು ನೋಡಾ.

ಅಕ್ಕನ ಭಾವ, ಇದು ತುಂಬಿ ತುಳುಕದಂತಿಪ್ಪ ಘನ ಭಾವ ನೋಡಾ . ಇದು ಒಲಿದುದರಿಂದ ನಿಸ್ಸೀಮ ಸುಖದವಳಾಗಿಹಳು ನೋಡಾ. ಸಮುದ್ರದಲ್ಲಿಸಂಚರಿಸುವ ಹಡಗದ ಕೊಂಬೆಯ ಮೇಲಣ ಪಕ್ಷಿಗೆ ಎಲ್ಲಿ ನೋಡಿದಡಲ್ಲಿ ನೀರು. ಹಡಗದ ಮೇಲೆ ಕೂತು ನೋಡಿದರೂ ನೀರೆ ಕಾಣಿಸುತ್ತದೆ. ಹಡಗವನ್ನು ಬಿಟ್ಟು ಆಕಾಶದೊಳ್ ಹಾರಾಡಿ ನೋಡಿದರೂ ನೀರೆ ಕಾಣಿಸಿದಂತೆ.

ಈ ಮಹಾಶಕ್ತಿಯ ಜ್ಞಾನದೃಷ್ಟಿಗೂ ಘನಲಿಂಗವೆ, ಭಾವದೃಷ್ಟಿಗೂ ಘನಲಿಂಗವೇ, ನೆನಹಿನಲ್ಲಿಯೂ ಘನಲಿಂಗವೆ, ರೂಪ ಘನಲಿಂಗವೆ, ಅರೂಪ ಘನಲಿಂಗವೆ, ನಾಮ ಘನಲಿಂಗ, ಅನಾಮ ಘನಲಿಂಗವೆ. ಅಕ್ಕ ತನ್ನ ತಾನರಿತು ತಾನೆ ತಾನಾದ ಯೋಗೀಶ್ವರಳು, ಲಿಂಗಾಂಗ ಸಮರಸ ಸುಖದ ಯೋಗೀಶ್ವರಳು. ಈ ಘನ ಶಕ್ತಿಯ ಘನವನೇನೆಂಬೆ; ಅನುಪಮಳಾಗಿ ಉಪಮೆಗೊಳಪಟ್ಟವಳಂತಾಗಿ ನಟಿಸುವಳು. ಶರಣ ರೂಪಿ ಅಂಗವಾಗಿ ಲಿಂಗರೂಪಿ ಪತಿಯ ನೋಡುವಳು. ಆಲಂಗಿಸುವಳು, ಬೆರೆಯುವಳು. ಬೆರೆತು ಬೇರಿಲ್ಲದಿಪ್ಪಗಮ್ಯ ಅಪ್ರಮಾಣಳಾಗಿ ತನ್ನ ಸ್ವಮಹಿಮ್ನದೊಳ್ ತಾನೆ ತಾನಾಗಿಪ್ಪ ಅಚಿಂತ್ಯಳು ಎಂದು ಕೊಂಡಾಡಿದ್ದಾನೆ.

**39**

**ಚಂದನವ ಕಡಿದು ಕೊರೆದು ತೆಯ್ದಡೆ ನೊಂದೆನೆಂದು ಕಂಪ ಬಿಟ್ಟೀತೆ ?**
**ತಂದು ಸುವರ್ಣವ ಕಡಿದೊರೆದಡೆ ಬೆಂದ ಕಳಂಕ ಹಿಡಿಯಿತ್ತೆ ? ಸಂದು ಸಂದನು**
**ಕಡಿದ ಕಬ್ಬನು ತಂದು ಗಾಣದಲ್ಲಿಕ್ಕಿ ಅರದಡೆ ಬೆಂದ**
**ಪಾಕದೊಳ ಸಕ್ಕರೆಯಾಗಿ ನೊಂದೆನೆಂದು ಬಿಟ್ಟಿತ್ತೆ.**
**ನಾಹಿಂದೆ ಮಾಡಿದ ಹೀನಂಗಳೆಲ್ಲತಂದು ಮುಂದಿಳುಹಲು**
**ನಿಮಗೆ ಹಾನಿ ಎನ್ನ ತಂದೆ.**
**ಚೆನ್ನಮಲ್ಲಿಕಾರ್ಜುನ ದೇವಯ್ಯ ಕೊಂದರೆ ಶರಣೆಂಬುದ ಮಾಣೆ.**

**ತಾತ್ಪರ್ಯ :** ಚಂದನವೆಂಬುದು ಸುಗಂಧ, ಅದರ ಇರುವಿಕೆಯೆ ಸುಗಂಧ, ಅದಕ್ಕಾಗಿ ತನ್ನನ್ನು ಕಡಿದರೂ ತನ್ನ ಇರುವಿಕೆಯಿಂದದು ಬದಲಾಗುವುದಿಲ್ಲ. ಕೊರೆದರೂ ತನ್ನ ಸ್ವಭಾವ ಬಿಡುವುದಿಲ್ಲ. ತೆಯ್ದರೂ ತನ್ನ ಸುಗಂಧವ ಕೊಡುವುದಲ್ಲದೆ ಅದು ನೊಂದಿಸಿಹರೆಂದು ಕಡಿದವನಿಗೂ, ಕೊರೆದವನಿಗೂ, ತೆಯ್ದವನಿಗೂ, ಸುಗಂಧ ಕೊಡುವುದು ಬಿಟ್ಟೀತೆ ? ಪ್ರಭುವೆ, ನಿಮ್ಮ ಲಿಂಗಾಂಗ

ಸಮರಸ ಸುವಾಸನೆ ವಿಶುದ್ಧವಾಸನೆ ಸಕಲದೋಳ್ ಭರಿತವಾದ ಘನಲಿಂಗ ವಾಸನೆ, ಸಕಲ ತತ್ವಂಗಳ ಸತ್ತಾ ವಾಸನೆ, ನಿರ್ವಿಕಾರ ವಾಸನೆ, ನಿರುಪಮ ವಾಸನೆ, ಅದ್ವಿತೀಯ ವಾಸನೆ ಚೆನ್ನಮಲ್ಲಿಕಾರ್ಜುನ ನಿರ್ಭಯ ವಾಸನೆ, ಈ ವಾಸನೆಗೆ ಅದಾವ ಭೇದ ದೃಷ್ಟಿ ! ಚಂದನವ ಕಡಿಯಬಹುದು, ಕೊರೆಯಬಹುದು, ತೇಯಬಹುದು. ಸುಗಂಧವ ಕಡಿಯಬಹುದೆ ? ಕೊರೆಯಬಹುದೆ ? ತೇಯಬಹುದೆ? ಅದರಂತೆ ಈ ಶರೀರ ಕಡಿಯಬಹುದು, ಕೊರೆಯಬಹುದು, ಬೇಕಾದ ಹಾಗೆ ಪರೀಕ್ಷಿಸಬಹುದು. ನಿಮ್ಮ ಲಿಂಗಾಂಗ ಸಮರಸ ಜ್ಞಾನ ವಾಸನೆ, ಸುಖರೂಪಿ ಸುಖದ ವಾಸನೆ, ಸದ್ವಾಸನೆ, ನಿರ್ವಿಕಾರ ವಾಸನೆ, ನಿರ್ಮಾಯನ ವಾಸನೆ, ನಿರಾಲಂಬ ವಾಸನೆ, ಇದು ಅಚಿಂತ್ಯ ವಾಸನೆ, ಅದ್ವಿತೀಯ ವಾಸನೆ ಘನ ವಾಸನೆ, ಇಲ್ಲಿ ಕಡಿದ ಶರೀರವಿಲ್ಲ , ಕಡಿಸಿಕೊಂಡ ಶರೀರವಿಲ್ಲ, ಪರೀಕ್ಷಾಗಾರರಿಲ್ಲ.

ಏಕೆಂದರೆ ನಿಮ್ಮ ಕರುಣಾಮೃತ ರೂಪಿ, ಅಂಚಿತ್ಯ ರೂಪಿ, ಘನಲಿಂಗದ ಘನ ಸುಖದ ಸದ್ವಾಸನೆ, ನನಗೆ ಕರಿಗೊಂಡಿರುವುದರಿಂದ ನನಗೆ ಪ್ರಿಯವಿಲ್ಲ , ಅಪ್ರಿಯವಿಲ್ಲ , ಸ್ತುತಿಯಿಲ್ಲ , ನಿಂದೆಯಿಲ್ಲ . ಇದ್ದುದೊಂದೆ ಚಿನ್ಮಯ ಲಿಂಗವೆಂಬ ಅಖಂಡ ಭಾವ ಕರಿಗೊಂಡಿರುವುದರಿಂದ ಅಚಿಂತ್ಯವಾದ ಅದ್ವಿತೀಯವಾದ ಸದ್ವಾಸನೆಯ ಕಂಪ ಬಿಡದು ಸುವರ್ಣ ತಂದು ಕಡಿದರೂ, ಒರೆಗಲ್ಲಿಗೆ ಹಚ್ಚಿ ತಿಕ್ಕಿದರೂ, ಬೆಂಕಿಯಲ್ಲಿ ಹಾಕಿ ಸುಟ್ಟರೂ ಅದರ ಘನತ್ವ ಕೆಡದು ಅದು ಅಕಳಂಕ ಸ್ವರೂಪವಾದ್ದರಿಂದ ಸುವರ್ಣವು ಸುವರ್ಣವೆ. ತನ್ನ ಘನತ್ವದಿಂದ ದೂರಾಗದು. ಅದು ತನ್ನ ಸ್ವಭಾವ ಬದಲಾಯಿಸದು ಹೇಗೊ ಹಾಗೆ, ನಿಮ್ಮ ಶರಣರ ಸಮರತಿ ಸಮ ದೃಷ್ಟಿ ಸಮ ಕಲೆಯಿಂದುಕ್ತವಾದ ಅಖಂಡ ಭಾವ, ಅಖಂಡ ಜ್ಞಾನ, ಅಖಂಡ ಭಕ್ತಿ ರೂಪಿ ಉಡುಗೆಯ ಉಡಿಸಿರುವುದರಿಂದ ನನಗೆ ಮಲಮಯ ಶರೀರವಿಲ್ಲ, ಶರೀರವಿಲ್ಲವಾದುದರಿಂದ ಪಡೆದವಳಿಲ್ಲ, ಪಡೆದವನಿಲ್ಲ, ನಿರ್ವಿಕಾರ ರೂಪಿ ಮಹಾ ಲಿಂಗವು ಜನಿಸಬಹುದೆ ನಾಶವಾಗಬಹುದೆ, ಮಹಾ ಲಿಂಗವು ಇದ್ದಕ್ಕಿದ್ದಂತಿದ್ದ ಜ್ಞಾನಾಮೃತವು ನಿಮ್ಮದು ನೋಡಾ. ನಿಮ್ಮ ಭಾವವೆಂಬುದು ಪೂರ್ಣ ಭಾವ, ಪರಾತ್ಪರ ಭಾವ, ಅಕ್ಷರೋತ್ತಮ ಭಾವ ಇದು ಮಹಾ ಲಿಂಗ.

ಮಹಾ ಲಿಂಗವು ವಿಷಯಾಕಾರದಿಂದ ಬದ್ಧವಾದುದಲ್ಲ . ನಿವೃತ್ತಿಯಿಂದ ಮೋಕ್ಷವಾದುದಲ್ಲ. ಇದು ನಿರಂತರವಾಗಿರುವ ಆತಂಕವಿಲ್ಲದ ತುಂಬಿದ ಭಾವ. ಇಲ್ಲಿ ಆವರಣವೆಂಬ ಸುಳುಹು ಸಹ ಇಲ್ಲವಾದುದರಿಂದ ಇದು ಕರ್ಮಕಾಂಡವಲ್ಲ . ಉಪಾಸನಾಕಾಂಡವಲ್ಲ, ಜ್ಞಾನಕಾಂಡವಲ್ಲ , ಇದು ಗಗನಾಕಾರದಂತೆ ನಿರ್ವಿಕಾರವಾದ ನಿಸ್ಸೀಮಭಾವವುಳ್ಳವಳ ನೀವು ಮಾಡಿದಿರಾಗಿ ನೀವು ನಾನಾರೀತಿಯಿಂದ ಕಡಿದು ಒರೆದೊರೆದು ಬೆಂಕಿಯಲ್ಲಿ ಬೇಯಿಸಿರಿ. ಇದು ನಿಮ್ಮಲ್ಲಿಟ್ಟ ಭಕ್ತಿಯಿಂದ ದೂರಾಗದು, ನಿಮ್ಮ ಅಖಂಡ ಭಾವದಿಂದ ದೂರಾಗದು. ನಿಮ್ಮ ಜ್ಞಾನಾಮೃತ ರೂಪಿ ಅಖಂಡ ಜ್ಞಾನದಿಂದ ದೂರಾಗದು. ಸಂದು ಸಂದಿಗೆ ಕಬ್ಬನ್ನು ಕಡಿದು ಗಾಣದಲ್ಲಿ ಹಾಕಿ ಬೆಂಕಿಯಿಂದ ಪಾಕವ ಮಾಡಿ ಬೆಲ್ಲ, ಸಕ್ಕರೆಯಾದರೂ ನೊಂದೆನೆಂದು ತನ್ನ ಸಿಹಿ ಸ್ವಭಾವ ಬಿಟೀತೆ ? ಕಬ್ಬಿನ ಮೂಲ ಸಿಹಿ. ಸಿಹಿ ಕಬ್ಬಿನೊಳ್ ಓತಪ್ರೋತವಾಗಿದೆ. ಅದು ಇರದ ಸ್ಥಾನವೇ ಇಲ್ಲ. ಅದು ಕಬ್ಬಾಗಿದ್ದರೂ ಅಬಾಧಿತವು. ಕಬ್ಬನ್ನು ಸಂದು ಸಂದಿಗೆ ಕಡಿದರೂ ಸಿಹಿ ಅಬಾಧಿತವು. ಕಬ್ಬು ಗಾಣದಲ್ಲಿ ಕೊಟ್ಟರೂ ಸಿಹಿ ಅಬಾಧಿತವು. ಅದರ ಹಾಲು ಕುದಿಸಿ ಪಾಕಗೊಳಿಸಿದರೂ ಸಿಹಿ ಅಬಾಧಿತವು. ಬೆಲ್ಲ ಸಕ್ಕರೆಯಾಗಿ ತೋರಿದರು ಸಿಹಿ ಮಾತ್ರ ತಾನು ಪೂರ್ವದೋಳ್ ಇದ್ದಕ್ಕಿದ್ದಂತೆ ಅಬಾಧಿತವು ಸತ್ಯವು ನಾಶರಹಿತವಾಗಿದೆ ಅಮರವಾಗಿ ಹೇಗಿದೆಯೋ ಹಾಗೆ ಚೆನ್ನಮಲ್ಲಿಕಾರ್ಜುನನ ಇರವು ನಿಸ್ಸೀಮವು.

ಸವೆಯದ ಸುಖ ನಿರಾಲಂಬ ಸುಖವಾದ್ದರಿಂದ ಈ ದೇಹವ ಸಂದು ಸಂದಿಗೆ ಕಡಿಯಲಿ ಕೊರೆಯಲಿ ನಾನಾ ಚಿತ್ರ ವಿಚಿತ್ರ ಹಿಂಸೆಯ ಮಾಡಲಿ ಬಿರುನುಡಿಯಿಂದ ನುಡಿಯಲಿ ಇಲ್ಲವೆ ಸಮ್ಮತಿಯಾಗಿ ಹರ್ಷಿಸಲಿ ನನಗೆ ಮಾತ್ರ ನೀವು ಕೊಟ್ಟ ಅರಿವು ಇರವು ಒಂದೆ ಅಲ್ಲದೆ ಅನ್ಯವಲ್ಲ . ಏಕೆಂದರೆ ಅಜ್ಞಾನದಲ್ಲಿ ಮಾಡಿದ ಕಾರ್ಯ ಈಗ ನಿಮ್ಮ ಮುಂದೆ ಇಳುಹಲು ಅದು ನಿಮಗೆ ಹಾನಿ. ನಿಮ್ಮ ವಾಸನೆ ವಿಶುದ್ಧವಾಸನೆ. ನಿಮ್ಮ ಭಾವ ತುಂಬಿ ತುಳುಕದ ಭಾವ ಅಲುಪ್ತ ಭಾವ. ಇದಲ್ಲದೆ ನಿಮ್ಮ ಜ್ಞಾನ, ಪೂರ್ಣ ಜ್ಞಾನ. ಅಖಂಡ ಜ್ಞಾನ. ಕೊನೆ ಮೊದಲಿಲ್ಲದ ಜ್ಞಾನ. ಆವುದರೋಳ್ ಕೂಡದ ಜ್ಞಾನ. ಸಕಲವು ತಾನಾದಂತೆ ಭಾಸಿಸಿದರು ತಾನು ಇದ್ದಕ್ಕಿದ್ದಂತಿದ್ದ ಜ್ಞಾನ. ನೀವು ಇವುಗಳೆಲ್ಲ ಕೊಟ್ಟುದ್ದರಿಂದ ನನ್ನ ಹೀನ ಗುಣಂಗಳ ಮುಂದಿಡಲು ಇಂಬಿಲ್ಲನೋಡಾ. ಬೆಳಕು ತೆಗೆದುಕೊಂಡು ಕತ್ತಲೆ ನೋಡಲು ಹೋದರೆ ಅದು ಕಾಣಬಹುದೆ ಪ್ರಭುವೆ ? ನಿಮ್ಮರಿವು, ನಿಮ್ಮ ಭಾವ ತೆಗೆದುಕೊಂಡು ನಾಹಿಂದೆ ಮಾಡಿದ ಹೀನ ಗುಣಂಗಳ ನೋಡಲು ಹೋದರೆ ಕಾಣಬಹುದೆ ? ಕಾಣಲರಿಯವು. ಶರಣರೆಂದರೆ ನೀವು ಚೆನ್ನಮಲ್ಲಿಕಾರ್ಜುನ ದೇವರಾಗಿರುವುದರಿಂದ ನೀವು ಕೊಂದರೂ ಅಯ್ಯ ನಿಮ್ಮಗಳಿಗೆ ಶರಣು ಶರಣಾರ್ಥಿ ಎಂಬ ಶರಣು ಭಾವ ಶರಣಾಗತ ಮರೆಯನು ತಂದೆ.

ಪ್ರಭುವಿನ ಪ್ರಶಂಸೆ.

**40**

**ಅಂಗ ಅಂಗನೆಯ ರೂಪಲ್ಲದೆ ಮನ ವಸ್ತು ಭಾವದಲ್ಲಿ**
**ಬೆಚ್ಚಂತಿರ್ಪುದು, ಬಂದ ಕಥನದಲ್ಲಿ ಬಂದು ಹಿಂಗಿದೆಯಲ್ಲ.**
**ಅಕ್ಕ ಗುಹೇಶ್ವರ ಲಿಂಗದಲ್ಲಿ ಉಭಯ ನಾಮವಳಿದೆ ಎನ್ನಕ್ಕ.**

**ತಾತ್ಪರ್ಯ :** ರೂಪ ನೋಡಲು ಸ್ತ್ರೀ ರೂಪವಲ್ಲದೆ ಮನವು ಮಾತ್ರ ಅದ್ವಿತೀಯ ಭಾವದಿಂದ ಭರಿತವು. ಕಾಯ ನೋಡಲು ಹೆಣ್ಣು ರೂಪವಲ್ಲದೆ ಮನವು ಮಾತ್ರ ಅಕಂಡೈಕರಸದಲ್ಲಿ ಏಕವಾಗಿದೆ. ಮನದಲ್ಲಿ ವಸ್ತು , ವಸ್ತುವಿನಲ್ಲಿ ಮನ ಎರಕಹೊಂದಿದಂತಿರುವುದು, ಭಾವದಲ್ಲಿ ವಸ್ತು, ವಸ್ತುವಿನಲ್ಲಿ ಭಾವ ಏಕವಾಗಿರುವುದು. ಆಹಹ ಇದು ಎಂಥ ನೆಲೆಯಿಲ್ಲದ ನಿಲುವು ! ಅಲ್ಲಿ ಇದು ವಸ್ತು ವಸ್ತುವಿನ ಭಾವವೆಂಬ ಸಂಕೇತಕ್ಕಿಂಬಿಲ್ಲ. ಮನ ವಸ್ತುವೆ ಭಾವ ವಸ್ತುವೆ ಆಗಿ ಬೆಸೆದಂತಾಗಿದೆ ನೋಡಾ.

ವಸ್ತುವೆಂಬುದು ಗಗನದಂತಿರುವ ಜ್ಞಾನಾಮೃತ. ಅದು ಘನಕ್ಕೆ ಘನವಾದುದು. ಘನಲಿಂಗ ಅದುವೆ. ಇದು ಅವಾಙ್ಮನ ಅಗೋಚರ, ಇದು ಧ್ಯಾನಾತೀತ ಘನ, ಜ್ಞಾನಾತೀತ ಘನ, ಘನಕ್ಕೆ ಘನವಾದುದು ಇದುವೆ. ಇಲ್ಲಿ ನಾಮವಿಲ್ಲ ನಿಯಮವಿಲ್ಲ . ನಾನು ನೀನೆಂಬುದು ಮುನ್ನಿಲ್ಲ . ಸತಿಪತಿಯೆಂಬ ಉಭಯನಾಮವುಳ್ಳ ಸೀಮೆ ಆವುದೂ ಇಲ್ಲ , ಮನವಿಲ್ಲ ಮಾಯೆಯಿಲ್ಲ . ಮಾಯೆಯ ನೋಟವು ಇಲ್ಲ ಏನೆಂಬುದೂ ಇಲ್ಲ. ಇದ್ದಕ್ಕಿದ್ದಂತಿದ್ದ ನಿಜವಸ್ತು ಅಕಥನೀಯ ನೋಡಾ. ಅಕಥನೀಯವು ಕಥನಕ್ಕೊಳಪಡದು. ಕಥನಕೊಳಪಡದ್ದರಿಂದ ವಾಣಿಗೂ ಮೀರಿದುದು, ಕಲ್ಪನೆಗೂ ಮೀರಿದುದು, ನೆನಹಿಗೂ ಮೀರಿದುದು, ನಿರ್ಣಯಕ್ಕೂ ಮೀರಿದುದು. ಅದನ್ನು ಭಾವಿಸುವುದೆಂತು, ಅರಿಯುವದೆಂತು ?

ಅಲ್ಲಿ ಅರಿದಿಹೆನೆಂಬ ಚಿದಹಮ್ಮಿಗೆ ಇಂಬಿಲ್ಲ. ಹೀಗೆಯೇ ಎಂದು ನಿರ್ಧರಿಸಲು ಅನುಭವ

ಮದಕ್ಕಂಬಿಲ್ಲ . ಆವಾವ ಭಾಷೆಯಿಂದಲೂ ಭಾಷಾಂತರ ಮಾಡಲು ಬರದು. ಧ್ಯಾನವಿಲ್ಲ, ಧ್ಯಾತನಿಲ್ಲ , ಧ್ಯೇಯವಿಲ್ಲ , ಅರಸುವುದಿಲ್ಲ , ಅರಿಯುವದಿಲ್ಲ , ಕಾಣಿಸಿಕೊಂಬುವುದಿಲ್ಲ , ಕಾಣುವದಿಲ್ಲ , ಅಕಥನೀಯವು, ಘನಕ್ಕೆ ಘನವಾದುದು. ಅಕ್ಕ, ನೀ ಬಂದ ಕಥನ ಅದನಾರು ವರ್ಣಿಸುವರು ತಾಯೆ! ಅವರ್ಣಿೀಯ ಕಥನ; ಅದನೆಂತುಸುರುವುದು.! ಅಕ್ಕ, ಚೆನ್ನಮಲ್ಲಿಕಾರ್ಜುನ ಕಥನವೆಂಬುದು ನಿರ್ವಾಣನಿಲಯ. ಆ ನಿಲುವಿನ ಘನ ಸುಖಕ್ಕಾಗಿ ನೀ ಬಂದುದ್ದಲ್ಲವೆ ? ಕೊನೆಗೆ ಅದೇ ಕಥನದಲ್ಲಿ ಬಯಲಾದೆಯಾ, ಶಾಂತಳಾದೆಯಾ, ನಿಷ್ಪತ್ತಿಯಾದೆಯಾ ? ನಿನ್ನ ನಿಷ್ಪತ್ತಿಯ ಕಥನವೆಂಬುದು ನಿರ್ಭಯ ಕಥನ, ಕುಂದಿಲ್ಲದ ಕಥನ, ಕೇಡಿಲ್ಲದ ಕಥನ, ನಿರ್ನಾಮ ಕಥನ, ನಿಸ್ಸೀಮ ಕಥನ, ಇದುವೆ ಕೈವಲ್ಯ ಕಥನ, ಕಲ್ಯಾಣ ಕಥನ, ಸ್ವಯ ಕಥನ, ಜ್ಞಾನಾಮೃತ ಕಥನ, ಅಚಿಂತ್ಯ ಕಥನ, ನೀನು ಅಂದಾದರೂ ಇದೇ ಕಥನಕ್ಕಾಗಿ ಬಂದೆ, ಇಂದಾದರೂ ಇದೇ ಕಥನಕ್ಕಾಗಿ ಬಂದೆ. ಕೊನೆಗೆ ನಿನ್ನ ಅಕಥನೀಯ ಕಥನದಲ್ಲಿ ತೃಪ್ತಳಾದೆಯಾ, ಪರಮಾನಂದವಾದೆಯಾ ನಿಜಸುಖಿಯಾದೆಯಾ ಶಬ್ಧ ಮುಗ್ದನೋಳ್ ಬೆರೆತು ಬೇರಿಲ್ಲದಂತಾದೆಯಾ ? ನಿರಾಳ ನಿಸ್ಸೀಮ ಸ್ವಯಂಭೂ ನೀನೆ ಆದೆಯಾ. ಅಕ್ಕ ಗುಹೇಶ್ವರ ಲಿಂಗದಲ್ಲಿ ಉಭಯ ನಾಮವಳಿದೆ ಎನ್ನಕ್ಕ . ಗುಹೇಶ್ವರ ಲಿಂಗವೆಂಬುದು ಸಮ ಸ್ವರೂಪವಾದ ಪರಮ ಸತ್ಯ ಅದು ಏನೊಂದಾದುದಲ್ಲ, ಹೋದುದಲ್ಲ, ನಿರಂತರವಾಗಿರುವ ನಿರಾತಂಕ ತತ್ವ, ಖಂಡಿತವಿಲ್ಲದ ಅಖಂಡಿತವು. ಅಲ್ಲಿ ಅಹಂ ಇಲ್ಲ, ಇದಂ ಇಲ್ಲ, ಜ್ಞೇಯ ವಿಲ್ಲ, ಜ್ಞಾನವಿಲ್ಲ, ಅಂತರ ಇಲ್ಲ ಬಹಿರ್ಇಲ್ಲ , ಅಲ್ಲಿ ದ್ವೈತಕ್ಕಂಬಿಲ್ಲವಾದ್ದರಿಂದ ಶರಣಸತಿ ಲಿಂಗಪತಿಯೆಂಬ ಉಭಯನಾಮವಳಿದೆ ಎನ್ನಕ್ಕ. ಗುಹೇಶ್ವರ ಲಿಂಗವು ಪೂರ್ಣವು. ಇದ್ದಕ್ಕಿದ್ದಂತಿರುವ ಸರ್ವಮಂಗಳಮಯ ಸತ್ಯ. ಅಲ್ಲಿ ಅದು ಏನೊಂದಾದುದಲ್ಲ ವಿಭಾಗಕ್ಕಂಬಿಲ್ಲ, ಸಂಗವೆಂಬುವದಿಲ್ಲ, ನಿಸ್ಸಂಗವೆಂಬುದಿಲ್ಲ, ಸಮರಸವಿಲ್ಲವಾದುದರಿಂದ ಶರಣ ಸತಿ ಲಿಂಗ ಪತಿ ಎಂಬುಭಯ ಭಾವ ರೂಪ ನಾಮವಳಿದೆಯನ್ನಕ್ಕ . ಗುಹೇಶ್ವರ ಲಿಂಗ ನಿರಂತರ. ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತಿದ್ದ ಘನ. ಅದು ಘನಕ್ಕೆ ಘನ.ಅದು ಬದಲಾವಣೆಗಿಂಬಿಲ್ಲವಾದ್ದರಿಂದ ಶರಣಸತಿ ಲಿಂಗ ಪತಿ ಎಂಬುಭಯ ನಾಮವಳಿದೆ ಎನ್ನಕ್ಕ.

ಅಕ್ಕ ಯತಾರ್ಥ ತಾನಾರೆಂದರಿತ ಅವಿರಳ ಜ್ಯೋತಿ, ಅಖಂಡಜ್ಯೋತಿ, ಸ್ವಮಹಿಮ್ನವು. ಅಲ್ಲಿ ತಾನೆಂಬುದಿಲ್ಲ , ಇದಿರೆಂಬುದಿಲ್ಲ , ಸ್ವಾಮಿ ಇಲ್ಲ ಭೃತ್ಯನಿಲ್ಲ , ಧ್ಯೇಯವಿಲ್ಲ , ಧ್ಯಾನವಿಲ್ಲ , ಸಂಗವಿಲ್ಲ, ಸಮರಸವಿಲ್ಲ, ಏನೇನೂ ಇಲ್ಲವೆಂಬುದು ನಿನ್ನ ಇರುವು ನಿಶ್ಚಿಂತವಾದ್ದರಿಂದ ಗುಹೇಶ್ವರ ಲಿಂಗ ತಾನೆ. ಅದಕ್ಕಾಗಿ ಸತಿ ಪತಿ ಎಂಬುಭಯ ನಾಮವಳಿದೆ ಯನ್ನಕ್ಕ.

**41**

**ಅಂಗಸಂಗದಲ್ಲಿ ಲಿಂಗಸಂಗಿಯಾದೆ.**
**ಲಿಂಗಸಂಗದಲ್ಲಿ ಅಂಗಸಂಗಿಯಾದೆ.**
**ಉಭಯ ಸಂಗವನರಿಯದೆ ಪರಿಣಾಮಿಯಾದೆನು.**
**ನುಡಿಗಡಣವ ಮರೆದು ತೆರಹಿಲ್ಲದಿದ್ದರೇನು ?**
**ಎನ್ನ ದೇವ ಚೆನ್ನಮಲ್ಲಿಕಾರ್ಜುನ ಬೆರಸಿದ ಬಳಿಕ**
**ಎನ್ನ ನಾನು ಏನೆಂದು ಅರಿಯೆನಯ್ಯಾ.**

**ತಾತ್ಪರ್ಯ :** ಅಂಗವೆಂಬುದು ಘನಾಂಗ, ಲಿಂಗವೆಂಬುದು ಘನಾಂಗ , ಘನಾಂಗವೆಂಬುದು ಸಮರಸ ಏಕತ್ವ, ಏಕತ್ವನಿಲಯ ಏಕವಾದ ನಿಲಯ. ಇದು ಕಾರಣ ಅಂಗಸಂಗದಲ್ಲಿಲಿಂಗ ಸಂಗಿಯಾದೆ ಲಿಂಗ ಸಂಗದಲ್ಲಿ ಅಂಗ ಸಂಗಿಯಾದೆ. ಸಂಗಿಯೆಂಬುದು ಸಮರಸ ನಿಲಯ ಏಕತ್ವನಿಲಯ, ಅಂದರೆ ಅಂಗನು ಲಿಂಗ ಸಾದೃಶ್ಯವೆ. ಲಿಂಗವು ಅಂಗನ ಸಾದಶ್ಯವೆ. ಸಾದೃಶ್ಯವೆಂದರೆ ಓರ್ವನೆ ಎರಡು ನಾಮಪಡೆದಂತೆ. ಒಬ್ಬನಿಗೆ ಅಂಗವಾಗಿ ಲಿಂಗವಾಗಿ ಕಾಣುವುದು. ಅಂದರೆ ಅದ್ವಿತೀಯ ಘನವನ್ನೆ ದ್ವಿತೀಯ ರೂಪವಾಗಿ ಕಾಣುವುದು.

ಹೇಗೆಂದರೆ ಲಿಂಗವು ನಿರ್ಮಲವು ನಿರ್ಮಾಯವು ನಿರ್ಗುಣವು ನಿರಂಜನವು, ಚಿದಾಕಾಶವು, ಚಿತ್ಪ್ರಕಾಶವು, ಚಿನ್ಮಯನು, ವಿಭಾಗಿಸಲು ಬಾರದಂಥವನು. ಉಪಾಧಿ ಇಲ್ಲದಂತವನು. ಅಖಂಡಾನಂದಮಯನು. ಅಂಗ ಅಂದರೆ ಮಲ ಮಯಾದಿಗಳು ಇಲ್ಲದಂಥವನು. ಸಕಲ ಕರಣಂಗಳು ಇಲ್ಲದಂಥವನು, ಎಲ್ಲಾ ತತ್ವವನ್ನು ಮೀರಿದಂಥ ಅಜ್ಞಾನಲೇಶ ಹೊದ್ದದಂಥವನು ಅದುವೆ ಚೈತನ್ಯಾತ್ಮಕವಾಗಿ ಸತ್ ಚಿತ್ ಆನಂದ ನಿತ್ಯಪರಿಪೂರ್ಣ ಲಕ್ಷಣ ಉಳ್ಳವನಾಗಿರುವುದರಿಂದ ಆ ಪರತತ್ವವು ಅಂಗನೆಂದು ಹೇಳಿಸಿಕೊಳ್ಳುವುದು. ಕಾರಣ ಈರ್ವರ ಲಕ್ಷಣ ಒಂದೇ ಆದುದರಿಂದ ಲಿಂಗಾಂಗ ಸಮರಸವೆ ಸಿದ್ಧವಾಗುವುದು.

**ಶ್ಲೋಕ : '' ಆತ್ಮಾಯಂ ಕೇವಲ ಶುದ್ಧ ಶಿವಸ್ಯಾಂತ ಸದಾಮಲಃ ನಿತ್ಯೋ ನಿರಂಜನ ಶ್ಯಾಂತ ಸ್ಯಾದತ್ಮ ಸ್ವಯಂ ಶಿವಃ** '' ಈ ಆತ್ಮನು ಅಂದರೆ ಅಂಗನು ಕೇವಲ ಮುಕ್ತನು ಶುದ್ಧನು ಶಿವ ಸ್ವರೂಪನು ಸದಾ ನಿರ್ಮಲನು ಅವಿನಾಶಿ ನಿಃಪಾಪನು ರಾಗದ್ವೇಶ ವಿರಹಿತನು. ಇದು ಕಾರಣ ಅಂಗನು ಲಿಂಗನು ಸ್ವಯಂ ತಾನೆ.

ಕ್ಷಣ ಈ ಪ್ರಕಾರ ಅಂಗ ಲಕ್ಷಣ, ಲಿಂಗ ಲಕ್ಷಣ ಒಂದಾದುದರಿಂದ ಅಂಗ ಸಂಗದಲ್ಲಿ ಲಿಂಗ ಸಂಗಿಯಾದೆ. ಲಿಂಗ ಸಂಗದಲ್ಲಿ ಅಂಗ ಸಂಗಿಯಾದೆ. ಘನವೆಂಬುದು ಪರಿಣಾಮ ಪರಿಣಾಂವೆಂಬುದು ಪರಮಾನಂದದ ನಿಲಯ, ಪರಮ ಶಾಂತಿಯ ನಿಲಯ, ಪರಮ ಸುಖದ ನಿಲಯ, ಪರಮ ಸುಖವೆಂಬುದು ಉಭಯ ಸಂಗವನರಿಯದ ನಿಲಯ. ಈ ನಿಲಯವೇ ನೆಲೆಯಿಲ್ಲದ ನಿಲುವು. ಉಪಮಿಸಲರಿಯದ ನಿಲುವು. ಆದುದರಿಂದ ಉಭಯ ಸಂಗವನರಿಯದೆ ಪರಿಣಾಮಿಯಾದೆ ಪರಿಣಾಮವೆಂಬುದು ಬೇರ್ಪಡಿಸುವ ಘನವಾದುದರಿಂದ ಅಂಗಸಂಗದಲ್ಲಿಲಿಂಗಸಂಗ ಲಿಂಗಸಂಗದಲ್ಲಿ ಅಂಗಸಂಗವೆಂಬ ಉಬಯಸಂಗವ ತಿಳಿಯದೆ ಪರಿಣಾಮಿಯಾದೆ ಎಂದು ಹೇಳಿದ್ದಾಳೆ. ಅಭೇಧ್ಯ ಘನ ಭೇದಿಸಲು ಬಾರದ್ದಾವುದೋ ಅದುವೇ ಉಭಯ ಸಂಗವನರಿಯದೆ ಪರಿಣಾಮಿಯಾದ ನಿಲುವು. ಏಕೆಂದರೆ ಇಲ್ಲಿ ಅಂಗನೆಂಬುವುದಿಲ್ಲ , ಲಿಂಗನೆಂಬುವುದಿಲ್ಲ , ಸಂಗವೆಂಬುವುದಿಲ್ಲ , ನಿಸ್ಸಂಗವೆಂಬುದಿಲ್ಲ, ಸಮರಸವೆಂಬುದು ಲಯವಾದ ನಿಷ್ಪತ್ತಿ ನಿಲಯ, ಶಾಂತಾತ್ಮಳಾದ ನಿಲಯ. ಇದು ನುಡಿಯ ಗಡಣವ ಮರೆದ ತೆರಹಿಲ್ಲದ ಸ್ಥಿತಿ. ಇಲ್ಲಿ ವಿಚಾರ ಅವಿಚಾರವೆಂಬ ವಿಷಮ ದೃಷ್ಟಿಗಿಂಬಿಲ್ಲ. ಇದು ಪುಸಿ, ಇದು ದಿಟವೆಂಬ ವಿಭಾಗತ್ವವಿಲ್ಲ. ಅವಿದ್ಯೆಯಿಂದುಕ್ತವಾದ ಜೀವನ ಇಲ್ಲ, ಮಾಯಿಕ ತತ್ವದಿಂದುಕ್ತನಾದ ಶಿವನು ಇಲ್ಲ . ಇಲ್ಲಿ ಅಂಗನೆಂಬುದಷ್ಟೆ ಲಿಂಗನೆಂಬುವುದಷ್ಟೆ , ದೇವದೇವ ಘನಕ್ಕೆ ಘನ ಅಕ್ರಿಯೆ. ಅದು ಕ್ರಿಯೆಯಿಂದುಕ್ತವೆ, ಇಲ್ಲಿ ಸಂಗವಿಲ್ಲ , ಸಮರಸವಿಲ್ಲ , ಫಲವಿಲ್ಲ , ಪದವಿಲ್ಲ . ಏನೇನು ಇಲ್ಲ , ಪಾತ್ರವಿಲ್ಲ, ಅಪಾತ್ರವಿಲ್ಲ , ನೊಂದಿಸುವವರಿಲ್ಲ , ನಿಂದಿಸುವವರಿಲ್ಲ , ಸ್ತುತಿಸುವವರಿಲ್ಲ , ತಿಳಿದುದಿಲ್ಲ , ತಿಳಿಯದುದಿಲ್ಲ , ಅಹುದಾದುದಿಲ್ಲ , ಅಲ್ಲಾದುದಿಲ್ಲ , ಏನೇನೂ ಇಲ್ಲ . ಈ ಇಲ್ಲವೆಂಬುವುದು

ಸಹ ಕಾಣದಾದುದೆ, ಇದುವೆ  ನುಡಿಗಡಣವ ಮೀರಿದ ತೆರಹಿಲ್ಲದ ಘನ, ಈ ತೆರಹಿಲ್ಲದ ನಿಜ ಘನರೂಪ ಚೆನ್ನಮಲ್ಲಿಕಾರ್ಜುನ ದೇವರ ಬೆರಸಿದ ಬಳಿಕ ಎನ್ನ ನಾನು ಏನೆಂದು ಅರಿಯೆನಯ್ಯ.

ಅಂದರೆ ಚೆನ್ನಮಲ್ಲಿಕಾರ್ಜುನನ ನಿಜ ನಿವಾಸವು ಏನೊಂದುಸರಲಿಂಬಿಲ್ಲವಾದ ಅಚಿಂತ್ಯರೂಪಿ ಸವೆಯದ ಸುಖ ಕರಗತವಾದ ಬಳಿಕ ಎನ್ನ ನಾನು ಏನೆಂದರಿಯೆನಯ್ಯಾ. ಇದು ಸುಖ ರೂಪಿ ಸುಖದವನ ಸುಖ ನೋಡಾ. ಘನದ ಘನ ನೋಡಾ. ಇಲ್ಲಿ ವಿಷಯಕ್ಕಿಂಬಿಲ್ಲ . ವ್ಯಸನಕ್ಕಿಂಬಿಲ್ಲ , ವಾಸನೆಗಿಂಬಿಲ್ಲ, ಮರವೆಗಿಂಬಿಲ್ಲ , ಅಚಿಂತ್ಯವು ಚಿಂತನದಿಂದ ಅತೀತವಾದುದರಿಂದ ಎನ್ನ ನಾನು ಏನೆಂದು ಅರಿಯೆನಯ್ಯ. ಹೀಗೆಂದು ಪ್ರಭುದೇವರೊಡನೆ ಅಕ್ಕಗಳು ಪ್ರಸಂಗಿಸುತ್ತಿರಲು ಬಸವರಾಜ ದೇವರು ಆ ಮಹಾದೇವಿ ಅಕ್ಕಗಳು ನುಡಿಸುವ ನೋಡುವ ಪ್ರಸ್ತಾವದ ವಚನ.

**42**

**ಅಂಗದಲ್ಲಿ ಲಿಂಗಸಂಗ, ಲಿಂಗದಲ್ಲಿ ಅಂಗಸಂಗವ ಮಾಡಿದೆನೆಂದರೆ**
**ಸಂದು ಭೇದವಳಿದ ಪರಿ ಎಂತು ಹೇಳಾ. ಅಂಗದಲ್ಲಿ ಲಿಂಗಸಂಗವ ಮಾಡಿಹೆನೆಂದರೆ**
**ಮುಂದುಗೆಡಿಸಿ ಕಾಡುವನು ಶಿವನು. ಕಾಮವೆಂಬ ಬಯಕೆಯಲ್ಲಿ**
**ಅಳಲಿಸುವ  ಬಳಲಿಸುವ ಶಿವನು. ಲಿಂಗದಲ್ಲಿ ಅಂಗವ ತಂದು ನಿಕ್ಷೇಪಿಸಿಹೆನೆಂದರೆ**
**ಅಂಗದಿಂದಲತ್ತತ್ತ ಲೋಸರಿಸಿ ಓಡುವನಯ್ಯ ಶಿವನು, ಹೆಣ್ಣು ಗಂಡಾದರೆ**
**ಸಂಗಕ್ಕೆ ಒಲಿವನು ಕೇಳಾ ಶಿವನು. ಕೂಡಲಸಂಗಮ ದೇವರ**
**ಬೆರಸುವರೆ ಭಿನ್ನವಿಲ್ಲದೆ ಕಲಿಯಾಗಬೇಕು ಕೇಳಾ ಅವ್ವ.**

**ತಾತ್ಪರ್ಯ :** ಅಯ್ಯಾ ಕೂಡಲ ಸಂಗಮ ದೇವರ ಬೆರಸುವರೆ ಬೇರಾಗದೆ ಎರಡಾಗದ ವೀರರಾಗಿರಬೇಕು. ಈ ವೀರತನ ಯತಾರ್ಥ್ ಜ್ಞಾನದ ಘನತ್ವದಿಂದ ಬರುವದಲ್ಲದೆ ಬೇರಾವ ಜ್ಞಾನದಿಂದ ಬರಲಾಗದು, ಅಂಗದಲ್ಲಿ ಲಿಂಗ ಸಂಗವಾಗಲಿ ಲಿಂಗದಲ್ಲಿ ಅಂಗಸಂಗವಾಗಲಿ ಮಾಡಲು ಇಂಬುಂಟೆ ? ಸ್ಥಳವುಂಟೆ ?

ಸಂಗ ಸಂಬಂಧವೆಂಬುದು ಮಾಯಿಕ, ಅದು ವಿಷಯಾಸಕ್ತಿಯಿಂದುಕ್ತವಾದುದು, ಅಲ್ಲಿ ವ್ಯಾಮೋಹ ಬಲಗೊಂಡಿರುವುದು. ಅದು ವಿಷಯ ಭೋಗಕ್ಕಿಂಬಾಗಿರುವುದರಿಂದ ಲಿಂಗಾಂಗ ಸಮರಸ ಜ್ಞಾನವಿಲ್ಲ . ಭೇದ ಜ್ಞಾನ ದೃಢವಾಗಿರುವುದರಿಂದ ಮಾಯಿಕ ಶಿವನು ಮುಂದುಗೆಡೆಸಿ ಕಾಡುವನು. ಇದಲ್ಲದೆ ತನ್ನದಾದ ಕಾಮವೆಂಬ ತಮೋಶಕ್ತಿಯಿಂದ ವಿಷಯಾಕಾರವನ್ನೇ ವೃದ್ಧಿ ಮಾಡಿ ಅಳಲಿಸುವ ಬಳಲಿಸುವ ಶಿವನು ಲಿಂಗದಲ್ಲಿ ಅಂಗವ ತಂದು ಅಂದರೆ ಭಾವ ತಂದು ಆ ಬಾವನೆ ನಿನಗರ್ಪಿತವೆಂದು ಅರ್ಪಿಸ ಹೋದರೆ ಆ ಭಾವದಿಂದತ್ತತ್ತ ಲೋಪ ದೋಷವ ಮಾಡಿ ಓಡುವನಯ್ಯಾ ಶಿವನು. ಅವ್ವಾ ಶಿವನು ಹೆಣ್ಣೆ ಆಗಲಿ ಗಂಡೆ ಆಗಲಿ ಆಗಿದ್ದರೆ ಮಾತ್ರ ಸಂಗಕ್ಕೆ ಒಲಿವನವ್ವಾ ಶಿವನು. ಹೆಣ್ಣು ಅಲ್ಲ ಗಂಡು ಅಲ್ಲ. ಸ್ವಗತ ಭೇಧವಿಲ್ಲ, ಸಜಾತಿ ಭೇದನಲ್ಲ, ವಿಜಾತಿ ಭೇದನಲ್ಲ, ಶಿವನು ನಿರ್ಮಾಯನು. ಆದುದರಿಂದ ನಿರ್ಭಯ ತತ್ವವುಳ್ಳುದೆ ಶಿವತತ್ವವು. ಇದನ್ನು ಯತಾರ್ಥ ತಿಳಿವಡೆ ತಾನೆ ಶಿವ. ಸಕಲ ಭಾವಭಾವಂಗಳ ಪ್ರಕಾಶ ಸ್ವರೂಪ ತಾನೆ. ಸಕಲ ಚೇತನದ ಚೈತನ್ಯ ತಾನೆ. ಸಕಲ ಜೀವಿಗಳ ಜೀವ ಚಿನ್ಮಯ ಸ್ವರೂಪ  ತಾನೆ, ತನ್ನ ಸಚ್ಚಿದ್ಘನವೆ ಸಕಲದರೋಳ್ ಸ್ಥಿತವಾಗಿಹುದು.

ದೇವದೇವ ಬೀಜಗಳಿಗೆಲ್ಲಾ ಬೀಜರೂಪನು, ಸಕಲದರ ಸಾರದಸಾರ ತಾನೇ, ಕರ್ಮಿಗಳ

ಕರ್ಮತಾನೆ. ಧರ್ಮಿಗಳ ಧರ್ಮ ಚೈತನ್ಯ ರೂಪ ಸಕಲ ಕಾರಣಂಗಳ ಕಾರಣ ತಾನೆ. ಪರಮ ಸತ್ ಸ್ವರೂಪವು ಅಕಳಂಕವು, ಅಕ್ಷಯ ಪದವು, ನಿರ್ವಿಕಾರವು, ಸ್ವಯಂ ಪ್ರಕಾಶವು ಶಾಂತ ಸ್ವರೂಪವು. ಇದು ನಿರಂತರವು, ನಿರಾತಂಕವಿಲ್ಲದ ಬೆಳಗುವ ಬೆಳಗು, ಶಿವ ತತ್ವವು ಗಗನ ಸ್ವರೂಪವಾದ ಸಮಸತ್ತೆಯು. ಅದರೋಳ್ ಪ್ರವೃತ್ತಿಗಿಂಬಿಲ್ಲ, ನಿವೃತ್ತಿಗಿಂಬಿಲ್ಲ ತಾನೆ ತನ್ನ ಮಹಿಮೆಯೋಳ್ ಸ್ಥಿರವು. ಆಕಾಶದಂತೆ ನಿರ್ಮಲ. ಅದರೋಳ್ ದ್ವೈತ್ಯವು, ಭ್ರಮವೂ ಇಲ್ಲದುದು. ಇಲ್ಲದ ನೀನು ಅವನ ಸಂಗ ಮಾಡಿದುದದೆಂತು? ಅವನು ನಿನ್ನ ಸಂಗ ಮಾಡಿದುದದೆಂತು ? ಶಿವ ತತ್ವವು ಸರ್ವದಾ ಒಳಹೊರಗೆನ್ನದೆ ವ್ಯಾಪಿಸಿರುವಾಗ ನೀನು ಅಂದರೆ ಶಿವ ತತ್ವವೆ. ಒಳಗೂ ಶಿವ ತತ್ವವೆ, ಹೊರಗೂ ಶಿವತತ್ವವೆ. ಎಲ್ಲೆಲ್ಲೂ ಶಿವ ತತ್ವವೆ ಶಿವ ತತ್ವವು. ಕೊನೆ ಮೊದಲಿಲ್ಲದ ಘನ. ಘನಕ್ಕೆ ಘನವಾಗಿರುವಲ್ಲಿ ಬೇರು ಮಾಡಿ ಅವನಲ್ಲಿ ನೀನು ಸಂಗ ಮಾಡಿದುದು ಹೇಗೆ ? ನಿನ್ನೋಳ್ ಅವನು ಸಂಗಮಾಡಿದುದು ಹೇಗೆ ? ನೀವೀರ್ವರು ಸಂಗ ಮಾಡಿದ ಸ್ಥಾನವಾವುದು, ಇಂಬಾವುದು ಹೇಳು ಅಕ್ಕಾ ! ಕೂಡಲ ಸಂಗಮ ದೇವರ ಬೆರೆಸುವರೆ ಭಿನ್ನವಿಲ್ಲದೆ ಕಲಿಯಾಗಬೇಕು. ಹೇಗೆಂದರೆ ಕೂಡಲ ಸಂಗಮ ದೇವರ ಬೆರಸುವರೆ ಕೊನೆಮೊದಲಿಲ್ಲದ ನಿಸ್ಸೀಮವಾದ ಚಿನ್ಮಯ ತತ್ವದಲ್ಲಿ ಬೆರೆಯುವುದು. ಬೆರೆಯುವುದರೋಳ್ ಜ್ಞಾನದಿಂದ ಚಿನ್ಮಯ ಸ್ವರೂಪಿ ಕೂಡಲ ಸಂಗಮ ದೇವನನ್ನು ಬೆರೆಯುವುದೆ ಶ್ರೇಷ್ಠವು ಅದು ಹೇಗೆಂದರೆ ಚಿನ್ಮಯ ದೇವನು ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತಿದ್ದ ಘನವೆಂದು ತಿಳಿದು ಅಲ್ಲಿ ತಾನು ಆ ಸ್ವರೂಪದಿಂದ ಬೇರಾಗದೆ ಕೂಡದೆ ಸಕಲ ಭಾವಂಗಳಲ್ಲಿ ಅವಸ್ಥೆಗಳಲ್ಲಿ ಗ್ರಹಣ, ತ್ಯಾಗದ ಸೋಂಕಿಲ್ಲದೆ ಸಮ ಸ್ವರೂಪನಾಗಿರುವದೆ ಅವನೋಳ್ ಬೆರೆತಂತೆ. ಅಂದರೆ ಒಂದಾದಂತೆ.ತಾನೆ ತಾನಾದಂತೆ ತಾನಾರೆಂದರಿತು ಅರುವಿನ ಅಹಂತ್ವವಿಲ್ಲದವನಾಗಿ ಅರಿಯದರವು ಆಗಿಹುದೆ ಕೂಡಲ ಸಂಗಮದೋಳ್ ಭಿನ್ನವಿಲ್ಲದೆ ಬೆರೆತಂತೆ ಭೇದ ಭಾವ ಉದಯಿಸದಿರುವುದೆ ಭಿನ್ನವಿಲ್ಲದ ಕೂಡಲ ಸಂಗಯ್ಯನಲ್ಲಿ ಕಲಿಯಾದಂತೆ. ಕೂಡಲ ಸಂಗಯ್ಯ ನಿಸ್ಸೀಮ ಅಪಾರ ಅದ್ವಿತೀಯನಿರುವಾಗ ಸ್ಥಾವರ ರೂಪನು ಅವನೆ ಜಂಗಮರೂಪನು ಅವನೆ. ಅಲ್ಲಿ ಪ್ರಾಪ್ತಿ, ಅಪ್ರಾಪ್ತಿ ಆವುದು ? ಕೂಡಿದುದು ಅಗಲಿದುದು ಆವುದು ? ಸಂಗ ಆವುದು, ನಿಸ್ಸಂಗವಾವುದು ? ಇದ್ದುದು ಆವುದು, ಇಲ್ಲದುದು ಆವುದು ? ಏನೊಂದುಸುರಲು ಎಡೆಗೊಡದಿರುವಾಗ ಆಸ್ತಿ ಆವುದೆಂದು ಹೇಗೆ ಹೇಳುವದು ? ನಾಸ್ತಿ ಆವುದೆಂದು ಹೇಗೆ ಹೇಳುವುದು ? ನಿತ್ಯಾನಿತ್ಯವೆಂದು ಹೇಗೆ ಹೇಳುವುದು. ಅನಿತ್ಯ ಆವುದೆಂದು ಹೇಳುವುದು, ನಿತ್ಯ ಆವುದೆಂದು ಹೇಗೆ ಹೇಳುವುದು ಅಕಥನೀಯದೋಳ್ ಕಥನ ಮಾಡುವುದು ಇದೊಂದು ವಿಸ್ಮಯ. ನಿಸ್ಸೀಮದೋಳ್ ಸೀಮೆ ಸಂಕಲ್ಪಗಳ ಕಾಣದಿಹುದೆ ಕೂಡಲ ಸಂಗಯ್ಯನೋಳ್ ಭಿನ್ನವಿಲ್ಲದೆ ಕಲಿಯಾದಂತೆ ಅಕ್ಕ . ಇದಕ್ಕೆ ಅಕ್ಕಗಳ ಭಿನ್ನಹ.

**43**

**ಕಾಮನ ಗೆಲಿದೆನಯ್ಯಾ ಬಸವಣ್ಣ ನಿನ್ನ ದಯದಿಂದ.**
**ಸೋಮಧರನ ಹಿಡಿ ತಪ್ಪೆನಯ್ಯ ಬಸವಣ್ಣ ನಿನ್ನ ದಯದಿಂದ.**
**ನಾಮದಲಿ ಹೆಣ್ಣು ರೂಪಲ್ಲದೆ ಭಾವಿಸಲು**
**ಗಂಡು ರೂಪು ನೋಡಾ ಬಸವಣ್ಣ ನಿನ್ನ ದಯದಿಂದ.**
**ಅತಿ ಕಾಮಿ ಚೆನ್ನಮಲ್ಲಿಕಾರ್ಜುನಯ್ಯನಿಗೆ ತೊಡರವನಿಕ್ಕಿ ಕೂಡಿ ಎರಡರಿಯದೆ**
**ಮರೆದೆನಯ್ಯ ಬಸವಣ್ಣ ನಿನ್ನ ದಯದಿಂದ.**

**ತಾತ್ಪರ್ಯ :** ಸಮರಸದೊಡೆಯನೇ ? ಕಾಮನಗೆಲಿದೆನಯ್ಯ ನಿನ್ನ ದಯದಿಂದ. ನೀನು ದೇವ ದೇವ, ಜ್ಞಾನ ಘನ, ಜ್ಞಾನ ನಿಧಿ ಸವೆಯದ ಸುಖದ ನಿಧಿ ಪರಾತ್ಪರ ಪರಮನ ಕರುಣೆಯಾದ ಮೇಲೆ ಸೋಮಧರನ ಹಿಡಿತಕ್ಕೆ ಅದೆಂತು ಒಳಗಾಗುವುದು ? ಚಿದಾಕಾಶ ಸ್ವರೂಪಿ ಚಿದ್ಘನನಾದ ನಿನ್ನ ದಯದಿಂದ ನಾಮದಲಿ ಹೆಣ್ಣು ರೂಪವಲ್ಲದೆ ನಿನ್ನ ಕರುಣೆಯಿಂದ ಗಂಡು ನೋಡಾ ಬಸವೇಶ. ನೀ ದಯಾ ನಿಧಿ ನಿನ್ನ ದಯದಿಂದ ಅತಿ ಕಾಮಿ ಚೆನ್ನಮಲ್ಲಿಕಾರ್ಜುನನ ಸಂಬಂಧವಾಗಿ ಸವೆಯದ ಸುಖದ ಸುಖಿಯಾಗಿ ಎರಡರಿಯದೆ ಮರೆದೆನು. ನಿಃಶಬ್ಧ ಘನ ಗಂಭೀರ ಬಸವ ದೇವ, ನಿನ್ನ ದಯದ ಘನವದೇನು ವರ್ಣಿಸುವುದು. ನಿಸ್ಸೀಮ ಜ್ಞಾನ ನಿರ್ವಿಕಾರ ನಿಲಯ, ಅದನೆಂತುಪಮಿಸುವುದು ? ಅಲ್ಲಿ ಸೀಮೆ ಸಂಕೇತಗಳಿಲ್ಲ, ಉದಯಾಸ್ತವೆಂಬುದಿಲ್ಲದ ನಿರಂತರ ಜ್ಞಾನ ನಿರಾಲಂಬ ಘನ ಜ್ಯೋತಿಯೆ ಸದಾ ಪ್ರಕಾಶಿಸುವಾಗ, ಅಂಗವಾವುದು, ಅಂಗೇಂದ್ರಿಯಂಗಳಾವುವು, ಮನವಾವುದು, ಮನದ ಕಾಮವಾವುದು ? ಬೆಳಕಿಗೆ ಕತ್ತಲೆಯ ಸಂಯೋಗ ಸಂಬಂಧವೆ ?

ಸಚಿದ್ಘನಕ್ಕೆ ಅಜ್ಞಾನ ರೂಪಿ ಕತ್ತಲೆ ಅದರ ಕಾರ್ಯ ರೂಪವಾದ ದೇಹ, ಇಂದ್ರೀಯ, ಪ್ರಾಣ, ಮನ, ಬುದ್ಧಿ, ಚಿತ್ತಾ , ಅಹಂಕಾರಾದಿಗಳ ಸಂಯೋಗವೆ ಸಂಬಂಧವೆ ? ಅಜ್ಞಾನವೆಂದರೆ ಮೊದಲೆ ಇಲ್ಲದ್ದು . ಅಜ್ಞಾನವೆ ಇಲ್ಲದಿರುವಾಗ ಅದರ ಕಾರ್ಯವಾದ ದೇಹ, ಇಂದ್ರಿ, ಜ್ಞಾನ, ಮನ, ಬುದ್ದಿ, ಚಿತ್ತಾ, ಅಹಂಕಾರಗಳುಂಟೆ ? ಮೂಲವೆ ಇಲ್ಲದಿರುವಾಗ ಜೆಡ್ಡು ಎಲ್ಲಿಂದ ಬರುವುದು ? ಅರುವಿನಲ್ಲಿ , ಮರವಿರಲಿಂಬುಂಟೆ ? ಅದರ ಕಾರ್ಯವಾದರೂ ಇರಲಿಂಬುಂಟೆ ? ಇದರ ಸಂಯೋಗವೆಲ್ಲಿ, ಸಂಬಂಧವೆಲ್ಲಿ? ಬಸವೇಶ ನಿನ್ನ ದಯದಿಂದ ಸಚಿದ್ಘನವೇ ಪ್ರಕಾಶಿಸುವುದರಿಂದ ಕಾಮನ ಗೆಲಿದೆನಯ್ಯಾ. ಬಸವ ದೇವಾ ನಿನ್ನ ಸಮ್ಯಜ್ಞಾನದ ದಯವಾಗುವಡೆ ಮರವು ಮರವಿನ ಕಾರ್ಯವಾದ ಮನ. ಮನದ ಕಾರ್ಯವಾದ ಕಾಮನ ಗೆಲಿದೆನಯ್ಯಾ. ಜ್ಞಾನಜ್ಯೋತಿ ಬಸವಣ್ಣ ನಿನ್ನ ದಯೆವೆಂಬುದು ಪರಮಾಮೃತವು. ಪರಮಾಮೃತವೆ ನನ್ನ ಹೃದಯದ ನಿಲಯವಾದಲ್ಲಿ ಮೋಹವೆಲ್ಲಿ? ಸಂಸಾರವೆಲ್ಲಿ? ಕಾಮವೆಲ್ಲಿ? ಅಹಂ ಇಲ್ಲದ ಜ್ಞಾನನಿಧಿ ಜ್ಞಾನದೇವನ ಕೃಪೆಯಾದ ಮೇಲೆ ಮಾಯಿಕದ ತತ್ವವನು ಆರಾದರೂ ಆಲಿಂಗನ ಮಾಡಬಹುದೆ ? ಒಪ್ಪಬಹುದೆ ? ಆ ಮೂರ್ತಿ ಶಶಿಧರ ಮೂರ್ತಿಯೇ ಇರಲಿ, ಆರೇ ಇರಲಿ, ಅದಕ್ಕೆ ಚಿದಾಕಾಶ, ಚಿದ್ಘನವೆನ್ನಬಹುದೆ ? ಮಹಾಲಿಂಗವೆನ್ನಬಹುದೆ ? ಇಲ್ಲದ ಮಾಯಿಕ ಇಲ್ಲದುದು ಅದು ಶಶಿಧರ ಮೂರ್ತಿಯಾಗಿ ಕಂಡರೂ ಅದು ಚಿದಾಕಾಶ ಚಿದ್ಘನವಾಗಿಹುದು ನೋಡಾ ನಿಸ್ಸೀಮವಾದ ನಿನ್ನ ಜ್ಞಾನಾಮೃತದ ಘನ ಮಹಿಮೆಯುಳ್ಳ ದಯೆವೆತ್ತ ? ಮಾಯಿಕದಿಂದ ಒಮ್ಮೆ ತೋರಿ ಒಮ್ಮೆ ಇಲ್ಲವಾಗುವ ಸೋಮಧರನ ಹಿಡಿತಪ್ಪೆನಯ್ಯಾ ಏಕೆಂದರೆ ನಿನ್ನ ನಿಸ್ಸಂಗ ಜ್ಞಾನ ಘನದ ದಯೆವೆತ್ತ,ಈ ಮಾಯಿಕ ಸಂಗದ ಜ್ಞಾನವೆತ್ತ ? ನಿನ್ನ ಸ್ವ ಪ್ರಕಾಶದ ತೇಜಪುಂಜವೆತ್ತ ? ಪರಪ್ರಕಾಶವಾದ ಮಾಯಿಕದ ಘನವೆತ್ತ ? ಬಸವ ಪ್ರಭು ನಿನ್ನ ನಿರುಪಮ ನಿರಾಲಂಬ ಜ್ಞಾನದ ಜ್ಞಾನಾನಂದ ಘನವೆತ್ತ. ತೋರಿ ಕೆಡುವ ವಿಕಾರರೂಪಿ ನಾಮರೂಪಿ ಮಾಯಿಕದ ಜ್ಞಾನವೆತ್ತ ? ದೇವ ದೇವೇಶ ನಿರ್ಮಾಯ ನಿಸ್ಸಂಗ ನಿರಾಲಂಬ ಘನವಾದ ಮಹಾಲಿಂಗ . ಆ ಮಹಾಲಿಂಗ ಭಾವದವಳು ನಾನಾದುದರಿಂದ ನಿಮ್ಮ ಭಾವದವಳು.

ನಾಮದಲಿ ಹೆಣ್ಣುರೂಪವು, ಭಾವದಲಿ ನಿಸ್ಸಂಗ ಭಾವದವಳು, ನಿರ್ಮಾಯ ಭಾವದವಳು, ನಿರಾಲಂಬ ಭಾವದವಳು, ನಿಜಘನದ ಭಾವದವಳಾದುದರಿಂದ ಭಾವಿಸಲು ಗಂಡು ನೋಡಾ. ಈ

ಗಂಡು ರೂಪು ನಿಮ್ಮ ದಯದ ಘನ ನೋಡಾ . ಏಕೆಂದರೆ ನನ್ನ ಭಾವ ಸದ್ಭಾವಕ್ಕೆ ಮಿಥ್ಯೆ ಭಾವದ ಸಂಬಂಧ ಉಂಟೆ ? ನನ್ನ ಭಾವ ಸಮ್ಯಕ ಭಾವ; ಸಮ್ಯಕ ಭಾವದವಳಾದ ನನಗೆ ಭಿನ್ನ ಭಾವವುಂಟೆ ? ವಿಷಮ ಭಾವವಾದರೂ ಉಂಟೆ ? ಅದರ ಸುಳುಹಾದರೂ ಉಂಟೆ ? ವಿಷಯಾಕಾರ ಉಂಟೆ, ವಿಷಯಾಸಕ್ತಿಯಾದರೂ ಉಂಟೆ ? ನೆನಹಾದರೂ ಉಂಟೆ ? ಸುಜ್ಞಾನಕ್ಕೆ ಅವಿಚಾರ ವಿಚಾರದ ಸಂಬಂಧವೇ ? ಪೂರ್ಣ ಭಾವವುಳ್ಳವಳಾದ ನನಗೆ ಮಾಯಿಕದ ಭಾವ ವುಂಟೆ ? ಮಾಯಿಕ ಜ್ಞಾನ ವುಂಟೆ ? ಮಾಯಿಕ ಜ್ಞಾನವೇ ನಶಿಸಿ ಹೋಗಿರುವಾಗ ಅದರ ಕಾರ್ಯವಾದ ಮಾಯಿಕ ನೋಟವಾದರೂ ಉಂಟೆ ? ಚಿದಾಕಾಶ ಭಾವವುಳ್ಳವಳಾದ ನನಗೆ ಚಿಂತನದ ಚಿತ್ತಾ ಇದಾದರೂ ಉಂಟೆ ? ಚಿಂತನದ ಚಿತ್ತಾ ಇರದ್ದರಿಂದ ನಾನು ನಿನ್ನ ದಯದಿಂದ ಅತಿ ಕಾಮಿ ಚೆನ್ನಮಲ್ಲಿಕಾರ್ಜುನಯ್ಯಗೆ ತೊಡರವನಿಕ್ಕಿ ಕೂಡಿ ಎರಡರಿಯದೆ ಮರೆದೆನಯ್ಯಾ. ಅಂದರೆ ಅಕ್ಕ, ಅತಿ ಕಾಮಿ ಚೆನ್ನಮಲ್ಲಿಕಾರ್ಜುನನಿಗೆ ತೊಡರವನಿಕ್ಕಿ ಕೂಡಿರುವುದರಿಂದ ಎರಡರಿಯದಂತಾಗಿದ್ದಾಳೆ.

ಗಂಡು ಹೆಣ್ಣೆಂಬುದು ಅರಿಯದಂತಾಗಿದ್ದಾಳೆ. ಶರಣ ಸತಿ, ಲಿಂಗ ಪತಿ, ಎಂಬ ಈ ದ್ವಂದ್ವ ಭಾವ ಅರಿಯದಂತಾಗಿದ್ದಾಳೆ. ಲೋಕವು ಅತಿಕಾಮಿಗೆ ತೊಡರನಿಕ್ಕುದದರಿಂದ ದ್ವೈತ ದೃಷ್ಟಿ ಹೋಗಿದ್ದಾಗಿದೆ. ದ್ವೈತ ದೃಷ್ಟಿಯು ವಿಷಯಾತ್ಮಕ ದೃಷ್ಟಿ. ಈ ದೃಷ್ಟಿಗೆ ಹೊನ್ನು, ಹೆಣ್ಣು, ಮಣ್ಣು ಈ ಲೋಕದಿಂದ ಹಿಡಿದು ಬ್ರಹ್ಮ ಲೋಕದವರೆಗೂ ಬಹು ಸುಂದರವಾಗಿ ಸತ್ಯವಾಗಿ ಭಾಸಿಸುವುದರಿಂದ ಕಾಮಾಕಾರವು ಸಹಜವು. ಅಕ್ಕನ ದೃಷ್ಟಿ ದಿವ್ಯದೃಷ್ಟಿ, ಅಖಂಡ ದೃಷ್ಟಿ, ಅಖಂಡ ಭಾವ, ಅಖಂಡ ಜ್ಞಾನ, ನೆಲೆಯೂರಿರುವದರಿಂದ ಅತಿಕಾಮಿ ಚೆನ್ನಮಲ್ಲಿಕಾರ್ಜುನಯ್ಯ ತೊಡರನಿಕ್ಕಿದ್ದಾಳೆ , ಸಮರಸದವಳಾಗಿದ್ದಾಳೆ. ಕೂಡಿದ್ದಾಳೆ.

ಲೋಕವು ನಾಮರೂಪಿ ಸಾವುಳ್ಳ , ಕೇಡುಳ್ಳ , ಭಯವುಳ್ಳ , ಭವವುಳ್ಳ ಕಾಮಿಗಂಡನಿಗೆ ತೊಡರನಿಕ್ಕಿದರೆ, ಸಂಗ ಸಂಭಂದವರಾದರೆ, ಅಕ್ಕ ಅಲೌಕಿಕಳಾದುದರಿಂದ ರೂಹಿಲ್ಲದ, ರೂಪಿಲ್ಲದ, ಕೇಡಿಲ್ಲದ, ಭವವಿಲ್ಲದ, ಭಯವಿಲ್ಲದ, ನಿರ್ಭಯ ಚೆಲುವುಳ್ಳ ಅತಿಕಾಮಿ ಚೆನ್ನಮಲ್ಲಿಕಾರ್ಜುನನಿಗೆ ಅಂದರೆ ಸವೆಯದ ಸುಖರೂಪಿ ಚೆನ್ನಮಲ್ಲಿಕಾರ್ಜುನನ ಸುಖಕ್ಕಾಗಿ ಏಕತ್ವವಾದುದೆ ತೊಡರನಿಕ್ಕಿದಂತೆ ಕಾಡಿದಂತೆ. ಆ ಏಕತ್ವದ ಸುಖ ಆಹಹ ಅದು ನಿನ್ನ ದಯೆದ್ದು ಬಸವೇಶ. ಈ ದಯೆ ಸಾಮಾನ್ಯವೆ ? ತನ್ನೊಳ್ ತಾನೇ ತಾನಾಗಿ ತನ್ನಲ್ಲಿ ನಾನರಿದೆನೆಂಬ ರೂಹಿಗೂ ಎಡೆಗೊಡದೆ ಬಿಮ್ಮುಬೀಸರವಾಗಿ ಹಮ್ಮು ಶೂನ್ಯವಾಗಿ ನಿರ್ಮಳ ನಿಜಪದವಾಗಿ ಏನೊಂದುಸುರಲು ಬಾರದ ಘನವಿದುವೆ ಅತಿಕಾಮಿ ಚೆನ್ನಮಲ್ಲಿಕಾರ್ಜುನ ತೊಡರವನಿಕ್ಕಿರುವುದರಿಂದ ಎರಡರಿಯದೆ ಅಂದರೆ ಉಪಮಾತೀತ ಚೆನ್ನಮಲ್ಲಿಕಾರ್ಜುನನನ್ನು ಬೇರೆಂದು ಭಾವಿಸದೆ ತನ್ನಲ್ಲಿಯೆ ಅರಿದು ಅಂದರೆ ತನ್ನ ಸ್ವರೂಪವೆ ಚೆನ್ನಮಲ್ಲಿಕಾರ್ಜುನನ ಸ್ವರೂಪ. ಚೆನ್ನಮಲ್ಲಿಕಾರ್ಜುನನ ಸ್ವರೂಪವೇ ನನ್ನ ಸ್ವರೂಪ. ಚಿದಹಂತ್ವಗೆಡೆಗೊಡದೆ ಭಿಂಕಕ್ಕೆ ಬಲಿಯಾಗದೆ , ಆಡಂಬರಕ್ಕಾಹುತಿಯಾಗದೆ, ನಿಮ್ಮಳ ನಿರಾಲಂಬವೇ ನಿಜಘನವಾದುದರಿಂದ ಎರಡರಿಯದೆ ಮರೆದುದು ಬಸವಣ್ಣ ನಿನ್ನ ದಯದಿಂದ ಎಂದು ಹೇಳಿದ್ದಾಳೆ. ಇಂತು ಅಂಗವಿಕಾರ ಗೆಲಿದು ಲಿಂಗವನು ಏನ್ನೊಳಗೆ ದೃಢವಿಡಿದು ಸರ್ವಾಂಗದೊಳ್ ಏಕವ ಮಾಡಿಕೊಂಡು ನಿಜಗಲಿಯಾಗಿ ಗೆಲಿದೆನೆಂದು ಭಿನ್ನೈಸುವ ಪ್ರಸ್ತಾವದ ವಚನ.

**44**

**ಭಾವಿಸಿ ನೋಡಿದರಂಗವಾಯಿತ್ತು,**

**ಅಂಗಗುಣಗಳನಳಿದ ಬಳಿಕ ನಾನಿನಗಂಗವಾದೆ.**
**ಭಿನ್ನ ರುಚಿಯ ಬಿಟ್ಟು ಲಿಂಗರುಚಿಯಾದ ಬಳಿಕ**
**ಚೆನ್ನಮಲ್ಲಿಕಾರ್ಜುನನ ಕೊಂದು ಸಾವ ಭಾಷೆ.**

**ತಾತ್ಪರ್ಯ** : ಅಣ್ಣಾ ಇದು ಭಾವನೆ ಮಾಡಿದಾಗ ಅಂಗವಾಗಿ ಕಾಣಿಸುತ್ತಿಹುದು. ಭಾವವೆಂಬುವುದು ವಾಸನಾ ದೋಷವು. ಇದು ಅಶುದ್ಧ ವಾಸನೆ ಕೆಡಕುಳ್ಳವಾಸನೆ. ಇದು ನಾನಾ ಬಗೆಯಿಂದುಕ್ತವಾದುದು, ವಿಷಯ ವ್ಯಾಮೋಹ ಬಲಗೊಂಡ ದೃಷ್ಟಿಗೆ ಅಹಂ ಇದಂ ರೂಪಿ ಜಗವು ಸದೃಢ. ಗಂಡು ಹೆಣ್ಣೆಂಬ ನಾಮರೂಪಿ ವಾಸನೆ ಸದೃಢ. ದೇಹ ಭಾವವು ಸದೃಢ. ಮಾಯಿಕ ಲೋಕಂಗಳು ಸದೃಢ. ಅಂಗ ಲಿಂಗ ಬೇರೆಂಬ ಭೇದ ಜ್ಞಾನ ದೃಢವಾಗಿರುವುದರಿಂದ ಬ್ರಹ್ಮ ಪದವಿ, ವಿಷ್ಣು ಪದವಿ, ರುದ್ರ ಪದವಿ, ನಾನಾ ಪದವಿಗಳು ಸತ್ಯವೆಂದು ಸದೃಢವಾಗಿರುವವು. ಇದು ಕಾರಣ ಜೀವನಿಗೆ ವಾಸನೆಯಂತೆ ಮತಿ, ಮತಿಯಂತೆ ಗತಿಯು ಎಂಬುದು ನಿಶ್ಚಯವಾಗಿಹುದು. ವಾಸನೆ ಎಂಬುದು ಅಂತರದೊಳ್ ಬಲಗೊಂಡು ಲೋಕ ದೃಷ್ಟಿಗೆ ಸಮಾಧಿ ಪುರುಷನಂತೆ ತೋರಿದರೂ ಅಂಗವಿಕಾರವಳಿಯದು. ಕಾರಣ ಭಾವಿಸಿ ನೋಡಿದರಂಗವಾಯಿತ್ತು. ವಾಸನೆಯಿಂದ ಅಂಗ ವಾಸನೆ, ಭವ ವಾಸನೆಯಿಂದ ಭಾವ ವಾಸನೆಯು ದಗ್ದವಾಗುವುಡೆ ಭವದಿಂದ ವಿರಹಿತ ಶುದ್ಧವಾಸನೆಯಿಂದ ಲಿಂಗಾನುಭವವು ಲಿಂಗಾನುಭವದ ಸುಖವಳವಡಲು ಅಂಗಗುಣ ನಷ್ಟವು. ಅಂಗಗುಣಂಗಳು ನಷ್ಟವಾಗಿ ನಾ ನಿನಗಂಗವಾದೆ. ಅಂದರೆ ನನ್ನ ಅಂಗ ಲಿಂಗಾಂಗ, ಜ್ಞಾನಾಂಗ, ಬೆಳಗಿನ ಅಂಗ. ಬೆಳಕಿನ ದರ್ಶನದಿಂದ ಅಂಧಕಾರವು ನಷ್ಟವು. ಲಿಂಗದರ್ಶನದಿಂದ ಅಂಗ ಗುಣಗಳು ನಷ್ಟವು. ನಿನ್ನ ಲಿಂಗಾಂಗ ಸಮರಸ ಜ್ಞಾನವುಳ್ಳವಳಾಗಿರುವುದರಿಂದ ಅಂಗಗುಣ ಕಾಣವು. ದೀಪದ ಮುಂದೆ ಕತ್ತಲೆ ಇರಬಹುದೆ?

ಬಸವಣ್ಣ ನಿನ್ನ ದಯದಿಂದ ಲಿಂಗ ಘನತ್ವವು ಅಳವಟ್ಟುದರಿಂದ ಅಂಗಗುಣಗಳು ಅಳಿದು ನಾ ನಿನಗಂಗವಾದಾಗ ಅಲ್ಲಿ ಭಿನ್ನ ರುಚಿಗೆ ಪ್ರೇಮ ಮಾಡುವದದೆಂತು ? ಭಿನ್ನ ರುಚಿಯದು ಅವಾಸ್ತವ ರುಚಿ, ವಿಕಾರ ರುಚಿ, ವಿಷಯ ರುಚಿ, ಕ್ಷಣಕಾಲದ ರುಚಿ. ಅದು ತೋರಿ ಕೆಡುವ ವಿಷಯ ಭೋಗ ರುಚಿ. ಇದು ವಿಷಮ ರುಚಿ, ವ್ಯಸನದ ರುಚಿ. ಈ ರುಚಿಯ ಬಿಟ್ಟು ನಿಸ್ಸೀಮವಾದ ಚಿನ್ಮಯ ರೂಪಿ ಲಿಂಗ ಸುಖದ ರುಚಿ, ಕೇಡಿಲ್ಲದ ರುಚಿ, ನಿತ್ಯ ರುಚಿ, ನಿರ್ಭಯ ರುಚಿ, ಅಖಂಡ ರುಚಿ, ಸವೆಯದಾನಂದದ ರುಚಿ, ಏನೆಂಬೆ ಏನೆಂಬೆ! ಅಲ್ಲಿ ಭರಿತ ಭಾವವು ನೆಲೆಗೊಂಡಿರುವುದರಿಂದ ಭಾವವು ಲಿಂಗ ರುಚಿವುಳ್ಳದ್ದು, ಅನಾಮವು ಲಿಂಗ ರುಚಿ ಉಳ್ಳದ್ದು. ರೂಪವು ಲಿಂಗ ರುಚಿಯೆ, ಅರೂಪವು ಲಿಂಗರುಚಿಯೆ, ಘನ ಲಿಂಗದೊಳ್ ಅನ್ಯವಿರಲಿಂಬೆಲ್ಲಿಯದು? ಅಲ್ಲಿ ಹೃದಯವೇ ಲಿಂಗ ಸುಖದ ನಿಜ ನಿವಾಸವಾಗಿರುವುದರಿಂದ ಅಲ್ಲಿ ನಾನತ್ವಕ್ಕಿಂಬಿಲ್ಲ . ಘನಲಿಂಗದ ಸವೆಯದ ಸುಖ ಸವಿಯುವಂಗೆ ಅದಾವ ಫಲದಾಸೆ, ಅದಾವ ವಿಷಮ ದೃಷ್ಟಿ, ಅದಾವ ವಿಷಮ ಭಾವವಿರಬೇಕು ?

ಎಲ್ಲಿ ನೋಡಿದಡಲ್ಲಿ ಘನ ಲಿಂಗ ದರ್ಶನವಾದಬಳಿಕ ಲಿಂಗ ರುಚಿಯೆ ಅಹಂ, ಆ ಲಿಂಗ ರುಚಿಯೆ ಸಮ ಅಸ್ಮಿಯಾಗಿದೆ. ಲಿಂಗವೇ ಅಂಗ ಲಿಂಗರುಚಿಯೇ ಅಂಗೇಂದ್ರಿಯಂಗಳು, ಸರ್ವಾಂಗವು ಲಿಂಗ ರುಚಿಯಾದ ಬಳಿಕ ಏನೆಂಬೆ ಏನೆಂಬೆ ಲಿಂಗದ ಘನ ರುಚಿ ಅರಿಯರಲ್ಲ,

ಜಲನಿಧಿಯಾದ ಸಮುದ್ರದೊಳ್ ತೆರೆಗಳು ತೋರಿ ಅಳಿಯುವವು ಎಂದೆನಿಸಿದರೂ ಜಲಕ್ಕಿಂತ ಅನ್ಯವಲ್ಲ. ಲಿಂಗಸುಖದೊಳ್ ಅಂಗಾಂಗರೂಪವಾದ ಪ್ರಿಂಡಾಂಡ ಬ್ರಹ್ಮಾಂಡ ರೂಪಿ ತೆರೆಗಳುತ್ಪತ್ತಿಯಾಗಿ ಅಳಿದರೂ ಲಿಂಗದೊಳ್ ಲಿಂಗ ರುಚಿಗಿಂತ ಅನ್ಯವಲ್ಲ. ಜಲದೊಳ್ ತೆರೆಗಳು

ಒಂದಕ್ಕೊಂದು ತಾಕಿ ನಶಿಸಿದರೆ ಆದದ್ದೇನು ? ಮೃತ ದೇಹ ರೂಪಿ ಹುರುಳೇ ಅಥವಾ ಮೃತ ರೂಪಿ ಮೃತ್ಯುವಿಗೆ ತಾಕಿ ನಶಿಸಿದರೆ ಆದದ್ದೇನು ? ಅಂದರೆ ಲಿಂಗಕ್ಕಾದದ್ದೇನು ? ಅಖಂಡವು ಖಂಡವಾಗಿರುವುದೇ ? ಖಂಡವಾಗದಿದ್ದಲ್ಲಿ ಆರನ್ನಾದರೂ ತಾಕಿದರೂ ಮೃತ ದೇಹವೆಲ್ಲಿ ? ಮೃತ ರೂಪಿ ಮೃತ್ಯುವೆಲ್ಲಿ ? ಜಲದಿಂದ ಉದಯಿಸಿ ತೆರೆಗಳು ಒಂದಕ್ಕೊಂದು ತಾಕಿ ಸಂಗಮವಾಗಿ ಕಾಣದಿದ್ದರೆ ಜಲವಲ್ಲದೆ ಮತ್ತೊಂದು ಆಗಿರುವವೆ ?

ಘನಲಿಂಗದಲ್ಲಿ ಕಲ್ಪನೆಯಿಂದ ನಾನಾ ಅಂಗಾಂಗಗಳಾಗಿ ತೋರಿದರೂ ಲಿಂಗವಲ್ಲದನ್ಯವಲ್ಲವು. ಇದುವೇ ಖಂಡಿತವಿಲ್ಲದ ಅಖಂಡರೂಪಿ ಲಿಂಗಯ್ಯನ ರುಚಿ ತನ್ನ ಸ್ವಸುಖದ ರುಚಿ, ತನ್ನ ಸ್ವಸುಖರೂಪಿ ರುಚಿ, ತನ್ನ ರುಚಿ, ತನ್ನ ರುಚಿಯೋಳ್ ತಾನೇ ಮಗ್ನನಾಗಿ ತನ್ನ ಘನತ್ವವರಿಯುವದೆ ಜ್ಞಾನವಾನರ ಘನತ್ವ . ಅಲ್ಲಿ ತಾನೆಂಬುವದಿಲ್ಲ , ಅನ್ಯವೆಂಬುವುದಿಲ್ಲ . ಸುವರ್ಣದೋಳ್ ಭೂಷಣವು, ಅಬೇಧರೂಪವು. ಜಲದೋಳ್ ತೆರೆನೊರೆಗಳ್ ಅಬೇಧರೂಪವು. ಲಿಂಗದೋಳ್ ನಾನು ನೀನೆಂಬ ಭಾವವಾದರೂ ಲಿಂಗರೂಪವು, ಈ ದೃಷ್ಯರೂಪ ಜಗವಾದರೂ ಲಿಂಗರೂಪವು. ಇದು ಕಾರಣ ಲಿಂಗ ಅಂಗವೆಂಬುದು, ಸ್ವಲ್ಪಾದರೂ ಭೇದವಿಲ್ಲವಾದ್ದರಿಂದ ಸಮ್ಯಜ್ಞಾನಿಯಾದ ದಿವ್ಯ ದೃಷ್ಠಿಗೆ ಸರ್ವವು ಲಿಂಗಮಯವೆಂಬುದು ಸದಾ ನಿಶ್ಚಯವು. ಪ್ರಮಾದದಿಂದ ಅಜ್ಞಾನಿಗೆ ವಿಪರೀತವಾಗಿ ಕಂಡರೂ ವಾಸ್ತವದೋಳ್ ಲಿಂಗಮಯವೆಂಬುದು ಅನಾಮಯವಾದ ಪರಮಾನಂದದ ಏಕರಸವು.

ಹಗ್ಗವು ಒಂದೇ ಇದ್ದರೂ ನಸುಗತ್ತಲೆಯಲ್ಲಿ ಸರ್ಪವಾಗಿ ಭಾಸಿಸುವದು. ಬೆಳಕಿನಲ್ಲಿ ನಿಜರೂಪಿ ಹಗ್ಗವು ಭಾಸಿಸುವುದು. ಸದಮಳ ಜ್ಞಾನಿಗೆ ಸಕಲವು ಚಿನ್ಮಯವಾಗಿ ಭಾವಿಸುವುದು ಇದುವೆ ಬ್ರಮಾತ್ಮಕನಿಗೆ ನಾನಾ ನಾಮರೂಪವಾಗಿ ತೋರುವದು. ಅಂಧಕಂಗೆ ಎತ್ತನೋಡಿದಡತ್ತ ಕತ್ತಲೆ ಕಾಣುವುದು. ಸಹಜ ಕಣ್ಣು ವುಳ್ಳವನಿಗೆ ಎತ್ತ ನೋಡಿದಡತ್ತ ಪ್ರಕಾಶಮಯವೆ ಪ್ರಕಾಶಸಿಸುವುದು ಹೇಗೋ ಹಾಗೆ ಲಿಂಗ ರುಚಿಯುಳ್ಳವಳಾದ ಆನು ನಿನ್ನ ದಯದಿಂದ ಅನಾಮಯವಾಗಿರುವ ನಿರ್ವಾಣ ಘನವೆ ತುಂಬಿ ತುಳುಕುತ್ತಿರುವಾಗ ಶರಣ ಸತಿ ಲಿಂಗ ಪತಿ ಉಭಯ ಭಾವಕ್ಕಿಂಬಿಲ್ಲವಾದುದರಿಂದ ಚೆನ್ನಮಲ್ಲಿಕಾರ್ಜುನನ ಕೊಂದು ನಾನು ಸತ್ತ ಸಾವಿನ ಭಾಷೆ ತಂದೆ ಎಂದು ಹೇಳಿದ್ದಾಳೆ.

**45**

**ಅಳಿವನಲ್ಲ, ಉಳಿವನಲ್ಲ, ಪ್ರಳಯವೆಂಬುದ ಮುನ್ನರಿಯನು.**
**ಕಳಾಕುಳರಹಿತನು, ಉಭಯ ಕುಳರಹಿತನು,**
**ಅರುವ ಬೈಚಿಟ್ಟು ಮರೆವ ಗಮನನಲ್ಲ,**
**ಕೂಡಲ ಸಂಗಯ್ಯನೆಂಬ ಶಬ್ದ ಮುಗ್ಧನ**
**ಭಾವದ ಬಳಲಿಕೆಯಲ್ಲಿ ಗೆಲ್ಲಬಹುದೇ ಹೇಳಾ.**

**ತಾತ್ಪರ್ಯ :** ಅಕ್ಕ ಕೂಡಲ ಸಂಗಯ್ಯನೆಂಬ ಶಬ್ದ ಮುಗ್ಧನ ಭಾವದ ಬಳಲಿಕೆಯಲ್ಲಿ ಗೆಲ್ಲಬಹುದೆ. ಅಕ್ಕಾ, ಸರ್ವ ಮಂಗಳಮಯ ನಿರಂತರ ಇದ್ದಕ್ಕಿದ್ದಂತಿದ್ದ ಸಚಿದ್ಘನ ಅಳಿವನಲ್ಲ , ಉಳಿವನಲ್ಲ, ಪ್ರಳಯವೆಂಬುದು ಮುನ್ನರಿಯನು, ನಾಮ ರೂಪದಿಂದದುಕ್ತವಾದುದು ಅಳಿವುದು ಉಳಿವುದು ಪ್ರಳಯಕ್ಕೊಳಪಡುವದು. ನಾಮವು ರೂಪವುಳ್ಳದ್ದಾಗಿರುವುದು. ರೂಪವು ಅಳಿದಂತಾಗಿ

ಪ್ರಳಯಕ್ಕೊಳಪಟ್ಟು ಭಾವಕ್ಕಿಂಬಾಗಿರುವದು, ಕಲೆಯುಳ್ಳದ್ದಾಗಿ ಕುಲವುಳ್ಳದ್ದಾಗಿ ಕಾಣಿಸುವುದು. ಅರೂಪವು ಅಭಾವದಿಂದುಕ್ತವು. ಕೂಡಲ ಸಂಗಯ್ಯ ರೂಪನಲ್ಲ , ಅರೂಪನಲ್ಲ , ಅವಾವ ಕಲೆಯಿಂದುಕ್ತನಲ್ಲ, ಕುಲದಿಂದುಕ್ತನಲ್ಲ, ಭಾವದಿಂದುಕ್ತನಲ್ಲ, ಅಭಾವದಿಂದುಕ್ತನಲ್ಲ, ಕಲ್ಪಿತನಲ್ಲ, ಕಲ್ಪನೆಗೊಳಪಡುವವನಲ್ಲ , ಅಂದರೆ ಭಾವದಿಂದ ಬಂಧಿತನಲ್ಲ , ಸಂಗಿಯಲ್ಲ , ಮೋಹಿಯಲ್ಲ , ರೂಪಾರೂಪನಲ್ಲ , ನುಡಿಗಿಂಬಿಲ್ಲ , ನಡೆಗಿಂಬಿಲ್ಲ , ಆರಂಭ ಮುಕ್ತಾಯ ಮುನ್ನಿಲ್ಲ . ಕುರುಹು ಕೂನದ ಸುಳುಹು ಇಲ್ಲ. ಶೂನ್ಯಾಶೂನ್ಯನೆಂಬುದಿಲ್ಲ. ನಿರಂತರವಾದ ಸರ್ವಮಂಗಳಮಯವಾದ ಅಬಾಧಿತ ಘನ . ಅಲ್ಲಿಆದಿ ಇಲ್ಲ, ಅಂತ್ಯವಿಲ್ಲ. ಶಬ್ದಮುಗ್ದನೆಂಬುದು ಸರ್ವ ಮಂಗಳ ಮಯವಾದ ನಿರಂತರ ತತ್ವವದು. ಅದು ಅಖಂಡ ಅಪಾರ ಅದ್ವಿತೀಯ ಅಚಿಂತ್ಯವಿರುವಾಗ ಅದನ್ನು ವಿಭಾಗ ಮಾಡಿ ಭಾವದ ಬಳಲಿಕೆಯಿಂದ ಗೆಲ್ಲಬಹುದೆ ? ತಿಳಿಯಬಹುದೆ, ಕಲ್ಪನೆಯಿಂದ ಕಲ್ಪಿಸಬಹುದೆ, ಚಿಂತನದಿಂದ ಚಿಂತಿಸಿ ನಿಶ್ಚಿಂತ ವಾಗಬಹುದೆ ? ಅದ್ವಿತೀಯವು ಎರಡಾದುದೆ ? ಎರಡಾಗದಿದ್ದಲ್ಲಿ ಅದನ್ನು ಭಾವದ ಬಳಲಿಕೆಯಿಂದ ಗೆಲ್ಲಬಹುದೆ ?

ಅರುವೆಂಬುದು ಬಚ್ಚಿಡುವ ವಸ್ತುವಲ್ಲ. ಅದು ನಿಸ್ಸೀಮ, ಪ್ರಕಾಶಮಯ, ಜ್ಞಾನ ಸ್ವರೂಪ ಜ್ಞಾನಾನಂದಮಯ. ಬಯಲು ಬಯಲೆ. ಆ ಬಯಲನ್ನು ಅದಾರು ಬಚ್ಚಿಡಬೇಕು, ಮನೆಯೊಳಗಿರುವ ಬಯಲು ಅದು ಬಚ್ಚಿಡಲು ಬಾರದಿರುವಾಗ ಮಹಾಕಾಶವನ್ನು ಬಚ್ಚಿಡುವುದು ಹೇಗೆ ? ಬಯಲು ಬಚ್ಚಿಡುವ ಬದುಕು ಹೇಗೆ ಅಲ್ಲವೋ ಹಾಗೆ ಸರ್ವಮಂಗಳಮಯವಾದ ಅರುವು, ಒಳಹೊರಗೆನ್ನದೆ ಭರಿತವಾದ ಅರುವು, ಅದನ್ನಾರಾದರು ಕಾಣಗೊಡದಂತೆ ಮಾಡಬಹುದೆ ?

ಅರುವೆಂಬುದು ಅರುಸ್ವರೂಪ, ಅದು ಅಪಾರ, ಅದು ಕೊನೆ ಮೊದಲಿಲ್ಲದುದು. ನಿಸ್ಸೀಮವಿರುವಲ್ಲಿ ಅದನ್ನಾರು ಬಚ್ಚಿಡುವರು. ಏಕೆಂದರೆ ಅದರ ಹೊರತು ಅನ್ಯ ಆವುದು ಇಲ್ಲದಿರುವಾಗ ತಾನೆ ತಾನಾದ ಸ್ವಮಹಿಮೆ, ಅದನ್ನು ಬಚ್ಚಿಡುವದು ಹೇಗೆ ? ಮತ್ತು ಮರೆಯಲು ಇಂಬಾದರು ಅದೆಲ್ಲಿಯದು ? ಅರಿಯಲಾದರೂ ಇಂಬೆಲ್ಲಿಯದು ? ಹಾಗೂ ಅದು ಗುಪ್ತರೀತಿಯಿಂದ ಪ್ರಕಾಶಿಸುವ ವಸ್ತುವಲ್ಲ.

ಒಳಹೊರಗೆನ್ನದೆ ಪ್ರಕಾಶಿಸುವ ಸ್ವಯಂ ಪ್ರಕಾಶ, ಅಲುಪ್ತ ಪ್ರಕಾಶ. ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತಿದ್ದ ಅಲುಪ್ತ ಪ್ರಕಾಶ. ಅಲ್ಲಿ ವ್ಯಕ್ತ ಅವ್ಯಕ್ತವೆಂಬ ವಿಚಾರಕ್ಕಿಂಬಿಲ್ಲ, ವಿಭಾಗಕ್ಕಿಂಬಿಲ್ಲ ಇದು ಏಕವಾದ ನಿರಂತರ ಏನೊಂದಾಗದ ಘನ ನಿಶ್ಯಬ್ದ ಘನ. ಅಲ್ಲಿ ಕಾಯಗೊಂಡವರಿಲ್ಲ , ಕಾಯಬಯಲಾದವರಿಲ್ಲ , ಸಾವಯವವೆಂಬುವುದಿಲ್ಲ , ನಿರವಯವೆಂಬುದಿಲ್ಲ , ಅರಿತವರು, ಮರೆತವರು, ಎಂಬ ವಿಭಾಗ ಮುನ್ನಿಲ್ಲ , ಪುರವಿಲ್ಲ , ಪುರುಷನಿಲ್ಲದುದರಿಂದ ದೇವಲೋಕವೆಂಬುದಿಲ್ಲ , ದೇವತಾಗಣ ಸಮೂಹಯಿಲ್ಲ , ದೇವತಾ ಪದವಿಲ್ಲ . ಕರ್ತೃವಿಲ್ಲ , ಅಕರ್ತೃವಿಲ್ಲ , ಬದುಕಿದವರಿಲ್ಲ ಸತ್ತವರಿಲ್ಲ , ವಿಧಿಯಿಲ್ಲ ನಿಷೇಧವಿಲ್ಲ , ಅರ್ಚನೆಯಿಲ್ಲ ಅನುಷ್ಠಾನವಿಲ್ಲ, ಧ್ಯಾನವಿಲ್ಲ ಮೌನವಿಲ್ಲ.

ಅರಿಯದರವು ಅದುವೇ ಕೇವಲ ಅರುವು. ಅದು ಖಂಡಿತವಿಲ್ಲದ ಅಖಂಡ. ಇದಕ್ಕೆ ಅಂತರವಿಲ್ಲ , ಬಹಿರ್ ಇಲ್ಲ, ವಿವೇಕಕ್ಕಿಂಬಿಲ್ಲ , ಅವಿವೇಕಕ್ಕಿಂಬಿಲ್ಲ . ಇದು ಸಾವಯವ ಎನ್ನಲು ಬರದು ನಿರವಯ ಎನ್ನಲು ಬರದು, ನಿಸ್ಸೀಮ ಘನ ಮೇರೆದಪ್ಪಿದ ಘನ, ನಿರಾಲಂಭ ಘನ, ಇದು ತನಗಿಂತ ದೂರವಲ್ಲ, ಸಮೀಪವಲ್ಲ, ತನ್ನೊಳಗಲ್ಲ, ಹೊರಗಲ್ಲ, ಮೇಲಲ್ಲ, ಕೀಳಲ್ಲ, ತನಗಿಂತ ಭಿನ್ನವೂ ಅಲ್ಲ, ಅಭಿನ್ನವೂ ಅಲ್ಲ.

ತಾನೇ ತಾನಾದ ಘನವಾದುದರಿಂದ ಶೃತಿಗಳಿಗಗೋಚರ ತಾನೇ. ನಿಶ್ಯಬ್ದ ಘನ ಗಂಭೀರ ತಾನೆ. ಅನುಪಮನನ್ನು ಉಪಮಿಸುವುದೆಂತು ? ಉಪಮಿಸಲು ಭಾರದ ಘನವು ನೋಡಲಿ ಕೇಳಲಿ, ಸ್ಪರ್ಶಿಸಲಿ, ಉಂಟು ಮಾಡಲಿ, ಸರ್ವ ಕ್ರಿಯೆಯೋಳ್ ಕರ್ಮದಿಂದುಕ್ತವಾಗಿದ್ದರೂ ಅದು ನಿಶ್ಯಬ್ದ ಘನ ಗಂಭೀರವಾದುದರಿಂದ ಅದನ್ನು ಭಾವದ ಬಳಲಿಕೆಯಲ್ಲಿ ಗೆಲ್ಲೋದು ಹೇಗೆ ಸಾಧ್ಯ ? ಎಲೆ ಅವ್ವಾ.

ಇದಕ್ಕೆ ಮಹಾದೇವಿಯಕ್ಕನ ಉತ್ತರ.

**46**

**ಅಂಗದೊಳಗೆ ಅಂಗವಾಗಿ ಅಂಗ ಲಿಂಗೈಕ್ಯವ ಮಾಡಿದೆ.**
**ಮನದೊಳಗೆ ಮನವಾಗಿ ಮನ ಲಿಂಗೈಕ್ಯವ ಮಾಡಿದೆ .**
**ಭಾವದೊಳಗೆ ಬಾವವಾಗಿ ಭಾವ ಲಿಂಗೈಕ್ಯವ ಮಾಡಿದೆ.**
**ಅರುವಿನೊಳಗೆ ಅರುವಾಗಿ ಜ್ಞಾನ ಲಿಂಗೈಕ್ಯವ ಮಾಡಿದೆ.**
**ಕ್ರೀಗಳೆಲ್ಲವ ನಿಲಿಸಿ ನಿಃಕ್ರಿಯಳಾಗಿ ನಿಷ್ಪತ್ತಿ ಲಿಂಗೈಕ್ಯವ ಮಾಡಿದೆ.**
**ನಾನೆಂಬುದು ನಿಲಿಸಿ ನೀನೆಂಬುದು ಕೆಡಿಸಿ ಉಭಯ ಲಿಂಗೈಕ್ಯವ ಮಾಡಿದೆ.**
**ಚೆನ್ನಮಲ್ಲಿಕಾರ್ಜುನನೊಳಗೆ ನಾನಳಿದೆನಾಗಿ**
**ಲಿಂಗವೆಂಬ ಘನವು ಎನ್ನಲ್ಲಿ ಅಳಿಯಿತ್ತು ಕಾಣಾ ಬಸವಣ್ಣ.**

**ತಾತ್ಪರ್ಯ :** ಲಿಂಗೈಕ್ಯದ ವಿಚಾರದಲ್ಲಿ ಭಿನ್ನಭಿನ್ನಮತೀಯರು ಭಿನ್ನ ಭಿನ್ನರೀತಿಯಲ್ಲಿ ತಿಳಿಯುತ್ತಾರೆ. ಕೆಲಬರು ದೇಹಬಿಟ್ಟ ಮೇಲೆ ಅವರು ತಮ್ಮ ತಮ್ಮ ಮತಾನುಸಾರ ಪೂಜೆ ಪಾರಾಯಣ ಅನುಷ್ಠಾನದ ಬಲದಿಂದ ವೈಕುಂಠ ಸೇರುವರು. ಬ್ರಹ್ಮ ಲೋಕವ ಸೇರುವರು. ಸ್ವರ್ಗವ ಸೇರುವರು. ಶಿವಾದೀನರಾಗುವರು. ಬಯಲೋಳ್ ಬೆರೆತು ಬಯಲಾದರು. ಲಿಂಗೈಕ್ಯರಾದರೆಂದು ಹೇಳುವ ಪರಿಪಾಠ ಬಹುಜನರಿಗೆ ಇದೆ.

ಕೆಲಬರು ಪ್ರಾಣಾಯಾಮ ಸಾಧನೆಯ ಬಲದಿಂದ ಕೇವಲ ಕುಂಬಕ ಕ್ರಿಯೆಯನ್ನು ಬಲಿಸಿ ಬ್ರಹ್ಮಚಕ್ರವಾದ ನೆತ್ತಿಯಿಂದ ಅಂದರೆ ಬ್ರಹ್ಮರಂಧ್ರದ್ವಾರ ಪ್ರಾಣವಾಯು ಹೋದರೆ ಅಂತವರೆ ಲಿಂಗೈಕ್ಯ ಎಂದು ಹೇಳುವರು. ಇನ್ನು ಕೆಲಬರು ಯೋಗ ಸಿದ್ಧಿಯಿಂದ ಸಹಸ್ರಾರು ವರ್ಷಗಳವರೆಗೂ ತಮ್ಮ ಪ್ರಾಣವಾಯುವನ್ನು ಮಸ್ತಕದಲ್ಲಿ ಅಂದರೆ ಶಿಖಾಚಕ್ರದಲ್ಲಿ ಸ್ಥಿರಗೊಳಿಸಿ ಲಂಬಿಕಾ ಯೋಗದಿಂದ ಬಹುಕಾಲದವರೆಗೂ ಶರೀರ ಉಳಿಸಿಕೊಂಡು ಲೋಕದೆಚ್ಚರ, ದೇಹದೆಚ್ಚರ ಇಲ್ಲದವರಿಗೆ ಲಿಂಗೈಕ್ಯರೆಂದು ಹೇಳುವರು.

ಆದರೆ ಇವರೆಲ್ಲ ಲಿಂಗೈಕ್ಯದ ಘನ ಬಲ್ಲವರೆ ? ದೇಹಭಾವಿಗಳು; ಆವರ್ಣದಿಂದುಕ್ತರು ಅಪ್ರಬುದ್ಧರು. ತಾವಾರೆಂದರಿಯದವರು. ಇವರಿಗೆ ಶ್ರೀ ಗುರು ಸ್ವಾಮಿಯ ದರ್ಶನವಿಲ್ಲ ಗುರುಕಾರುಣ್ಯವಿಲ್ಲ. ಗುರುಕರುಣೆಯಿಲ್ಲದೆ ಲಿಂಗಾಂಗ ಸಮರಸ ಸುಖ ಅದೆಂತು ಸಾಧ್ಯ ? ವಿಶ್ವಾಸವೆ ಭಕ್ತಿ. ಗುರು ಲಿಂಗ ಜಂಗಮ ಒಂದೇ ಎಂದರಿವುದೇ ಜ್ಞಾನ. ನಿರ್ವಂಚನೆಯೇ ವೈರಾಗ್ಯ. ಇದು ಸತ್ಯ. ಸರ್ವ ಮಂಗಳಮಯವಾಗಿರುವ ನಿರಂತರ ಸಚಿದ್ಘನ. ಈ ಪರಮ ಸತ್ಯದ ಸಾಕ್ಷಾತ್ಕಾರವಿಲ್ಲದೆ ಲಿಂಗೈಕ್ಯವೆಂಬುದು ಬರಿಯ ಭಾವಕೂಟವಾಯಿತಲ್ಲದೆ ಲಿಂಗಾಂಗ ಕೂಟವಾಗಲಿಲ್ಲ. ಈ ಲಿಂಗಾಂಗ ಕೂಟ ಸ್ವಯ ಕೂಟ. ತಾನಾರೆಂಬರುವಿನ ನಿಜದ ನಿಲಯ, ಸ್ವಾನುಭಾವ ನಿಲಯ, ಈ ನಿಜಾತ್ಮ

ನಿಲಯವುಳ್ಳ ಲಿಂಗೈಕ್ಯ ದೇಹ ಬಿಟ್ಟ ಮೇಲೆ ತಮ್ಮ ತಮ್ಮ ಮತಾನುಸಾರ ಪೂಜೆ ಪಾಠ ಪಾರಾಯಣ ವ್ರತ ನಿಯಮ ಕ್ರಿಯಾಧಿಗಳಿಂದ ಪ್ರಾಪ್ತವಾಗುವುದೆಂಬುದು ಬರಿಯ ಭ್ರಾಂತಿ. ಏಕೆಂದರೆ ಲಿಂಗೈಕ್ಯವೆಂಬುದು ನಿಸ್ಸೀಮ ನಿಜಾನಂದ ಘನ. ಈ ಘನ ಸುಖ, ಬ್ರಹ್ಮ ಲೋಕ, ಶಿವಲೋಕ, ವೈಕುಂಟಾದಿಲೋಕ ಸೇರಿದವರಿಗಷ್ಟೆ ಎಂಬ ಅಂಧ ಶ್ರದ್ಧೆ ಬಹುಜನರಿಗೆ ಇದೆ.

ಆದರೆ ಈ ಅಂಧ ಶ್ರದ್ಧೆಗು ಬ್ರಹ್ಮ ಲೋಕವನ್ನು ವಿಭಾಗ ಮಾಡಿ ಹೇಳುವ ಮಾಯಿಕ ಜ್ಞಾನಕ್ಕೆ ಮೋಸವೋಗಬಾರದು. ಕಾರಣ ಶಿವ ಜೀವ ರೇಕತ್ವವಿಚಾರ,ಲಿಂಗಾಂಗ ಸಮರಸ ವಿಚಾರ, ಅಖಂಡನ ವಿಚಾರ, ತಾನಾರೆಂಬ ವಿಚಾರ, ಯತಾರ್ಥ ವಿಚಾರ. ಈ ವಿಚಾರ ಒಳಹೊರಗೆನ್ನದೆ ಭರಿತವಾದ ಪರಾತ್ಪರ ಪರಮನ ವಿಚಾರ, ಅಖಂಡ ವಿಚಾರ.

ಈ ಲಿಂಗಾಂಗ ಸಮರಸ ರೂಪಿ ಅಖಂಡ ಭಾವವುಳ್ಳ ಭೋಧವನ್ನು ಶ್ರದ್ಧೆಯಿಂದ ತಿಳಿದರೆ, ಅಂಥ ಶ್ರದ್ಧೆಯುಳ್ಳ ಲಿಂಗೈಕ್ಯವು ದೇಹ ಬಿಟ್ಟ ಮೇಲೆ ಅಲ್ಲಿ ಅಂದರೆ ಪೂಜೆ ಪಾಠ ಪಾರಾಯಣ ವ್ರತ ನಿಯಮಗಳ ಕಟ್ಟಳೆಯ ಆಚಾರದಿಂದ ಬ್ರಹ್ಮ ಲೋಕದಲ್ಲಿ ಪ್ರಾಪ್ತವಾಗುವುದೆಂಬ ಮೋಸ ಬುದ್ದಿ ಉಳಿಯಬಾರದೆಂದೆ ಅಕ್ಕ ಲಿಂಗೈಕ್ಯದ ಘನತ್ವವನ್ನು ಜೀವಂತ ಬದುಕ್ಕಿದ್ದಾಗ ಅದರ ಘನತ್ವ ತನ್ನ ಪ್ರಸಾದ ವಾಣಿಯಿಂದ ಹೇಳಿದ್ದಾಳೆ.

**ಅಂಗದೊಳಗೆ ಅಂಗವಾಗಿ:** ಅಂದರೆ ಸಕಲರ ದೃಷ್ಟಿಗೆ ಕಾಣುವ ಪಂಚಭೂತಾತ್ಮಕ ಅಂಗ. ಇದು ಅಜ್ಞರ ದೃಷ್ಟಿಗೆ ತೋರುವ ಅಂಗ. ಇದು ಅಶುದ್ಧ ವಾಸನಯುಕ್ತ ಅಂಗ, ಇದು ಸುಜ್ಞಾನಿಗಳ ದೃಷ್ಟಿಯಲ್ಲಿ ಕಾಣಿಸಿದ ಅಂಗ. ಇದು ಭ್ರಾಂತಿರೂಪ ಅಂಗ.

ಅದಕ್ಕಾಗಿ ಲೋಕ ದೃಷ್ಟಿಗೆ ಕಾಣಿಸುವ ಅಂಗ ಅಂಗವಲ್ಲ . ಲಿಂಗಾಂಗ ಸಮರಸ ಜ್ಞಾನದಿಂದುಕ್ತವಾದ ಅಂಗವೇ ಅಂಗ. ಈ ಅಂಗವಾದರೂ ಅನಂತ ಜನ್ಮಂಗಳ ಸುಕೃತದಿಂದ ಹಾಗೂ ಶ್ರೀ ಗುರುವಿನ ಒಲುಮೆಯಿಂದ ಪ್ರಾಪ್ತವಾಗುವ ಅಂಗ ಈ ಅಂಗದ ಘನವನೇನೆಂಬೆ ! ಇದು ಸಮರತಿ ಸಮಕಳೆಯಿಂದುಕ್ತವಾದ ಅಂಗ. ಈ ಅಂಗದಲ್ಲಿರುವ ಜ್ಞಾನ ಸ್ವಪ್ರಕಾಶವಾದ ಪ್ರಚಂಡ ಜ್ಞಾನ, ಪರಾತ್ಪರ ಜ್ಞಾನವಾದುದರಿಂದ ಜಗದ ಅಜ್ಞಾನರೂಪಿ ಬೇಧ ಜ್ಞಾನವೆಲ್ಲ ಹೊಡೆದೋಡಿಸಿ ಲಿಂಗಾಂಗ ಸಮರಸ ಸುಖವುಳ್ಳ ಸವೆಯದಾನಂದವವನ್ನು ಲಭಿಸುವ ಅಂಗ. ಈ ಅಂಗನು ಯತಾರ್ಥಸ್ವರೂಪ ಬೋಧಿಸುವುದರಿಂದ ಎಷ್ಟೋ ಜನ್ಮಂಗಳಿಂದಲೂ ಕವಿದಿದ್ದ ಅಜ್ಞಾನಾಂಧಃಕಾರವು ಸೂರ್ಯೋದಯವಾದ ತಕ್ಷಣವೇ ಕತ್ತಲೆ ಹೇಗೆ ಇಲ್ಲವಾಗುತ್ತದೆಯೋ ಹಾಗೆ ಮರವೆಂಬ ಆವರಣವು ನಾಶವಾಗುತ್ತದೆ. ಅದಕ್ಕಾಗಿ ಲಿಂಗಾಂಗ ಸಮರಸ ಜ್ಞಾನ ಅರಿಯಲೇ ಬೇಕು. ಅರಿಯದಿದ್ದರೆ ಬಲ್ಲ ಮಹಾ ಪುರುಷರಿಂದ ಕೇಳಿರಿ.

ಅಂಗ ಲಿಂಗದೊಳಗೆ ಸಮರಸವೋ ? ಲಿಂಗ ಅಂಗದೊಳಗೆ ಸಮರಸವೋ ? ಅವಿರತದೋಳ್ ಭೇದಮಾಡಿ ಬೆರೆಸುವದದೆಂತು ? ಸತ್ಯಂ ಶಿವಂ ಸುಂದರಂ ಎಂಬ ನಿಗಮವನಾದರೂ ನೋಡಿರೆ ? ನೋಡಿದಲ್ಲಿ ಲಿಂಗವೆಂಬುದು ಅಂಗ. ಅಂಗವೆಂಬುದು ಲಿಂಗ. ಲಿಂಗಾಂಗವೆಂಬುದು ಸರ್ವ ಮಂಗಲಮಯವಾದ ಸಚ್ಚಿದ್ಘನ, ಚಿನ್ಮಯ, ಚಿದಂಗ, ಚಿದಾಕಾಶ, ಖಂಡಿತವಿಲ್ಲದ ಅಖಂಡ ಅದ್ವಿತೀಯವಿರುವಲ್ಲಿ ಅಂಗಕ್ಕೆ ಲಿಂಗಕ್ಕೆ ಭೇದವುಂಟೆ? ಇದ್ದುದೊಂದೆ ಇರುವಲ್ಲಿ ಬೇಧ ಮಾಡಿ ಬೆರೆಸುವುದು ಹೇಗೆ ? ಅದಕ್ಕಾಗಿ ಲಿಂಗಾಂಗ ಸಾಮರಸ್ಯ ತತ್ವವೆಂಬುದು ಖಂಡನೆಗೆ ಇಂಬಿಲ್ಲದ ತತ್ವ. ಬೇಧಕ್ಕಿಂಬುಕೊಡದ ತತ್ವ, ಅಬಾಧಿತ ತತ್ವ, ಅಕ್ಷಯ ಸುಖರೂಪಿ ತತ್ವ ಅಚಿಂತ್ಯ ತತ್ವವಾದುದರಿಂದ ಅಂಗದೊಳಗೆ ಅಂಗವಾಗಿ ಅಂಗ ಲಿಂಗೈಕ್ಯ ಮಾಡಿದೆ.

ಅಂದರೆ ಅಂಗವಾದುದದುವೆ, ಲಿಂಗವಾದುದದುವೆ. ದ್ವಿತೀಯ ನಾಮವಾದುದದುವೆ. ಅಂದು ಇಂದು ಎಂದೆಂದು ಇದ್ದಕ್ಕಿದ್ದ ಹಾಗೆ ಇದ್ದುದದುವೆ ಆದುದರಿಂದ ಘನಾಂಗವು.ಇದು ಸ್ವಮಹಿಮೆಯು ಸುಖಸ್ವರೂಪವು.

ಸುಖ ಸ್ವರೂಪವೆಂದರೆ ಸುಖದ ಅಂಗ, ಇದು ಸುಖದ ಸುಖವಾದ್ದರಿಂದ ಎರಡೆನ್ನದ ಅಂಗ, ಒಂದೆನ್ನದ ಅಂಗ, ತಾನೆನ್ನದ ಅಂಗ, ಇದಿರ ಕಾಣದ ಅಂಗ, ಶಬ್ದಗಳಿಗೆ ಇಂಬು ಕೊಡದ ಅಂಗವಾದ್ದರಿಂದ ಘನಾಂಗವೆ ನಿಃಶ್ಯಬ್ದ ಘನ ನೋಡಾ.

ಈ ನಿಃಶ್ಯಬ್ದ ಘನದೊಳಗೆ ಅಂಗನೆನ್ನದೆ, ಲಿಂಗನೆನ್ನದೆ, ಎರಡೆನ್ನದೆ ಒಂದೆನ್ನದೆ, ನಾನೆನ್ನದೆ, ನೀನೆನ್ನದೆ, ಅಖಂಡನೆನ್ನದೆ, ಅದ್ವಿತೀಯನೆನ್ನದೆ, ಏನೊಂದುಸುರಲೆಡೆಗೊಡದಂತಾಗಿದೆ. ಅಂಗ ಲಿಂಗೈಕ್ಯವ ಮಾಡಿದೆ ನೋಡಾ.

**ಮನದೊಳಗೆ ಮನವಾಗಿ ಮನ ಲಿಂಗೈಕ್ಯವ ಮಾಡಿದೆ :** ಮನದೊಳಗೆ ಮನವಾಗಿ ಅಂದರೆ ಲಿಂಗಾಂಗ ಸಮರಸ ಮನವೇ ಮನ, ಲೌಕಿಕ ಮನ, ಭ್ರಾಂತಿಯುಕ್ತ ಮನ, ಮರವುಳ್ಳ ಮನ, ಕಲ್ಪನೆಯಿಂದುಕ್ತವಾದ ಮನ, ಇದು ಪುಸಿ ಮನ.ಇದು ಗಗನ ಕುಸುಮ ಸದೃಶ್ಯವಾದುದರಿಂದ ಇಲ್ಲಿ ಹೇಳಿರುವುದಿಲ್ಲ. ಲಿಂಗಾಂಗ ಸಮರಸ ಜ್ಞಾನದಿಂದುಕ್ತವಾದ ಮನವೇ ಇಲ್ಲಿ ಅಕ್ಕ ಹೇಳಿದುದಾಗಿದೆ.

ಈ ಮನದ ಘನ, ಘನವದನೇನು ಹೇಳುವುದು ಇದು ಅಖಂಡ ಮನ, ಭೇದಾಭೇದ ಒಂದಾಗಿ ಕಾಣುವ ಮನ, ಮರವರುವು ಒಂದಾಗಿ ಕಾಣುವ ಮನ, ಅಪ್ರಮಾದ ಮನ, ನಿರಾಲಂಬ ಮನ, ದ್ವಿಪದ ಕಾಣದ ಮನ, ವಾಚ್ಯಲಕ್ಷವೆಂದು ವಿಭಾಗಿಸದ ಮನ, ನಿಸ್ಸೀಮ ಮನವಾದುದರಿಂದ ಮನದೊಳಗೆ ಮನವಾಗಿ ಮನ ಲಿಂಗೈಕ್ಯ ಮಾಡಿದೆನೆಂದು ಹೇಳಿದುದಾಗಿದೆ. ಅಂದರೆ ಎಲ್ಲಿಯವರೆಗೆ ಮನವು ಸೀಮಿತವುಳ್ಳದ್ದಾಗಿದೆ ಅಲ್ಲಿಯವರೆಗೆ ವಿಭಾಗಿಸುವ ಮನವಾಗಿದೆ. ಯಾವಾಗ ಈ ಮನಸ್ಸಿಗೆ ನಿಸ್ಸೀಮವಾದ ಪರತತ್ವದ ದರ್ಶನವಾಗುವುದು ಆಗ ಇದು ಕೂಡ ನಿಸ್ಸೀಮವಾಗುವುದು. ಹೇಗೆ ಹಳ್ಳಗಳಾಗಲಿ, ಹೊಳೆಗಳಾಗಲಿ, ನದಿಗಳಾಗಲಿ, ಸಮುದ್ರನಾಥನನ್ನು ಸೇರುವುದಿಲ್ಲ ಅಲ್ಲಿಯವರೆಗೆ ಸೀಮಿತವುಳ್ಳವುಗಳಾಗಿ ನಾನಾ ಹೆಸರಿನಿಂದ ಕರೆಸಿಕೊಳ್ಳುತ್ತವೆ. ಯಾವಾಗ ಸಮುದ್ರನಾಥನಲ್ಲಿ ಲೀನವಾಗುವವು ಆಗ ಸಮುದ್ರ ರೂಪವಾಗುತ್ತವೆ ಹೇಗೋ ಹಾಗೆ.

ನಿರಂತರವಾದ ನಿರಾತಂಕವಿಲ್ಲದ ಘನಲಿಂಗದ ದರ್ಶನವಾಗುವಡೆ ಆಗ ಅವಿವೇಕ ಮನ ಅದುವೆ, ವಿವೇಕ ಮನ ಅದುವೆ, ಭ್ರಾಂತಿಯುಕ್ತ ಮನ ಅದುವೆ, ಬ್ರಹ್ಮಭಾವಯುಕ್ತ ಮನ ಅದುವೇ ಆದುದರಿಂದ ಇದು ಅಹುದು ಅಲ್ಲೆಂಬುವುದಕ್ಕೂ ಮೀರಿದುದಾಗಿರುವುದರಿಂದ ಅಗಮ್ಯ ಮನ ಸತ್ಯಾಸತ್ಯವೆಂದು ವಿಂಗಡಿಸಲು ಎಡೆಗೊಡದ್ದರಿಂದ ಅವರ್ಣೀಯ ಮನ. ಇದುವೆ ನಿಃಶ್ಯಬ್ದ ಘನ ಗಂಭೀರವಾದುದರಿಂದ ಅಂಗವೆನ್ನದೆ ಲಿಂಗವೆನ್ನದೆ, ಸಂಗವೆನ್ನದೆ ಸಮರಸವೆನ್ನದೆ, ಸೀಮಿತವೆನ್ನದೆ, ನಿಸ್ಸೀಮವೆನ್ನದೆ ಮನದೊಳಗೆ ಮನವಾಗಿ ಮನ ಲಿಂಗೈಕ್ಯ ಮಾಡಿದೆ ನೋಡು ತಂದೆ.

**ಭಾವದೊಳಗೆ ಭಾವವಾಗಿ ಭಾವ ಲಿಂಗೈಕ್ಯ ಮಾಡಿದೆ:** ಅಂದರೆ ಲೋಕದ ಭಾವ ಇಲ್ಲಿ ಹೇಳಿರುವುದಿಲ್ಲ, ಏಕೆಂದರೆ ಲೋಕದ ಭಾವ ರೂಪವಾದ ಪತಿ ಪತ್ನಿ ಸುತ ಸಹೋದರರು ಶತ್ರು ಮಿತ್ರ ಬಂಧು ಇವುಗಳೆಲ್ಲ ಭ್ರಾಂತಿಯಿಂದುಕ್ತವಾದವುಗಳು. ಲಿಂಗಾಂಗ ಸಮರಸ ಭಾವವೇ ಭಾವ. ಇದು ಸಮಸ್ವರೂಪವಾಗಿರುವ ಭರಿತ ಭಾವ, ಅದಕ್ಕಾಗಿ ಇದು ಭಾವಭಾವಗಳಿಂದ ನಿರ್ಮುಕ್ತ ಭಾವ. ಇಲ್ಲಿ ನಿತ್ಯವೆಂಬುದಿಲ್ಲ ಅನಿತ್ಯವೆಂಬುದಿಲ್ಲ. ವ್ಯಾಪ್ತನೆಂಬುದಿಲ್ಲ, ವ್ಯಾಪಕನೆಂಬುದಿಲ್ಲ. ಇಚ್ಛಾ ನಿಚ್ಛೆಯಿಂದ ವಿವರ್ಜತವಾದ ಭಾವ, ಅಖಂಡ ಭಾವ. ಪೂರ್ಣಮದಃ ಪೂರ್ಣಮಿದಂಭಾವ

ಆದುದರಿಂದ ಇದಕ್ಕೆ ಮೇಲೆಂಬುದಿಲ್ಲ , ಕೆಳಗೆಂಬುವದಿಲ್ಲ , ಒಳಗೆಂಬುವದಿಲ್ಲ, ಹೊರಗೆಂಬುವದಿಲ್ಲ, ಸಮವೆಂಬುವದಿಲ್ಲ, ವಿಷಮವೆಂಬುವದಿಲ್ಲ, ತುಂಬಿದ ಭಾವವಾದುದರಿಂದ ನಿತ್ಯನಿತ್ಯವೆಂದರೂ ಅದುವೆ, ಅನಿತ್ಯವೆಂದರೂ ಅದುವೆ. ವ್ಯಾಪ್ತನೆಂದರೂ ಅದುವೆ ವ್ಯಾಪಕನೆಂದರೂ ಅದುವೆ. ಆದಿ ಅದುವೆ ಮಧ್ಯ ಅದುವೆ ಅಂತ್ಯ ಅದುವೇ ಆಗಿರುವುದರಿಂದ ಪೂರ್ಣಮದಃ ಅದುವೆ ಪೂರ್ಣಮಿದಂ ಅದುವೇ ಆದುದರಿಂದ ಭರಿತ ಭಾವ ನೋಡಾ.

ಈ ಭರಿತ ಭಾವದೊಳಗೊಂದು ಭಾವವಾಗಿ ಆ ಭಾವದ ಘನವನೇನೆಂಬೆ, ಇದು ನಿರ್ಭಾವ. ನುಡಿಗಿಂಬುಕೊಡದ್ದಾಗಿರುವುದರಿಂದ ನಿರ್ಭಾವ. ನಡೆಗಿಂಬುಕೊಡದ್ದಾಗಿರುವುದರಿಂದ ನಿರ್ಭಾವ. ಚಿಂತನೆಗೆ ಇಂಬುಕೊಡದದ್ದರಿಂದ ನಿರ್ಭಾವ. ಇದು ಭಾವಕ್ಕೆ ಮೀರಿದುದಾದುದರಿಂದ ಜೀವನೆನ್ನೆ, ಬ್ರಹ್ಮನೆನ್ನೆ , ಕಲ್ಪಿತನೆನ್ನೆ ಅಕಲ್ಪಿತನೆನ್ನೆ, ರೂಪನೆನ್ನೆ ಅರೂಪ ನೆನ್ನೆ , ಸಾವಯುವನೆನ್ನೆ ನಿರವಯುವನೆನ್ನೆ, ಬದ್ಧನೆನ್ನೆ ಬುದ್ಧನೆನ್ನೆ, ಅರಿತನೆನ್ನೆ ಅರಿಯೆನೆನ್ನೆ, ಸಂಗಿಯೆನ್ನೆ ನಿಸ್ಸಂಗಿಯೆನ್ನೆ, ಕೂಡಿದನೆನ್ನೆ ಅಗಲಿದನೆನ್ನೆ, ದ್ವೈತನೆನ್ನೆ ಅದ್ವೈತನೆನ್ನೆ, ಖಂಡಿತನೆನ್ನೆ ಅಖಂಡಿತನೆನ್ನೆ, ಆವಾವ ಭಾವಂಗಳಿಗೂ ಇಂಬುಕೊಡದದ್ದರಿಂದ ಇದು ನಿರ್ಭಾವವೆಂದು ಹೇಳಿದೆ. ಇದುವೆ ಅತೀತ ಭಾವವಾದುದರಿಂದ ನಿರಾಲಂಬವಾಗಿದೆ.

ಇದು ನಿರಾಲಂಬ ಭಾವವಾದುದರಿಂದ ಭಾವದೊಳಗೆ ಭಾವವಾಗಿ ಭಾವಲಿಂಗೈಕ್ಯ ಮಾಡಿದೆ. ಅಂದರೆ ಭರಿತ ಭಾವದೊಳಗೆ ನಿರ್ಭಾವವಾಗಿ ಆ ನಿರ್ಭಾವರೂಪಿ ನಿರಾಲಂಬ ಭಾವವು ಲಿಂಗೈಕ್ಯವೆಂಬ ನಿಃಶಬ್ಧ ಘನ ಗಂಭೀರದೊಳ್ ಶಬ್ದ ಮುಗ್ಧನಾದೆನೆಂಬುದೆ ಈ ನಿರ್ಭಾವವುಳ್ಳವಳಾದೆ ಅಚಿಂತ್ಯ ಪದವಾದೆ ಎಂದು ಹೇಳಿದ್ದಾಳೆ.

**ಅರುವಿನೊಳಗೆ ಅರುವಾಗಿ ಜ್ಞಾನ ಲಿಂಗೈಕ್ಯ ಮಾಡಿದೆ :** ಅಂದರೆ ಲಿಂಗಾಂಗ ಸಮರಸದರುವೆ ನಿಜಘನದ ಒಲವನ್ನು ತಿಳಿಸುವ ಅರುವು. ಈ ಅರುವೇ ಅಂಗ ಲಿಂಗ ಒಂದೆಂಬರುವು ಇದು ಅಖಂಡ ಅರುವು ಇದು ನಿಸ್ಸೀಮವಾದುದರಿಂದ ಸಮಸ್ವರೂಪವು. ಇಲ್ಲಿ ತ್ರಿಪುಟಿಗಿಂಬಿಲ್ಲವಾದುದರಿಂದ ಭೋಗಕ್ಕಿಂಬಿಲ್ಲ, ತ್ಯಾಗಕ್ಕಿಂಬಿಲ್ಲ,ಯೋಗಕ್ಕಿಂಬಿಲ್ಲ.

ಇಲ್ಲಿ ತಾನು ಅರುವು ಪಿಂಡಾಂಡವು ಅರುವು, ಬ್ರಹಾಂಡವು ಅರುವು, ದೇವತಾದೈತ್ಯರು ಅರುವು, ಬ್ರಹ್ಮಾದಿಗಳು ಅರುವು, ಸಕಲ ವೇದವು ಅರುವು, ಇದುವೆ ನಿಜದರುವು.

ಈ ಅರುವಿನೊಳಗೆ ಅರುವಾಗಿ ಅಂದರೆ ಯತಾರ್ಥವರಿತ ಅರುವೆ; ಈ ಅರುವಿನಿಂದ ಜ್ಞಾನ ಲಿಂಗೈಕ್ಯ ಮಾಡಿದೆ. ಇದು ಯತಾರ್ಥವರಿತದ್ದರಿಂದ ಇದು ಅರಿಯದರುವು ನೋಡಾ. ಇದು ನುಡಿಗಿಂಬುಗೊಡದ್ದಾದುದರಿಂದ ಇದರ ಘನವನೇನೆಂಬೆ, ಇದು ಅಂಗವೆನ್ನದ ಅರುವು, ಲಿಂಗವೆನ್ನದ ಅರುವು, ವಿಷಮ ಕಾಣದ ಅರುವು, ಸಮಕಾಣದ ಅರುವು, ತಾನು ಅನ್ಯವ ಕಾಣದ ಅರುವು, ಏನೂ ಎನ್ನದರುವಾದ್ದರಿಂದ ನಿರಂತರ ನಿರಾತಂಕವಿಲ್ಲದೆ ಇದ್ದಕ್ಕಿದ್ದಂತಿದ್ದ ಅರುವು. ಇದು ನಿಜದರುವಿನ ಜ್ಞಾನ.

ಈ ಜ್ಞಾನವನ್ನು ಕೂಡ ಅಕಥನೀಯವಾದ ಲಿಂಗದಲ್ಲಿ ಏಕ ಮಾಡಿದೆನೆಂಬುದೆ ಅರುವಿನೊಳಗೆ ಅರುವಾಗಿ ಜ್ಞಾನಲಿಂಗೈಕ್ಯ ಮಾಡಿದೆನೆಂದು ಹೇಳಿದ್ದಾಳೆ.

ಲಿಂಗಾಂಗ ಸಮರಸದ ಘನತ್ವ ಎಲ್ಲಿಯವರೆಗೆ ಯತಾರ್ಥ ಅರಿಯುವದಿಲ್ಲ, ಅಲ್ಲಿಯವರೆಗೆ ಕ್ರಿಯೆ ಇದ್ದುದೆ. ಕ್ರಿಯೆ ನಿಲ್ಲಬೇಕಾದರೆ ಲಿಂಗಾಂಗ ಸಮರಸ ತಿಳಿಯಬೇಕು. ಅಂಗನೆಂದರೇನು, ಲಿಂಗನೆಂದರೇನು ? ಇವರುಗಳ ಸ್ವರೂಪ ಚೆನ್ನಾಗಿ ಅರಿಯಬೇಕು. ಅರಿತಾಗ ಸ್ವಭಾವತಃ ಕ್ರಿಯೆಗಳು

ನಿಲ್ಲುತ್ತವೆ.

ಘಟದೊಳಿರುವ ಆಕಾಶ, ಮೋಡದೊಳಿರುವ ಆಕಾಶ, ಘಟ ಮೋಡಗಳ ಚಲನಾದಿಗಳಿಂದ ಆಕಾಶವು ಬಂದಂತೆ ಹೋದಂತೆ ಭಾಸಿಸುತ್ತದೆ. ವಿಚಾರ ಮಾಡಿ ನೋಡುವುಡೆ ಆಕಾಶವು ಇದ್ದಕ್ಕಿದ್ದ ಹಾಗೆ ಅಚಲವಾಗಿ ಇದೆ. ಅದರಂತೆ

ಮರವಿನಲ್ಲಿ ಉಪಾಧಿಯುಕ್ತ ಚೇತನ ಉಪಾಧಿ ಧರ್ಮಗಳು ಚೇತನದಲ್ಲಿ ಭಾಸಿಸುತ್ತವೆ. ವಿಚಾರ ಮಾಡಲಾಗಿ ಇಲ್ಲದ ಉಪಾಧಿ. ಉಪಾಧಿ ಧರ್ಮ ಇಲ್ಲವೆ ಇಲ್ಲ, ಇದ್ದ ಚೇತನ ಅದು ಚೈತನ್ಯವೆ ಆದುದರಿಂದ ಇದ್ದಕ್ಕಿದ್ದ ಹಾಗೆ, ಇದು ಕಾರಣ;

ಮರವಿನಲ್ಲಿಯೆ ಅಂಗ ಲಿಂಗನೆಂಬುವದಿದೆ ಅಲ್ಲಿಯೆ ಇಲ್ಲದ ಮನವುಂಟಾಗಿ ನೆನಹು ಇದೆ, ಚಿಂತನೆ ಇದೆ, ಭ್ರಾಂತಿ ಇದೆ, ಭಾವ ಇದೆ, ಅದಕ್ಕಾಗಿ ಕ್ರಿಯೆ ಇದೆ.

ಅರುವಿಂಗೆ ಅಂಗನೆಂಬುವದಿಲ್ಲ, ಲಿಂಗನೆಂಬುವದಿಲ್ಲ, ಮನವಿಲ್ಲ, ಮಾಯೆಯಿಲ್ಲ, ಮಾಟವಿಲ್ಲ, ಕೂಟವಿಲ್ಲ, ಭಾವವಿಲ್ಲ, ಭ್ರಮೆಯಿಲ್ಲ, ಚಿಂತನಕ್ಕಿಂಬು ಇಲ್ಲ, ದ್ವೈತವೆಂಬುದು ಮುನ್ನಿಲ್ಲ ತನ್ನೊಳಗೆ ಎಲ್ಲಿಯವರೆಗೆ ಚಿಂತನಕ್ಕಿಂಬು ಇದೆ ಅಲ್ಲಿಯವರೆಗೆ ಕ್ರಿಯೆ ನಡೆದೆ ಇರುತ್ತದೆ.

ಲಿಂಗಾಂಗ ಸಮರಸದ ಘನವರಿತಾಗ ಕ್ರಿಯೆಗಳು ಸ್ವಭಾವತಃ ನಿಲ್ಲುತ್ತವೆ. ಏಕೆಂದರೆ ತಿಳಿಯಬೇಕಾದುದು ತಿಳಿದ ಮೇಲೆ ಮತ್ತೇನು ತಿಳಿವುದು ? ಪಡೆಯಬೇಕಾದುದು ಪಡೆದ ಮೇಲೆ ಮತ್ತೇನು ಪಡೆವುದು ತಾನಾರೆಂದರಿಯುವದೆ ನಿಜವಾದ ಅರಿಯುವಿಕೆ.

''ಎಲ್ಲಾ ಎಲ್ಲವನರಿವವರುಂಟು ತನ್ನ ತಾನರಿಯುವವರುಂಟೆ ? ಅರಿದಿಹೆನೆಂಬುದು ಚಿದಹಂ ಮದ ನೊಡಾ. ನಿರ್ಧರಿಸಿಹೆನೆಂಬುದು ಅನುಭವದ ಮದ ನೋಡಾ. ಅರಿದರಿಹಿಸಿಕೊಂಬುದಕೆ ಮೀರಿದ ಘನವನರಿವ ಪರಿ ಎಂತು ? ನಿರಂಜನ ಪ್ರಭು ನಾಗೇಶ್ವರ '' ನಿನ್ನ ವರ ಪ್ರಸಾದದನುವಿನ ಅಗಾಧಗಮ್ಯವ ಉಪಮಿಸಬಹುದೆ ? ಉಪಮಿಸಲರಿಯೆ .

ತಾನಾರೆಂದು ತನ್ನನ್ನು ತಾನು ಯತಾರ್ಥ ತಿಳಿದ ಘನವ ಉಪಮಿಸಬಹುದೆ, ಅಕಥನೀಯ ಘನತ್ವ ಅದನೆಂತುಸುರುವುದು ? ಇದಕ್ಕಾಗಿ ಇದು ಅಸಾಧ್ಯವ ಸಾದಿಸಿದಂತೆ. ಏಕೆಂದರೆ ತಾನಾರೆಂದರಿಯಲು ಮರವಿನ ಅಭಿಮಾನಿಯಾಗಬಾರದು ಅರುವಿನ ಅಭಿಮಾನಿಯಾಗಬಾರದು. ಸ್ವಾನುಭವದ ಅಭಿಮಾನಿಯಾಗಬಾರದು, ಇವೆಲ್ಲಕ್ಕೂ ಮೀರಿ ಸಹಜ ನಿರಾಡಂಬರನಾಗಿ ನಿಸ್ಪೃಹನಾಗಿ ನಿಂತಲ್ಲಿ ತನ್ನ ನಿರಾಲಂಬದ ಘನವು ಪ್ರಜ್ವಲಿಸುವುದು. ಇದು ಶ್ರೀ ಗುರುವಿನ ವರಪ್ರಸಾದ ರೂಪಿ ಘನಪುಣ್ಯವು ಆಗಿದೆ. ಮತ್ತು ಅತ್ಯಂತ ಕಳಕಳಿಯ ಗುರುವಾನುಗ್ರಹವಾಗಿದೆ, ಇದುವೆ ತಾನಾರೆಂದರಿತ ಘನಕಾರ್ಯ, ಈ ಕಾರ್ಯವಾದ ಚಿನ್ಹವೆಂದರೆ ಕ್ರಿಯೆಗಳು ನಿಂತ ಚಿನ್ಹ, ಅಚಿಂತ್ಯ ತಾನಾದ ಚಿನ್ಹ, ಫಲ ಪಕ್ವವಾದ ಚಿನ್ಹವೆಂದರೆ ಫಲ ಕೆಳಗೆ ಬಿದ್ದ ಚಿನ್ಹವಲ್ಲವೆ ? ಕ್ರಿಯೆ ಮುಕ್ತಾಯವಾದ ಚಿನ್ಹ ಹೇಗೋ ಹಾಗೆ ತಾನಾರೆಂದರಿತ ಚಿನ್ಹವೆಂದರೆ ಕ್ರಿಯೆಗಳು ನಿಂತ ನಿಲುವು, ತಾನು ಲಿಂಗ ಒಂದಾದ ಚಿನ್ಹ. ಲಿಂಗಾಂಗ ಸಮರಸ ಜ್ಞಾನದ ಚಿನ್ಹ. ಕ್ರಿಯೆಗಳ ನಿಲಿಸಿ ನಿಃಕ್ರಿಯಳಾಗಿ ನಿಷ್ಪತ್ತಿ ಲಿಂಗೈಕ್ಯವ ಮಾಡಿದ ಚಿನ್ಹವೆಂದು ಹೇಳಿದ್ದಾಳೆ.

ಅಂಗ ಲಿಂಗದ ಯತಾರ್ಥವನರಿತಾಗ ಕ್ರಿಯೆಗಳ ನಿಲಿಸದಂತೆ ಅರಿತ ಅರುವಿನ ಅಹಂತ್ವ ನಿರಸನವಾದುದೆ ನಿಃಕ್ರಿಯಳಾದಂತೆ; ಈ ನಿಃಕ್ರಿಯದ ಸಿದ್ಧಿಯೆ ನಿಶ್ಪತ್ತಿ .ಅಂದರೆ ಪರಮ ಶಾಂತಿಯು ಈ ಪರಮ ಶಾಂತಿಯು ಲಿಂಗೈಕ್ಯ ನಿಃಶ್ಯಬ್ದ ಘನವೆಂಬ ಘನಗಂಭೀರ ಸುಖದಲ್ಲಿ ಏಕಮಾಡಿದೆನೆಂದು ಹೇಳಿದ್ದಾಳೆ.

**ನಾನೆಂಬುದು ನಿಲಿಸಿ ನೀನೆಂಬುದು ಕೆಡಿಸಿ ಉಭಯ ಲಿಂಗೈಕ್ಯವ ಮಾಡಿದೆ :**

ಅಕ್ಕ ನಿಃಶ್ಯಬ್ದ ಘನ ಗಂಭೀರ ಸುಖದವಳಾದುದರಿಂದ ಈ ಘನ ಶಕ್ತಿ ನಿಲಯ ಇದು ಅಪಾರ ತೆರಹಿಲ್ಲದ ಘನ ಸುಖ. ಈ ಘನಸುಖವೆ ಸವೆಯದ ಸುಖವಾದ್ದರಿಂದ ಇದು ಏನೊಂದಾಗದ ಘನ, ಬಯಲು ಬೆರೆಸಿ ಬಯಲೇ ತಾನಾದ ಘನ, ಇಲ್ಲಿ ಅಂಗನೆಂಬುದು ಮುಕ್ತಾಯ, ಲಿಂಗವೆಂಬುದು ಮುಕ್ತಾಯ, ಅಂಗನೆನ್ನೆ ಎಂಬುದು ಮುಕ್ತಾಯ, ಲಿಂಗನೆನ್ನೆ ಎಂಬುದು ಮುಕ್ತಾಯವಾದುದರಿಂದ ಸಕಲ ಮುಕ್ತಾಯದ ಮುಕ್ತಾಯ ನಿಲಯ.

ಇದು ನಾನೆಂಬುದು ನಿಲಿಸಿ ನೀನೆಂಬು ಕೆಡಿಸಿ ಉಭಯ ಲಿಂಗೈಕ್ಯವ ಮಾಡಿದ ನಿಜಪದ .

ನಿಃಕಲ ಘನವು ಸಂಜ್ಞೆಗೊಳಪಟ್ಟುದೆ ಸೀಮಿತದಿಂದುಕ್ತವಾಗಿರುವುದೆ ? ಅದು ಹಾಗೆ ಹೀಗೆ ಎಂದು ಅರಸಬಹುದೇ ? ಏನೊಂದುಸುರಲು ಎಡೆಗೊಡದ ಘನವು ಅದು ನಾನಾದುದೇ? ನೀನಾದುದೆ ?

ಅದಕ್ಕಾಗಿ ಅಕ್ಕನ ಲಿಂಗೈಕ್ಯವು ಅಚಿಂತ್ಯ ಸುಖದ ಸುಖವು. ಅಲ್ಲಿ ಏನೊಂದುಸುರಲು ಇಂಬಿಲ್ಲ ನೋಡಾ. ಇದು ಕಾರಣ ಒಂದೆಂಬುವದಿಲ್ಲ , ಎರಡೆಂಬುವದಿಲ್ಲ , ನಾನಿದ್ದೆನೆಂಬುವದಿಲ್ಲ , ನಾನಿಲ್ಲವೆಂಬುದಿಲ್ಲ , ನೀನಿರುವೆಂಬುದಿಲ್ಲ , ನೀನಿಲ್ಲವೆಂಬುವದಿಲ್ಲ , ಈ ನಿಃಕಲ ಘನಸುಖದ ಸುಖವೆ ಉಭಯ ಲಿಂಗೈಕ್ಯವಾದ ಘನವು.

**ಚೆನ್ನಮಲ್ಲಿಕಾರ್ಜುನನೊಳಗೆ ನಾನಳಿದೆನಾಗಿ ಲಿಂಗವೆಂಬ ಘನವು ಎನ್ನಲ್ಲಿ ಅಳಿಯಿತ್ತು ಕಾಣಾ ಸಂಗನ ಬಸವಣ್ಣಾ:**

ಅಂದರೆ ಚೆನ್ನಮಲ್ಲಿಕಾರ್ಜುನನೆಂಬ ನಿರ್ಮಾಯನೊಳಗೆ ನಾನೆಂಬ ಅಹಂ ಅಳಿದೆನಾಗಿ ನಿರ್ಮಾಯ ನಿರಾಲಂಬವೆಂಬ ಲಿಂಗವು ಎನ್ನಲ್ಲಿ ಅಳಿಯಿತ್ತು. ಅಂದರೆ ಏನೆಂದೆನಲಿಲ್ಲದ ಘನವೆ ಎನ್ನ ಸ್ವರೂಪವಾದ್ದರಿಂದ ನಿರಾಲಂಬ ನಿರ್ಮಾಯವೆಂಬ ಲಿಂಗವು ಎನ್ನಲ್ಲಿ ಅಳಿಯಿತ್ತು ಕಾಣಾ ಸಂಗನ ಬಸವಣ್ಣಾ ಎಂದು ಅಕ್ಕಗಳು ಭಿನ್ನೈಸಲು ಬಸವರಾಜ ದೇವರು ಮೆಚ್ಚಿ ನಿರೂಪಿಸಿದ ವಚನ.

**47**

**ಹೆಂಗೂಸಿನಂಗವ ನೋಡಿರೆ ಪುರಾತನರು.**
**ಬಾಲತನದಂಗವ ನೋಡಿರೆ ಪುರಾತನರು .**
**ಬ್ರಹ್ಮವನಾಚರಿಸಿ ತನ್ನ ಮರೆದಿಪ್ಪುದ ನೋಡಿರೆ ಲಿಂಗವಂತರು.**
**ತನ್ನ ತಾನು ನಿಶ್ಚಯವಾಗಿ ಭಾಷೆ ಬೀಸರವೋಗದೆ ಇಪ್ಪ ಇರವು.**
**ನಮ್ಮ ಕೂಡಲ ಸಂಗಮದೇವರಲ್ಲಿ ನಮ್ಮ ಮಹಾದೇವಿಯಕ್ಕಂಗೆ ಆಯಿತ್ತು.**

**ತಾತ್ಪರ್ಯ :** ಷೋಡಷ ಪ್ರಾಯದ ಯೌವನದ ವಿಷಯ ಸುಖದ ಸುಗ್ಗಿಯನ್ನೆ ಶಿವಲಿಂಗ ಸುಖದೋಳ್ ಪರವಶಳಾದ ಹೆಂಗೂಸಿನಂಗವ ನೋಡಿರೆ ಪುರಾತನರು. ಕರಣಂಗಳು ಅರುವಿಂಗಾಹುತಿಯ ಮಾಡಿ ಅರುವಿನ ಸುಖದೋಳ್ ತನ್ನಂಗವ ಮರೆದಿಪ್ಪ ಹೆಂಗೂಸಿನಂಗವ ನೋಡಿರೆ, ರೂಪ ನಿರೂಪನೊಡಗೂಡಿ ತನ್ನ ಮರೆದಿಪ್ಪ ಹೆಂಗೂಸಿನಂಗವ ನೋಡಿರೆ, ಕಾಯ ನಿಃಕಾಯ ನೊಡಗೂಡಿ ತನ್ನ ಮರೆದಿಪ್ಪ ಹೆಂಗೂಸಿನಂಗವ ನೋಡಿರೆ.ಅಂಗ ಚಿದಂಗನೊಡಗೂಡಿ ತನ್ನ ಮರೆತ ಹೆಂಗೂಸಿನಂಗವ ನೋಡಿರೆ ಇದು ಜೀವ ಲಜ್ಜೆಯಿಲ್ಲದ ಬಾಲತನದಂಗ.

ಕಾಯಲಜ್ಜೆಯಿಲ್ಲದ ಬಾಲತನದಂಗ, ಮನಲಜ್ಜೆಯಿಲ್ಲದ ಬಾಲತನದಂಗವ ನೋಡಿರೆ, ಪುರಾತನರು.

ಇದು ದೇಹ ಭಾವ ತೋರದ ಅಂಗ, ಸಕಲ ಭಾವಂಗಳ ಹಂಗು ಹರಿದ ಬಾಲತನದಂಗ, ಸಂಜ್ಞೆ ಸಂಕೇತಗಳ ಹಂಗು ಹರಿದ ಅಂಗ, ಸರ್ವವ ತೊರೆದ ಅಂಗ, ಪದ ಸಂದಿ ಕಾಣದ ಅಂಗ, ನಿಸ್ಸೀಮವಾದ ನಿಜತತ್ವದಂಗವಾದುದರಿಂದ ಇದು ಬಾಲತನದಂಗ. ಅಭವನೋಳ್ ಬೆರೆತ ಬಾಲತನದಂಗ ಅವಿದ್ಯೆಯಂಕಾಣದ ವಿದ್ಯಾವಿದ್ಯಾಯೆಂಬ ಸಂದೇಹವಿಲ್ಲದ ವಿದ್ಯೆಯೆಂಬಹಂತ್ವವ ಕೂಡದ ನಿರ್ವಿಕಾರದ ನಿಲುವಿನೋಳ್ ನಿಂತ ಬಾಲತನದಂಗವ ನೋಡಿರೆ.

ಇದು ಕ್ಷರ ಭವಕ್ಕಾಸ್ಪದ ಕೊಡದ ಅಂಗ ಅಕ್ಷರದಹಂತ್ವಕ್ಕಿಂಬುಕೊಡದ ಅಂಗ ಅಕ್ಷರೋತ್ತಮನೋಳ್ ಬೆರೆತು ತನ್ನ ಮರೆತು ಅಖಂಡ ಸುಖದ ಸುಖಿಯಾದ ಬಾಲತನದಂಗ ಇದು ಅಂಗ ಲಿಂಗ ಸಮರಸ ಮಾಡಿದ ಅಂಗ ಲಿಂಗಾಂಗವಾದುದರಿಂದ ಇದು ಬಾಲತನದಂಗವ ನೋಡಿರೆ ಪುರಾತನರು. ಅಂದು ಇಂದು ಎಂದೆಂದು ಇದ್ದ ಪುರಾತನರು ನೀವು ಅಂದಾದರೂ ಇಂತಹ ಹೆಂಗೂಸಿನ ಅಂಗವ ನೋಡಿರುವಿರಾ ? ಇಂದಾದರೂ ಇಂತಹ ಹೆಂಗೂಸಿನ ಅಂಗವ ನೋಡಿರುವಿರಾ ? ಮುಂದೆಯಾದರೂ ಇಂತಹ ಬಾಲತನದಂಗವ ನೋಡಬಹುದೆ ? ಬ್ರಹ್ಮವನಾಚರಿಸಿ ಬ್ರಹ್ಮವಾದುದರಿಂದ ತನ್ನ ಮರೆದಿಪ್ಪುದು ನೋಡಿರೆ ? ಲಿಂಗವಂತರು.

ಇದು ವಾಙ್ಮನೋತೀತವಾದ ಘನವನಾಚರಿಸಿ ಶಬ್ದಮುಗ್ಧವಾಗಿ ಸವೆಯದಾನಂದದಲ್ಲಿದ್ದು ತನ್ನ ಮರೆದಿಪ್ಪುದು ನೋಡಿರೆ ಲಿಂಗವಂತರು.

ಇದು ಘನಾಚಾರವಲ್ಲವೆ ! ಇದು ಅಕಳಂಕ ಆಚಾರವಾದುದರಿಂದ ಇಲ್ಲಿಯ ನಡೆ ನಡೆಗೆಟ್ಟ ನಡೆ, ನುಡಿ ನುಡಿಗೆಟ್ಟ ನುಡಿಯಾದುದರಿಂದ ಈ ಆಚಾರ ಘನಾಚಾರ. ಇಲ್ಲಿಯ ವಿಚಾರ ಘನದ ವಿಚಾರ; ಭಾವವೆಂಬುದು ತುಂಬಿ ತುಳುಕದ ಭಾವವಾದುದರಿಂದ ನಿಸ್ಸೀಮ ಆಚಾರ, ಎಂದೆಂದೂ ಕೆಡದ ಆಚಾರ. ಇದು ಪವಿತ್ರಪವಿತ್ರವಾಗದ ಆಚಾರ, ರೂಪಾರೂಪವಾಗದ ಆಚಾರ, ನಿತ್ಯಾ ನಿತ್ಯಕಾಣದ ಆಚಾರವಾದುದರಿಂದ ಶ್ರೇಷ್ಠಾತಿಶ್ರೇಷ್ಠ ಆಚಾರವು ನೋಡಾ.

ಈ ಆಚಾರದಿಂದುದ್ಭವಿಸಿದ ವಿಚಾರವಾದರೂ ಮರವರುವುಗಳಿಗೆ ಇಂಬುಕೊಡದ ವಿಚಾರ. ಸೀಮಾತೀತ ವಿಚಾರ ಪರಾತ್ಪರ ವಿಚಾರವಾದುದರಿಂದ ಸಕಲವು ಲಿಂಗಮಯವು. ಸರ್ವಾಂಗ ಲಿಂಗವು. ನೋಡುವ ನೋಟವು ಅದುವೆ, ಕಾಣಿಸುವ ಜಗವು ಅದುವೆ, ಅಲ್ಲಿ ವಿಭಾಗದೃಷ್ಠಿಗಿಂಬಿಲ್ಲವಾದುದರಿಂದ ವಿಸ್ಮೃತಿ ಸ್ಮೃತಿಯು ಅದುವೆ, ಸಕಲವು ವಾಙ್ಮನೋತೀತ. ಘನವಾವುದೋ ಅದರಿಂದ ಕಲ್ಪಿತನೆಂಬುದು ವಾಙ್ಮನೋತೀತವಾದ ಘನ. ಅಕಲ್ಪಿತನೆಂಬುದ ವಾಙ್ಮನೋತೀತವಾದ ಘನ. ನಾಮ ಅದುವೆ, ಅನಾಮ ಅದುವೆ, ರೂಪ ಅದುವೆ, ಅರೂಪ ಅದುವೆ, ಶಬ್ದ ಅದುವೆ, ಅಶಬ್ದ ಅದುವೆ, ಅಂದು ಇಂದು ಎಂದೆದೂ ಇದ್ದಕ್ಕಿದ್ದಂತಿರುವ ವಾಙ್ಮನೋತೀತವಾದ ಘನ.ಅದರ ಹೊರತು ಅನ್ಯವಾವುದು ಕಾಣದ್ದರಿಂದ ಅದು ಖಂಡಿತವಿಲ್ಲದ ಅಖಂಡ ದೃಷ್ಠಿಯು ತಾನೇ ತಾನಾಗಿ ತನ್ನ ಮರೆದಿಪ್ಪುದ ನೋಡಿರೆ ಲಿಂಗವಂತರು.

ನುಡಿಗೆಡೆಗೊಡದ ಘನವೆ ತಾನಾದುದರಿಂದ ತನ್ನ ನಿಶ್ಚಯವಾಗಿ ತಾನೆ ಭಾಷೆಗೆ ನಿಲುಕದಿಪ್ಪ ಇರವು ಆಗಿದ್ದ ಅಕ್ಕನ ಇರವು. ಈ ಇರವು ಏನೊಂದಾಗದ ಇರವು. ಈ ಇರವಿನ ಘನವನೇನೆಂಬೆ ಕರ್ತೃತ್ವ ಭೃತ್ಯುತ್ವಾಗದ ಇರವು. ವ್ರತ ಧರ್ಮಂಗಳ ಅಭಿಮಾನಿಯಾಗದ ಇರವು, ಅರ್ಪಿತ ಅನರ್ಪಿತ ಕಾಣದ ಇರವು, ಚಿದಹಂತ್ವದಿಂದುಕ್ತಳಾಗದ ಇರವು, ಕೂಡಿದೆ ಅಗಲಿದೆನೆನ್ನದ ಇರವು, ಏನೊಂದುಸುರಲು ಇಂಬು ಕೊಡದ ಅಕ್ಕನ ಇರವು ಆದುದರಿಂದ ಕೂಡಲ ಸಂಗಮ

ದೇವರಲ್ಲಿ ನಮ್ಮ ಮಹಾದೇವಿಯಕ್ಕಂಗಾಯಿತ್ತು.

ಹೀಗೆಂದು ಬಸವರಾಜ ದೇವರು ನಿರೂಪಿಸಲು ಇದಕ್ಕೆ ಅಕ್ಕಗಳ ಭಿನ್ನಹ.

**48**

**ನಿನ್ನ ಅಂಗದಾಚಾರವ ಕಂಡು ಎನಗೆ ಲಿಂಗಸಂಗವಾಯಿತ್ತು ಬಸವಣ್ಣ.**
**ನಿನ್ನ ಮನದ ಸುಜ್ಞಾನವ ಕಂಡು ಎನಗೆ ಜಂಗಮ ಸಂಬಂಧವಾಯಿತ್ತು ಬಸವಣ್ಣ.**
**ನಿನ್ನ ಸದ್ಭಕ್ತಿಯ ತಿಳಿದು ಎನಗೆ ನಿಜ ಸಾಧ್ಯವಾಯಿತ್ತಯ್ಯ ಬಸವಣ್ಣ.**
**ಚೆನ್ನಮಲ್ಲಿಕಾರ್ಜುನನ ಹೆಸರಿಟ್ಟು ಗುರು ನೀನಾದ ಕಾರಣ ನಾನೆಂಬುದಿಲ್ಲವಯ್ಯ.**

**ತಾತ್ಪರ್ಯ :** ಬಸವಣ್ಣ ನಿನ್ನ ಅಂಗದಾಚಾರ ಪರಮಾನಂದರೂಪ ಜಂಗಮದಲ್ಲಿ ಸ್ವಯವಾದ ಆಚಾರ. ನಿನ್ನ ಶೀಲ, ಜಂಗಮ ಸುಖದಲ್ಲಿ ಮಗ್ನವಾದ ಶೀಲವಾದುದರಿಂದ ನಿನ್ನ ತನು ಜಂಗಮಕ್ಕೆ ಅರ್ಪಿತ, ನಿನ್ನ ಮನ ಜಂಗಮಕ್ಕೆ ಅರ್ಪಿತ, ಭಾವ ಜಂಗಮಕ್ಕೆ ಅರ್ಪಿತ, ಜ್ಞಾನ ಜಂಗಮಕ್ಕೆ ಅರ್ಪಿತವಾದುದರಿಂದ ನಿನ್ನ ಅಂಗದಾಚಾರ ನಿಸ್ಸೀಮ ಆಚಾರ, ನಿರುಪಮ ಆಚಾರ, ಇದು ಪಾರಾತ್ಪರ ಆಚಾರವಾದುದರಿಂದ ವಾಙ್ಮನೋತೀತವಾದ ಲಿಂಗ ಎನಗೆ ಸಂಗವಾಯಿತ್ತು ಬಸವಣ್ಣ.

ನಿನ್ನ ಅಂಗದಾಚಾರ ಲಿಂಗಾಂಗ ಸಮರಸದಾಚಾರ ಏಕಏವ ಅದ್ವೈತದಾಚಾರ ಇದು ಘನಲಿಂಗದಾಚಾರ. ಇಲ್ಲಿ ಮಾಯಿಕ ಮುನ್ನಿಲ್ಲ , ಅದರ ನೋಟವಿಲ್ಲ , ಮಾಟವಿಲ್ಲ , ವಿಭಾಗ ದೃಷ್ಟಿಗಿಂಬಿಲ್ಲವಾದುದರಿಂದ ಬೆಳಕು ಕತ್ತಲೆಯ ಕಾಣದ ದೃಷ್ಟಿ . ಇಲ್ಲಿ ಸಾಕಾರ ನಿರಾಕಾರ ಒಂದೆ, ಮರವು ಅರವು ಒಂದೆ, ಶಿವಶಕ್ತಿ ಒಂದೆ, ಜ್ಞಾನ ಅಜ್ಞಾನ ಒಂದೆ, ಸಕಲದರೋಳ್ ಅದ್ವಿತೀಯ ಘನದರ್ಶನ ಅದ್ವಿತೀಯ ಭಾವವಾದುದರಿಂದ ನಿರ್ಮಾಯದಾಚಾರ ಸಮರತಿ ಸಮಕಲೆಯ ಆಚಾರ ಸರ್ವಮಂಗಳಮಯವಾಗಿರುವ ಸಚ್ಚಿದ್ಘನದ ಆಚಾರ ರೂಪಿ ನಿನ್ನ ಅಂಗದಾಚಾರವ ಕಂಡು, ಎನಗೆ ಲಿಂಗಸಂಗವಾಯಿತ್ತು ಬಸವಣ್ಣ.

ನಿನ್ನ ಮನದ ಸುಜ್ಞಾನವೆಂಬುವುದು ಚೈತನ್ಯದ ಜ್ಞಾನ . ಇದು ನಿಸ್ಸೀಮ ಅರುವು, ನಿರಾಳ ಅರುವು, ನಿರಾಲಂಬ ಅರುವು, ನಿರ್ಭೇಧ್ಯ ಅರುವು, ಏನೊಂದಾಗದ ಅರುವು, ಇದು ಭಾವಾ ಭಾವಕ್ಕಿಂಬುಕೊಡದ ಅರುವು. ಕಲ್ಪನೆಗಿಂಬುಕೊಡದ ಅರುವು, ಕಲ್ಪಿತನ ಕಾಣದ ಅರವು, ಇದು ತನಗಿಂತ ಭಿನ್ನವಾಗದ ಅರವು, ಅಭಿನ್ನವಾಗದ ಅರವು,ತಾನೇ ತಾನಾದ ಅರವು.

ಇಲ್ಲಿ ಬೇರ್ಪಡಿಸಲಿಂಬಿಲ್ಲವಾದುದರಿಂದ ಅಂಗಕ್ಕೆ ಆತ್ಮಂಗೆ ಭಿನ್ನ ಉಂಟೆ ? ಸಾವಯವ ನಿರವಯಕ್ಕೆ ಭಿನ್ನವಿಲ್ಲವಯ್ಯ. ಏಕೆಂದರೆ ಇದು ಪ್ರತ್ಯಗಾತ್ಮ ಇದು ಪರಮಾತ್ಮನೆಂಬ ಸಂಕೇತಕ್ಕಿಂಬುಕೊಡದ ಅರವು. ಇದು ಇದ್ದಕ್ಕಿದ್ದಂತಿದ್ದ ಇರುವು, ನಿಜದ ಅರುವು. ಈ ಅರವಿನಿಂದ ನಿನ್ನ ಮನದ ಸುಜ್ಞಾನವ ಕಂಡು ಎನಗೆ ಜಂಗಮ ಸಂಬಂಧವಾಯಿತ್ತಯ್ಯ ಬಸವಣ್ಣ.

ನಿನ್ನ ಸದ್ಭಕ್ತಿಯ ತಿಳಿದು ಅಂದರೆ ನಿನ್ನ ಸರ್ವ ಮಂಗಳಮಯ ಸಚ್ಚಿದ್ಘನ ಲಿಂಗ ಸಮರಸದ ಸದ್ಭಕ್ತಿಯ ಘನವನೇನೆಂಬೆ, ನೀನು ನಿಜಾತ್ಮದ ಘನಗಂಭೀರ ಸುಖದ ಸುಖಿ. ನಿರ್ವಿಕಾರಿ ನಿನಗೆ ಉದಯವಾದುದಿಲ್ಲ, ಅಸ್ತವಾದುದಿಲ್ಲ , ಮರೆತುದಿಲ್ಲ , ಅರಿತುದಿಲ್ಲ, ಶುದ್ಧವಾದುದಿಲ್ಲ, ಅಶುದ್ಧವಾದುದಿಲ್ಲ , ಕಾಣಿಸಿಕೊಳ್ಳುವುದಿಲ್ಲ , ಕಾಣುವಿದಿಲ್ಲ , ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತಿದ್ದ ಸ್ವಮಹಿಮ ನೀನು. ನಿರಂತರವಾಗಿರುವ ನಿರಾತಂಕವಿಲ್ಲದ ಬೆಳಗು ಮಂಗಳಮಯ.

ನಿನ್ನೊಳ್ ಅಪೂರ್ಣತೆಗಿಂಬಿಲ್ಲವಾದುದರಿಂದ ನೀನು ಎಂದೆಂದು ಪರಿಪೂರ್ಣ ಶುದ್ಧಾತಿ ಶುದ್ಧ, ಪ್ರಶಾಂತಮೂರ್ತಿಯು ಸಂತೋಷದ ಸಾಗರನು, ಅಪಾರ ಜ್ಞಾನಾನಂದ ಮಯನು ನಿನ್ನ ಸದ್ಭಕ್ತಿಯೆಂಬುದು ಸರ್ವ ಮಂಗಳಮಯ ಸಚ್ಚಿದ್ಘನ ಲಿಂಗದ ರತಿಯಾದುದರಿಂದ ನಿನ್ನ ಸದ್ಭಕ್ತಿಯ ಘನ, ತುಂಬಿ ತುಳುಕದ ಘನ. ಎಲ್ಲಿ ನೋಡಿದಡಲ್ಲಿ ನಿರಂತರವಾಗಿರುವ ನಿರಾತಂಕವಿಲ್ಲದ ಸಚ್ಚಿದ್ಘನಲಿಂಗದ ಸ್ವಮಹಿಮೆಯೊಳ್ ದೃಷ್ಟಿಯು ಮಗ್ನವಾಗಿರುವದರಿಂದ ಸಾವಯವ ನಿರವಯವೆಂಬುದದುವೆ, ಅಂಗ ಲಿಂಗವೆಂಬುದದುವೆ, ಸತ್ ಅಸತ್ ಅದುವೆ , ಆದಿ ಅನಾದಿ ಅದುವೆ, ರೂಪಾರೂಪ ಅದುವೆ, ಖಂಡಾಖಂಡ ಅದುವೆ, ನಿತ್ಯಾನಿತ್ಯ ಅದುವೆ, ಆದ್ದರಿಂದ ನಿನ್ನೊಳ ವಿಷಮ ದೃಷ್ಟಿ, ವಿಷಮ ಭಾವ, ವಿಷಮಜ್ಞಾನಕ್ಕಿಂಬು ಅದೆಲ್ಲಿಯದೋ .

ನೀನು ಲಿಂಗಾಂಗ ಸಮರಸ ಜ್ಞಾನದೊಡೆಯ. ಸಮ್ಯ ಜ್ಞಾನದ ನಿಧಿ. ಪರಿಪೂರ್ಣ ಪರಮಾನಂದದ ಪರಮರತಿಯೆ ನಿನ್ನ ಸದ್ಭಕ್ತಿಯ ರತಿ. ಇದಾರಿಗಯ್ಯ ದಕ್ಕಿದುದು. ಇದನುಂಡು ಡೇಗಿದವರಾರಯ್ಯ ಬಸವರಸ. ನಿನಗೆ ಸ್ತುತಿ ಅಷ್ಟೆ, ನಿಂದಾ ಅಷ್ಟೆ, ಕಾರ್ಯವಷ್ಟೆ ಕಾರಣವಷ್ಟೆ, ಸಂಗವಷ್ಟೆ ನಿಸ್ಸಂಗವಷ್ಟೆ, ನಿಷ್ಕಳಂಕ ಘನಲಿಂಗದ ರತಿಯುಳ್ಳವನಾದುದರಿಂದ ನಿಶ್ಚಲವಂತ ನೀನೆ, ನಿಶ್ಚಿಂತ ನೀನೆ, ನಿಜಾನಂದದ ನಿಬ್ಬೆರಗು ನೀನೆ. ನಿನ್ನ ಘನವ ಅದನೆಂತುಸುರುವುದು ! ನಿರುಪಮನಾದ ನಿನಗೆ ಸ್ಥಾವರವಷ್ಟೆ, ಜಂಗಮವಷ್ಟೆ, ಅಳಿದುದಷ್ಟೆ, ಉಳಿದುದಷ್ಟೆ, ನೀನು ಸಮಸ್ವರೂಪವಾಗಿರುವ ಸತ್ಯ ಸಮಕಾಯ ಸಮದರ್ಶಿ ಸವೆಯದಾನಂದ ಮೂರ್ತಿ ಈ ಅನುಪಮದ ಕ್ರಿಡಾ ಅದಾರಿಗಯ್ಯ? ಈ ಘನಸುಖ ಅದಾರಿಗಯ್ಯ? ಈ ನಿನ್ನ ಸದ್ಭಕ್ತಿಯ ಘನವನರಿದು ಎನಗೆ ನಿಜ ಸಾಧ್ಯವಾಯಿತ್ತು ಬಸವಣ್ಣ.

ಚೆನ್ನಮಲ್ಲಿಕಾರ್ಜುನನೆಂಬ ಹೆಸರಿಟ್ಟು ಗುರು ನೀನಾದ ಘನವ ಅದಾನರಯ್ಯ ಬಣ್ಣಿಸುವರು. ನಿಃಶಬ್ದ ಘನ ಗಂಭೀರ ಶಬ್ಧಕ್ಕಿಂಬುಮಾಡಿ ಪುನಃ ನಿಶಬ್ಧ ಘನವ ತಂದು ಕೈವಶಕ್ಕೆ ಕೊಟ್ಟವರಾರಯ್ಯ, ನಡೆಗೆಡೆಯಿಲ್ಲದ ಘನವ ನಡೆಗೆಡೆಮಾಡಿ, ಪುನಃ ನಡೆಗೆಡೆಗೊಡದ ಘನವ ಕರತಲಾಮಲ ಮಾಡಿದವರಾರಯ್ಯ? ಭಾವಕ್ಕಗಮ್ಯನ ಭಾವಕ್ಕಿಂಬು ಮಾಡಿ ಭಾವ ನಿಷ್ಪತ್ತಿ ಮಾಡುವ ಘನವ ಅದನಾರಯ್ಯಬಲ್ಲವರು ! ನಿನ್ನ ಸದೃಶ್ಯವೆ ಚನ್ನಮಲ್ಲಿಕಾರ್ಜುನ, ಚನ್ನಮಲ್ಲಿಕಾರ್ಜುನನ ಸದೃಷ್ಯವೆ ನೀನು. ಈ ಏಕತ್ವ ಮಾಡುವ ಸದೃಶ್ಯದ ಘನವ ಅದನಾರಯ್ಯ ಕರತಲಾಮಲ ಮಾಡುವವರು ಆರಯ್ಯ!

ನಿಃಕಲ ಘನದ ಕಲೆಗಿಂಬು ಮಾಡಿ ಕಲೆಯ ನಿಷ್ಪತ್ತಿ ಮಾಡಿ ನಿಃಕಲ ಘನವೆ ನಿಶಬ್ದ ಘನವೆಂದು ಹೆಸರಿಟ್ಟವರಾರು ?

ಈ ಹೆಸರು ನಿಮ್ಮಿಂದ ಬಂದುದಾದುದರಿಂದ ಗುರು ನೀನು . ಗುರು ಘನ ನೀನಾಗಿರುವಾಗ ನನಗೆ ನಾನೆಂಬುವುದೆಲ್ಲಿಯದು ನಿನ್ನ ದರ್ಶನ ಪ್ರಮಾಣಂಗಳಿಗೆ ಮೀರಿರುವುದರಿಂದ ನೀನೇ ಕಾಣಬಾರದ ಗುರು, ಅಗಮ್ಯ ಗುರು, ಅಪ್ರಮಾಣ ಗುರುವಾದುದರಿಂದ ನಾನೆಂಬುವದಿಲ್ಲವಯ್ಯ ಎಂದು ಹಾಡಿ ಹರ್ಷಿಸಿರುವಳು.

**49**

**ಅಂಗದಲ್ಲಿ ಆಚಾರವ ತೋರಿದ . ಆ ಆಚಾರವೆ ಲಿಂಗವೆಂದರುಹಿದ.**
**ಪ್ರಾಣದಲ್ಲಿ ಅರುವ ನೆಲೆಗೊಳಿಸಿದ. ಆ ಅರುವೆ ಜಂಗಮವೆಂದು ತೋರಿದ.**

**ಚೆನ್ನಮಲ್ಲಿಕಾರ್ಜುನನ ಹೆತ್ತ ತಂದೆ ಸಂಗನಬಸವಣ್ಣನು**
**ಎನಗೀಕ್ರಮವನರುಹಿದನಯ್ಯ.**

**ತಾತ್ಪರ್ಯ :** ಅಂಗದಲ್ಲಿ ಆಚಾರ ತೋರಿದ ಘನತ್ವ ಬಹು ಘನತ್ವವಾದುದು. ಈ ಆಚಾರ ಘನಾಚಾರ ಲಿಂಗಾಚಾರ.ಇದು ಭಾವಕ್ಕಗವ್ಯುವಾದುದು.ಅದಕ್ಕಾಗಿ ಇಲ್ಲಿ ಅಂಗ ವಿಕಾರಕ್ಕಿಂಬಿಲ್ಲವಾದುದರಿಂದ ಅಧೋದೃಷ್ಟಿಯಿಂದ ಅತೀತವಾದುದು. ಕಾರಣ ಮನದ ವಿಕಲ್ಪವಿಲ್ಲ, ಭಾವದ ಭ್ರಮೆಯಿಲ್ಲ,ಏಕೆಂದರೆ ಅಂಗಗುಣದಿಂದುಕ್ತವಾದ ಆಚಾರ, ಲಿಂಗಾಂಗಸಮರಸಜ್ಞಾನಿಗಳ ದೃಷ್ಟಿಗೆ ಅನಾಚಾರ. ಲೋಕ ದೃಷ್ಟಿಗೆ ಆಚಾರವುಳ್ಳದ್ದಾಗಿ ಕಂಡರೂ ಲಿಂಗದೇಹಿ ಶರಣರ ದೃಷ್ಟಿಗೆ ಅದು ಅನಾಚಾರ.

ಎಲ್ಲಿಲಿಂಗಜ್ಞಾನವಿಲ್ಲ ಅಲ್ಲಿಮರವೆ ಪ್ರಧಾನವಾಗಿದೆ. ಮರವಿನಲ್ಲಿಯೆ ಅಂಗ ಅಂಗವಿಕಾರ, ವಿಕಲ್ಪ ಗುಣ ಇವೆ. ಎಲ್ಲಿಸಮ್ಯಜ್ಞಾನ ಶರಣರಿದ್ದಾರೆ ಅಲ್ಲಿ ಸರ್ವಾಂಗ ಲಿಂಗಿಗಳು. ಅಲ್ಲಿ ಅಂಗವಿಲ್ಲ ಅಂಗಗುಣವಿಲ್ಲ, ಭಾವದ ಭ್ರಮೆಯಿಲ್ಲ ಕೇವಲ ಚಿನ್ಮಯ ಸ್ವರೂಪರು ಚಿದಾನಂದರು. ಅದಕ್ಕಾಗಿ ಅವರ ಅಂಗದಲ್ಲಿ ತೋರಿದ ಆಚಾರ ಘನಾಚಾರ ಲಿಂಗಾಚಾರ. ಈ ಆಚಾರದ ಘನವ ಆದೆಂತು ವರ್ಣಿಸುವುದು. ಎಲ್ಲಿ ನೋಡಿದಡಲ್ಲಿ ನಿರಂತರವಾಗಿರುವ ನಿರಾತಂಕವಿಲ್ಲದ ಬೆಳಗುವ ಸಚ್ಚಿದ್ಘನ ಲಿಂಗವೇ ಕಂಗೊಳಿಸುವುದರಿಂದ ಈ ಆಚಾರ ಲಿಂಗದರುವೆ ಸಿದ್ಧವಾಗುವ ಆಚಾರ. ಲಿಂಗದ ಘನವ ಕಾಣುವ ಆಚಾರ.ಇದುವೆ ಅಚಿಂತ್ಯ ಆಚಾರ, ಅಕಲಂಕ ಆಚಾರ.

ಇದು ಅಂಗ ಲಿಂಗ ಭೇದ ಕಾಣದ ಆಚಾರ, ಕಂದದ ಆಚಾರ ಕುಂದದ ಆಚಾರ, ಪಿಂಡಾಂಡ ಬ್ರಹ್ಮಾಂಡಗಳ ವಿಕಾರ ಕಾಣದ ಆಚಾರ. ಇದು ಶುದ್ಧಾಚಾರ.ಲಿಂಗಯ್ಯನ ಆಚಾರ. ಸ್ಥಾವರ ಜಂಗಮ ಜಗವು ಲಿಂಗಮಯವಾಗಿ ಕಾಣುವ ಆಚಾರ. ಬೇವಿನ ಬೀಜವು, ಅದು ದೊಡ್ಡ ಬೇವಿನ ಮರವಾಗಿ ಪತ್ರ ಪುಷ್ಪ ಕಾಯಿ ಹಣ್ಣುಗಳಿಂದ ಕೊಲ್ಲೆ ಟೊಂಗೆಗಳಿಂದುಕ್ತವಾಗಿ ಭಾವಿಸಿದರೂ ಅದು ಬೇವು ಅಲ್ಲದೆ ಅನ್ಯ ಹೇಗಲ್ಲವೋ ಹಾಗೆ ಘನಕ್ಕೆ ಘನವಾದ ಲಿಂಗದೋಳ್, ಕ್ಷರಾಕ್ಷರ ಪ್ರಕೃತಿ ಪುರುಷ ತತ್ವವಾಗಿ ಭಾಸಿಸಿದರೂ ಅದು ಘನಲಿಂಗವಲ್ಲದೆ ಅನ್ಯವಲ್ಲ , ಸಚ್ಚಿದ್ಘನ ಲಿಂಗವೆಂಬುದು ಸಕಲ ನಾಮರೂಪಕ್ಕೂ ತತ್ವ ವಿಚಾರಕ್ಕಾಧಾರವಾದ ನಿರ್ವಿಕಾರ, ಘನ. ಇದು ನಿರಂತರವಾಗಿರುವ ನಿರಾತಂಕವಿಲ್ಲದ ಸತ್, ಇದರ ಅಸ್ಥಿತ್ವ ಪಡದೆ ಸಕಲ ನಾಮರೂಪ ಪ್ರಪಂಚವು ಅಸ್ಥಿ ಭಾತಿ ಪ್ರಿಯವಾಗಿದೆ. ಈ ಅಸ್ಥಿ ಭಾತಿ ಪ್ರಿಯವೆ ಸಚ್ಚಿದ್ಘನ ಲಿಂಗದ ಅಸ್ಥಿತ್ವವಾದುದರಿಂದ ದೇಶ ಕಾಲ ವಸ್ತುಗಳು ಸತ್ ಸ್ವರೂಪದಂತೆ ಭಾಸಿಸುವವು.

ಈ ನಿರಂತರವಾಗಿರುವ ಸರ್ವ ಮಂಗಳಮಯ ಸಚ್ಚಿದ್ಘನ ಲಿಂಗವ ಕಾಣುವಂಗೆ ಪಿಂಡಾಂಡ ಬ್ರಹ್ಮಾಂಡ ಭಾವವು ನಷ್ಟವು. ಅದಕ್ಕಾಗಿ ಬಸವಣ್ಣ ನಿನ್ನ ಅಂಗದಲ್ಲಿ ಆಚಾರವ ತೋರಿದುದು ಅಖಂಡ ದೃಷ್ಟಿ ಅಖಂಡ ಭಾವ ನೋಡಾ. ಇದುವೆ ಶುದ್ಧಾಚಾರ ನೋಡಾ. ಈ ಶುದ್ಧಾಚಾರದ ದೃಷ್ಟಿಯಲ್ಲಿ ಅಂಗ ಕೀಳು ಲಿಂಗ ಶ್ರೇಷ್ಠವೆಂಬುದಿಲ್ಲ , ಲಿಂಗಾಂಗ ಸಮರಸವಾದುದೆ ಶುದ್ಧ ಆಚಾರ. ಇದು ಸೀಮಾತೀತವಾದುದರಿಂದ ಲಿಂಗವೆಂದರುಹಿದ. ಅಂದರೆ ಶುದ್ಧ ಆಚಾರದ ಅರುವೆ ಲಿಂಗ. ಈ ಲಿಂಗವೇ ಶುದ್ಧಾಚಾರದರಿವು ಪ್ರಾಣವೆಂಬುದು ಉಸಿರು ಅಲ್ಲ, ಜಡವಲ್ಲ, ಚೇತನ.

ಚೇತನವೆಂಬುದು ಲಿಂಗದ ಪ್ರತಿಬಿಂಬ . ಲಿಂಗವೆಂಬುದು ಬಿಂಬ, ಅರ್ಥಾತ್ ಚೈತನ್ಯ ಅಥವಾ ಅರುವು ಜ್ಞಾನ ಸ್ವರೂಪ.

ಪ್ರತಿಬಿಂಬ ಬಿಂಬವು ಹೇಗೋ ಹಾಗೆ ಪ್ರಾಣರೂಪ ಚೇತನವೆಂಬುದು ಚೈತನ್ಯವಲ್ಲದೆ

ಅನ್ಯವಾಗದ್ದರಿಂದ ಚೈತನ್ಯವು ಹೇಗೆ ಅವಿನಾಶಿ ಹಾಗೆ ಪ್ರಾಣರೂಪ ಚೇತನವು ಸಚ್ಚಿತ್ ಸ್ವರೂಪ ಸತ್ತ ಆದುದರಿಂದ ಇದು ಕೆಡದ ಅರುವು , ನಾಶವಾಗದ ಅರುವು, ಇದಕ್ಕೆ ಉತ್ಪತ್ತಿ ನಾಶವಿಲ್ಲ ಅದಕ್ಕಾಗಿ ಇದು ಕೂಡ ಅಮರ ಅವಿನಾಶಿ ಅಖಂಡ ಅಕಲ್ಪಿತ ಅರೂಪ ಅನಂತ ಅಚಿಂತ್ಯವೆಂದರುಹಿದ. ಏಕೆಂದರೆ ಇದು ಗುಣಾತೀತ ಅರುವು ಮತ್ತು ಭಾವಾತೀತವು ಕೊನೆ ಮೊದಲಿಲ್ಲದುದು ನಿರಾತಂಕವು ಅವಿರೋಧವು ಸಮಸ್ವರೂಪವು ಏನೊಂದಾಗದ ಅರುವು. ಇದು ಇದ್ದಕ್ಕಿದ್ದಂತಿದ್ದ ಘನವು, ಇದು ನಿಸ್ಸೀಮವಾದುದರಿಂದ ಆದಿಯು ಅದುವೆ, ಮಧ್ಯವು ಅದುವೆ, ಅಂತ್ಯವು ಅದುವೆ, ಆದಿ ಅನಾದಿಯಿಂದತ್ತತ್ತ ಅದುವೆ ,ಇದು ಆವುದರೋಳ್ ಕೂಡದ ಅಗಲದ ಘನವಾದ್ದರಿಂದ ಇದು ಅಪ್ರಮಾಣ. ಇದು ಹೀಗೆಯೇ ಎಂದು ವಿವರಿಸಲಾಗದ ಅರುವಾದ್ದರಿಂದ ಈ ಅರುವೆ ಜಂಗಮವೆಂದು ತೋರಿದ.

ಈ ಜಂಗಮದ ಇರುವೆ ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತೆ ಇರುವುದರಿಂದ ಇದು ಲೇಸಾದ ಇರವು, ಸುಖದ ಇರವು, ನಿರ್ಭಯ ನಿಃಕಳಂಕ ಇರವು, ಇದು ಘನಕ್ಕೆ ಘನವಾದ ಇರುವಾದ್ದರಿಂದ ಇದುವೆ ಚೆನ್ನಮಲ್ಲಿಕಾರ್ಜುನನ ಘನದ ಘನತ್ವ ಸ್ವಮಹಿಮ್ನವೆಂದು ಈತನೇ ಹೆಸರಿಟ್ಟಿರುವುದರಿಂದ ಬಸವಣ್ಣನೆ ಚೆನ್ನಮಲ್ಲಿಕಾರ್ಜುನನನ್ನು ಹೆತ್ತ ತಂದೆ ಎನಗೀ ಕ್ರಮವನರುಹಿದನಯ್ಯ. ಅಂದರೆ ಆಚಾರವೆ ಲಿಂಗ, ಲಿಂಗದರುವೆ ಜಂಗಮ, ಜಂಗಮದರುವೇ ಚೆನ್ನಮಲ್ಲಿಕಾರ್ಜುನನೆಂದು ಹೆಸರಿಟ್ಟು ಎನಗೀ ಕ್ರಮವ ತೋರಿದನಯ್ಯ ಎಂದು ಅಕ್ಕಗಳು ಹೇಳಿದ್ದಾಳೆ. ಮತ್ತಂ ಅಕ್ಕಗಳು ಅನಾದಿಪರ ಶಿವನು ತಾನೆ ಜಗದ್ಧಿತಾರ್ಥವಾಗಿ ಮರ್ತ್ಯಕ್ಕೆ ಅವತರಿಸಿ ಬಸವಣ್ಣನೆಂಬ ನಾಮಕರಣಂಧರಿಸಿ ವೀರಶೈವ ಮಾರ್ಗವನರುಪದಕ್ಕೆ ಭಾವ ವಿವರವನೊಳಕೊಂಡು ಚರಿಸಿದನೆಂದು ಬಸವರಾಜ ದೇವರ ಮಹಾತ್ಮೆಯ ಕೊಂಡಾಡುವ ಪ್ರಸ್ತಾವದ ವಚನ.

**50**

**ಶಿವ ಶಿವಾ ಆದಿ ಅನಾದಿಗಳೆಂಬೆರಡಿಲ್ಲದ ನಿರವಯವಾಗಿಪ್ಪ ಶಿವ.**
**ನಿಮ್ಮ ನಿಜವ ನಾರಯ್ಯ ಬಲ್ಲರು ? ವೇದಂಗಳಿಗಬೇಧ್ಯನು ಶಾಸ್ತ್ರಕ್ಕಸಾಧ್ಯನು.**
**ಪುರಾಣಕ್ಕೆ ಪುಣ್ಯನು ಆಗಮಕ್ಕಗೋಚರನು. ತರ್ಕಕ್ಕೆ ಅತರ್ಕ್ಯನು.**
**ವಾಙ್ಮನೋತೀತನೆಂಬ ಪರಶಿವಲಿಂಗವನು ಕೆಲಬರು ಸಕಲನೆಂಬರು.**
**ಕೆಲಬರು ನಿಃಕಲನೆಂಬರು ಕೆಲಬರು ಸೂಕ್ಷ್ಮನೆಂಬರು, ಕೆಲಬರು ಸ್ಥೂಲನೆಂಬರು.**
**ಈ ಬಗೆಯ ಭಾವದಿಂದ ಹರಿಬ್ರಹ್ಮರು ಇಂದ್ರಚಂದ್ರರು.**
**ಕಾಲ ಕಾಮ ದಕ್ಷ ದೇವ ಮಾನವ, ಮಾನವರೊಳಗಾದವರೆಲ್ಲರು.**
**ಕಾಣಲರಿಯದೆ ಅಜ್ಞಾನದಿಂದ ಭವಭಾರಿಗಳಾಗಿ ಹೋದರು .**
**ಈ ಪರಿಗಳಲ್ಲಿ ಬಯಲಾಗಿ ಹೋಗಬಾರದೆಂದು ನಮ್ಮ ಬಸವಣ್ಣನು**
**ಜಗದ್ಧಿತಾರ್ಥವಾಗಿ ಮರ್ತ್ಯಕ್ಕವತರಿಸಿ ವೀರಶೈವ ಮಾರ್ಗವ ನರಪುವದಕ್ಕೆ**
**ಭಾವನ್ನವಿವರವನೊಳಕೊಂಡು ಚರಿಸಿದವನದೆಂತೆಂದೊಡೆ**
**ಗುರುಕಾರುಣ್ಯವೇದ್ಯನು , ವಿಭೂತಿ ರುದ್ರಾಕ್ಷಿ ಧಾರಕನು , ಪಂಚಾಕ್ಷರಿ ಭಾಷಾ ಸಮೇತನು,**
**ಲಿಂಗಾಂಗ ಸಂಬಂಧಿ , ನಿತ್ಯ ಲಿಂಗಾರ್ಚಕನು ,**
**ಅರ್ಪಿತದಲ್ಲಿ ಅವಧಾನಿ, ಪಾದೋದಕ ಪ್ರಸಾದ ಗ್ರಾಹಕನು**

**ಗುರು ಭಕ್ತಿ ಸಂಪನ್ನನು , ಏಕ ಲಿಂಗಾನಿಷ್ಠ ಪರನು , ಚರಲಿಂಗ ಲೋಲುಕ್ತನು ,**
**ಶರಣ ಸಂಗಮೇಶ್ವರನು , ತ್ರಿವಿಧಕ್ಕಾಯತನು , ತ್ರಿಕರಣ ಶುದ್ಧನು ,**
**ತ್ರಿವಿಧ ಲಿಂಗಾಂಗ ಸಂಬಂಧಿ , ಅನ್ಯ ದೈವಸ್ಮರಣೆಯ ಹೊದ್ದ,**
**ಭವಿಯ ಸಂಗವ ಮಾಡ , ಭವಿಯ ಪಾಕವ ಕೊಳ್ಳ ,ಪರ ಸ್ತ್ರೀಯರ ಬೆರಸ ,**
**ಪರಧನವನೊಲ್ಲ, ಪರನಿಂದೆಯನಾಡ , ಅನೃತವನುಡಿಯ ,**
**ತಾಮಸ ಭಕ್ತಿಯ ಸಂಗವ ಮಾಡ , ಗುರುಲಿಂಗ ಜಂಗಮಕ್ಕೆ ಅರ್ಥ ಪ್ರಾಣಾಭಿಮಾನ**
**ಮುಂತಾದವೆಲ್ಲವ ಸಮರ್ಪಿಸಿ ಪ್ರಸಾದ ಮುಂತಾಗಿ ಭೋಗಿಸುವ.**
**ಜಂಗಮನಿಂದೆ ಸೈರಿಸ, ಪ್ರಸಾದ ನಿಂದೆಯ ಕೇಳಾ, ಅನ್ಯರನಾಸೆಗೆಯ್ಯ, ಪಾತ್ರ ಸತ್ಪಾತ್ರವನರಿತ**
**ಚತುರ್ವಿಧ ಪದವಿಯ ಹಾರ, ಅರಿಷಡ್ವರ್ಗಕ್ಕೆ ಅಳುಕ ,**
**ಕುಲಾರಿ ಮದಂಗಳ ಬಗೆಗೊಳ್ಳ , ದ್ವೈತಾದ್ವೈತವ ನುಡಿವನಲ್ಲ,**
**ಸಂಕಲ್ಪ ವಿಕಲ್ಪ ಮಾಡುವವನಲ್ಲ ,ಕಾಲೋಚಿತವ ಬಲ್ಲ ಕ್ರಮಯುಕ್ತನಾಗಿ ,**
**ಷಟ್‌ಸ್ಥಲಭರಿತ ಸರ್ವಾಂಗ ಲಿಂಗಿ, ದಾಸೋಹ ಸಂಪನ್ನ ,**
**ಇಂತೀ ಐವತ್ತೆರಡು ವಿಧದಲ್ಲಿ ನಿಪುಣನಾಗಿ ಮೆರೆದ ನಮ್ಮ ಬಸವಣ್ಣನು .**
**ಆ ಬಸವಣ್ಣನ ಶ್ರೀ ಪಾದಕ್ಕೆ ಅಹೋ ರಾತ್ರಿಯಲ್ಲಿ**
**ನಮೋ ನಮೋ ಎಂದು ಬದುಕಿದೆನು ಕಾಣಾ ಚೆನ್ನಮಲ್ಲಿಕಾರ್ಜುನ.**

**ತಾತ್ಪರ್ಯ : ಶಿವ ಶಿವಾ ಆದಿ ಅನಾದಿಗಳೆಂಬೆರಡಿಲ್ಲದ ನಿರವಯವಾಗಿಪ್ಪ ಶಿವ ನಿಮ್ಮ ನಿಜವನಾರಯ್ಯ ಬಲ್ಲವರು :** ನಿರವಯವಾಗಿಪ್ಪ ಶಿವ , ವಿಭಾಗವಾಗದ ಶಿವ , ನಿಸ್ಸೀಮ ಶಿವ , ಘನಕ್ಕೆ ಘನ, ಇದನಾರಯ್ಯ ಬಲ್ಲವರು ? ಇದು ಆದಿ ಎಂದರೆ ರೂಪಕ್ಕಿಂಬಾಗಿತ್ತು, ಅನಾದಿ ಎಂದರೆ ಶಬ್ಧಕ್ಕಿಂಬಾಗಿತ್ತು. ಆದಿ ಎಂದರೆ ಪ್ರಕೃತಿ, ಅನಾದಿ ಎಂದರೆ ಪುರುಷ. ಇವೆರಡಕ್ಕೂ ನಿಲುಕದ್ದು ನಿರವಯ, ಈ ನಿರವಯವು ಸಾಕಾರ ಎಂಬುದಕ್ಕೂ ಮೀರಿದುದು , ನಿರಾಕಾರ ಎಂಬುದಕ್ಕೂ ಮೀರಿದುದು.

ಸಕಲ ಕಲೆಗಳಿಗೆ ಮೀರಿದ ಪದವೆ ನಿರವಯ ಪದ ನಿಜಪದ , ಅದುವೆ ಶಿವ ಪದ. ಈ ನಿರವಯವಾಗಿಪ್ಪ ಶಿವ ನಿಮ್ಮ ನಿಜವನಾರಯ್ಯ ಬಲ್ಲವರು .

ಬಲ್ಲವರೆಂದರೆ ವಾಙ್ಮನೋತೀತ ಬಸವ , ಬಸವರಸನೆ ಯತಾರ್ಥ ಬಲ್ಲವನಾದುದರಿಂದ ವೇದಂಗಳಿಗಬೇಧ್ಯನು. ವೇದವೆಂದರೆ ಗುಣಂಗಳಿಂದುಕ್ತವು, ಕಥನದಿಂದುಕ್ತವು ,ವಿಭಾಗದಿಂದುಕ್ತವು, ಖಂಡ ದೃಷ್ಟಿಯುಳ್ಳದ್ದು , ಅಖಂಡನ ತೋರಿಸುವುದೆಂತು ?ಅಕಥನೀಯವು ಕಥನದಿಂದುಕ್ತವೇ ? ಏನೊಂದುಸುರಲು ಬಾರದ ಘನ,ಅದನ್ನು ಗುಣದಿಂದ ಗುಣಿಸುವದಾದರೂ ಅದೆಂತು, ಶಬ್ದದಿಂದಲಾದರೂ ಉಸುರುವುದದೆಂತು ? ವೇದಂಗಳಿಗಬೇಧ್ಯನನ್ನು , ವೇದವು ತಿಳಿಸುವದೆಂತು? **ಶಾಸ್ತ್ರಕ್ಕಸಾಧ್ಯ:** ಶಾಸ್ತ್ರವು ಉಪಕ್ರಮ ಉಪಸಂಹಾರವನ್ನು ಆಶ್ರೈಸಿ ನಿಂತಿರುವುದು .ನಿರಂತರ ನಿರಾತಂಕವಿಲ್ಲದೆ ಪರಮ ಸತ್ಯದೋಳ್ ಇಲ್ಲದ ಕಲ್ಪಿತನುತ್ಪತ್ತಿ ಮಾಡಿ , ಇಲ್ಲದುದು ಇಲ್ಲ ಮಾಡಲು ಯುಕ್ತಿ , ಪ್ರಯುಕ್ತಿ ಸಾಧಿಸಿ , ವಿಭಾಗಿಸಿ , ಕೊನೆಗೆ ಉಳುಮೆ ರೂಪವೆಂದು ಸಿದ್ಧ ಮಾಡುವದೆ ಶಾಸ್ತ್ರದ ಪ್ರಯೋಜನವಾಗಿದೆ.

ಶಾಸ್ತ್ರಕ್ಕಸಾಧ್ಯನಾದವನನ್ನು ಇದು ಆಸ್ತಿ ಎಂದು ಹೇಗೆ ಹೇಳುವುದು ? ಇದು ನಾಸ್ತಿ ಎಂದು ವಿಭಾಗಿಸಿ ಹೇಗೆ ಹೇಳುವುದು ? ಬೇರ್ಪಡಿಸಲು ಇಂಬುಗೊಡದ ಖಂಡಿತವಿಲ್ಲದಖಂಡ . ಇಲ್ಲಿ

ಆವುದು ನಿತ್ಯವೆಂದು ಹೇಳುವುದು ? ಆವುದು ಅನಿತ್ಯವೆಂದು ಹೇಳುವುದು ? ಪ್ರಕೃತಿ ಆವುದೆಂದು ಕಲ್ಪಿಸುವುದು ? ಪುರುಷ ಆವುದು ಎಂದು ಕಲ್ಪಿಸುವುದು ? ಇಲ್ಲಿ ಮರವು ಆವುದೆಂದೆನಬೇಕು? ಅರಿಯುವುದು ಆವುದೆಂದೆನಬೇಕು ? ಕಥನಕ್ಕಿಂಬು ಇರದಿರುವಾಗ ಇದು ವಿದ್ಯೆ, ಅವಿದ್ಯೆ,ವಿದ್ಯಾವಿದ್ಯೆ, ಇದು ಶಿವ, ಇದು ಶಕ್ತಿ, ಇದು ರೂಪ ,ಇದು ಅರೂಪ,ಇದು ನಾಮ , ಇದು ಅನಾಮ ,ಇದು ಪರಪ್ರಕಾಶ,ಇದು ಸ್ವಪ್ರಕಾಶವೆಂದು, ವಿಂಗಡಿಸುವದಾದರೂ ಹೇಗೆ ?ಕೊನೆಗೆ ಉಳುಮೆ ರೂಪವೆಂದು ಸಿದ್ಧಮಾಡುವುದು ಹೇಗೆ ? ಇಲ್ಲಿ ಅಜ್ಞಾನ ಆವುದಕ್ಕನ್ನಬೇಕು ? ಜ್ಞಾನ ಆವುದಕ್ಕನ್ನಬೇಕು ? ಹಾಗೂ ಇಲ್ಲಿ ಕಲ್ಪಿತನೆಲ್ಲಿ? ಅವನ ಬಂಧವೆಲ್ಲಿ ? ಮೋಕ್ಷವೆಲ್ಲಿ ? ಶಾಸ್ತ್ರವು ಲಕ್ಷಣಗಳನಾಶ್ರಯ ಮಾಡಿಕೊಂಡೆ ಆರಂಭವಾಗಿ ಲಕ್ಷವಸ್ತುವನ್ನು ಸನ್ನೆಯಿಂದ ಸೂಚಿಸುವುದೆ ಅದರ ಗುರಿ ಅಲ್ಲವೆ ?

ಆದಿ ಅನಾದಿಗಳೆಂಬೆರಡಿಲ್ಲದ ನಿರವಯವಾಗಿಪ್ಪ ಶಿವ, ಖಂಡಿತವಿಲ್ಲದ ಅಖಂಡನನ್ನು ತಿಳಿಸುವುದದೆಂತು ?

ಲಕ್ಷಣಗಳೇ ಸುಳ್ಳಾದ ಮೇಲೆ ಲಕ್ಷ್ಯವೆಂದು ಹೇಳುವದಾದರೂ ಅದು ಹೇಗೆ? ಯತಾರ್ಥವಾಗುವುದು ಲಕ್ಷಣ, ಲಕ್ಷಣವೆಂದುಸರಲು ಎಡೆಯಿಲ್ಲವಾದುದರಿಂದ, ಅವಿಲಕ್ಷವು ಅಂದರೆ ಲಕ್ಷಣಗಳಿಗೆ ಮೀರಿದುದು. ಲಕ್ಷನೆಂಬುವುದಕ್ಕೂ ಮೀರಿದುದು. ಅಲ್ಲಿ ಲಕ್ಷಣವ ಹೇಗೆ ಹೇಳುವುದು, ಲಕ್ಷಣಗಳಿಗಾಸ್ಪದವಿಲ್ಲದಿರುವಾಗ ಅದನ್ನು ಲಕ್ಷಿಸಿ ಹೇಳುವ ಲಕ್ಷ್ಯ ಹೇಗೆ ಯತಾರ್ಥವಾಗುವುದು ಅದಕ್ಕಾಗಿ ಅದ್ವಯಂ, ಅಮೂರ್ತಂ, ಪರಮವ್ಯಯಮ್, ಎಂದು ಹೇಳುವಲ್ಲಿ ಅದ್ವಿತೀಯವು ಎರಡಾದುದು ಹೇಗೆ ? ಒಂದಾದುದು ಹೇಗೆ ? ಆದುದ್ದೆಲ್ಲ ಕೃತ್ರಿಮ ಕ್ರಿಯೆ. ಏನೊಂದಾಗದ ಘನವಾವುದೋ ಅದುವೆ ಅದ್ವಯವು ಆಗಿದೆ.

ಅದ್ವಯವು ರೂಪಾರೂಪವಾದುದು ಹೇಗೆ ? ನಿತ್ಯಾನಿತ್ಯಾವಾದುದು ಹೇಗೆ ? ಪ್ರಕೃತಿ ಪುರುಷರಾದುದು ಹೇಗೆ ? ಮರವು ಅರುವು ಆದುದು ಹೇಗೆ ಬಂಧ ಮೋಕ್ಷವಾದುದು ಹೇಗೆ? ಹೀಗೆಯೆ ಎಂದು ನಿರ್ಣಯಿಸಿ ಹೇಳಲು ಬಾರದಿರುವುದರಿಂದ ಅಮೂರ್ತಂ ಪರಮವ್ಯಯಮ್ ಎಂದು ಹೇಳಿದಾಗ ಶಾಸ್ತ್ರದಲ್ಲಿ ಆದಿ ಅನಾದಿಗಳೆಂಬೆರಡಿಲ್ಲದ ನಿರವಯವಾಗಿಪ್ಪ ಶಿವನನ್ನು ಹುಡುಕಿದರೆ ಅದೆಂತು ಸಾಧ್ಯ? ಶಾಸ್ತ್ರಾಭಿಮಾನಿಗೂ ಅದೆಂತು ಸಾಧ್ಯ ? ಶಾಸ್ತ್ರ ವಾಸನೆಯುಳ್ಳವನಿಗೂ ಅದೆಂತು ಸಾಧ್ಯ?

ಏಕೆಂದರೆ ಶಾಸ್ತ್ರ ವೆಂದರೆ ಮಾಯಿಕ, ತೋರಿ ಇಲ್ಲವಾಗುವದು.ಉಪಕ್ರಮ ಮಾಡಿದಾಗ ತೋರುವುದು, ಉಪಸಂಹಾರ ಮಾಡಿದಾಗ ಇಲ್ಲವಾಗುವುದು. ಈ ಮಾಯಿಕ ತತ್ವದ ಸತ್ಯತ್ವ ಬುದ್ಧಿ ಹೀಗೆಯೆ ಎಂದು ನಿರ್ಣಯಿಸುವ ಅಭಿಮಾನ ಇದರ ಮಮಕಾರವುಳ್ಳ ವಾಸನೆ. ಈ ತ್ರಿವಿಧ ದೋಷವುಳ್ಳ ಮಾಯಿಕ ಹೃದಯ ಅಕಳಂಕವಾಗಿರುವ ನಿರ್ಮಾಯ ಶಿವ, ನಿರವಯ ಶಿವನ, ನಿಜಪದ ಅಸಾಧ್ಯವಾಗಿರುವದರಿಂದ ಶಾಸ್ತ್ರಕ್ಕಸಾಧ್ಯನೆಂದು ಹೇಳಿದ್ದಾರೆ.

**ಪುರಾಣಕ್ಕೆ ಪುಣ್ಯನು :** ಪುರಾಣವೇನು, ಪುಣ್ಯನನ್ನು ಪುಣ್ಯವನ್ನು ವರ್ಣಿಸುವುದು. ಪುಣ್ಯನು ಎಂತಹನು ಎಂಬುದನ್ನು ಅರಿತಿಲ್ಲ .ಪುಣ್ಯ ಎಂತಹುದು ಎಂಬುದನ್ನು ಪುಣ್ಯ ಪುಣ್ಯ ಎಂದು ಸ್ತುತಿಸಿಯೂ ಅರಿಯಲಿಲ್ಲ ಈ ಪುರಾಣಂಗಳು .

ಪುರಾಣವೆ ಪುಣ್ಯನನ್ನು ಪುಣ್ಯವನ್ನು ಅರಿಯದಿರುವಾಗ ಅದನ್ನು ನಂಬಿದ ಪುರಾಣಿಕ ಪುಣ್ಯ ಪಡೆಯುವ ಭಕ್ತವೃಂದ ಪುಣ್ಯದ ಪ್ರೇಮಿಗಳು . ಪುಣ್ಯವೆಂದರೇನು ? ಈ ಪುಣ್ಯದಿಂದ ಪುಣ್ಯನ

ದರ್ಶನವಾದರೂ ಆಗಿದೆಯಾ ? ಎಂದು ಪ್ರಶ್ನಿಸಿದರೆ ಅದಕ್ಕೆ ಶಬ್ದ ಮುಗ್ದದ ಉತ್ತರ ಸಿಗುತ್ತದೆ.

ಅದಕ್ಕಾಗಿ ಲಿಂಗಾಂಗ ಸಮರಸ ಜ್ಞಾನಿ ಶರಣರು ''ಹೊನ್ನು , ಹೆಣ್ಣು , ಮಣ್ಣು ಕೊಟ್ಟರೆ ಪುಣ್ಯವೆ ? ಇವರು ಇಕ್ಕುವುದಕ್ಕೆ ಇವರ ಒಡವೆಯೆ ? ನದಿಯ ಉದಕವ ತಿದ್ದಿ ನದಿಗೆ ಕೃಷ್ಣಾರ್ಪಣ ಮಾಡುವ ಬಾಲಕನ ತೆರನಂತೆ ಸತ್ಯ , ಅಮಲ, ಶಾಶ್ವತ ಘನ ಲಿಂಗವನರಿಯದೆ ಏನು ಕೊಟ್ಟರೂ ನಿಷ್ಫಲ ನೋಡಾ. ಬಸವಪ್ರಿಯ ಕೂಡಲ ಚೆನ್ನಬಸವಣ್ಣ''ಎಂಬ ಪ್ರಸಾದ ವಾಣಿಯಂತೆ ಸತ್ಯ, ಅಮಲ, ಶಾಶ್ವತ ಘನಲಿಂಗವನರಿತರೆ ಪುಣ್ಯ . ಮತ್ತು ತಾನು ಸಹಿತ ಅಖಿಲ ನಾಮರೂಪ ಜಗತ್ತು ಪುಣ್ಯನು ಎಂಬುದು ತನ್ನಿಂದ ತನಗದು ಸಹಜ ಸಿದ್ಧವಾಗುವುದು.

ಸತ್ಯ, ಅಮಲ, ಶಾಶ್ವತ ಘನಲಿಂಗ ಅರಿತರೆ ಪುಣ್ಯವೆಂದು ಹೇಳುವುದಲ್ಲದೆ ಕಥನದಿಂದ ಕೂಡಿದ ಮಾತ್ರಕ್ಕೆ ಅದು ಅರಿತ ಲಕ್ಷಣವಲ್ಲ. ಅದು ಪುಣ್ಯ ಪಡೆದ ಲಕ್ಷಣವೂ ಅಲ್ಲ. ಪುಣ್ಯನು ತಾನು ಸಹಿತ ಅಖಿಲ ಜಗವಾದ ಲಕ್ಷಣವಲ್ಲ. ಶಬ್ಧ ಮುಗ್ಧ ಶಿವ, ರೂಪಾರೂಪವಾಗದ ಶಿವ, ಅಕಥನೀಯ ಶಿವನನ್ನು ಯತಾರ್ಥವರಿತವರೆ ಪುಣ್ಯ ಪುರುಷರು. ಅವರೆ ನಿರವಯ ತತ್ವ ಅಳವಡಿಸಿಕೊಂಡುದರಿಂದ ಮಹಾಪುರುಷರು, ಮಹಾಂತರು, ಅವರು ಪುರಾಣ ಭಕ್ತರಲ್ಲ, ಪುರಾಣದ ಪ್ರಿಯರಲ್ಲ. ನಿರವಯ ರೂಪಿ ಶಿವನ ಪ್ರಿಯರು, ಲಿಂಗಾಂಗ ಸಮರಸ ಪ್ರಿಯರು, ಸ್ವಯ ಪ್ರಿಯರು . ಅದಕ್ಕಾಗಿ ಪುರಾಣಕ್ಕೆ ಪುಣ್ಯನೆಂದು ಹೇಳಿದ್ದಾಳೆ.

**ಆಗಮಕ್ಕಗೋಚರ :** ಆಗಮವೆಂದರೆ ಜ್ಞಾನ ಕ್ರಿಯೆಗಳ ಸಮನ್ವಯ. ಜ್ಞಾನ ಕ್ರಿಯೆಗಳಿಗೆ ಪ್ರಾಧಾನ್ಯಕೊಡುವ ದೃಷ್ಟಿ ಇಲ್ಲಿ ಕ್ರಿಯೆಕ್ಕೂ ಗೌರವ, ಜ್ಞಾನಕ್ಕೂ ಗೌರವ, ಕ್ರಿಯೆಯಿಲ್ಲದ ಜ್ಞಾನ ನಿಷ್ಪ್ರಯೋಜಕವೆಂದು ಹೇಳುವ ಆಗಮಕಾರರ ಅಭಿಮತ .

ಆದಿ ಅನಾದಿಗಳೆಂಬೆರಡಿಲ್ಲದ ನಿರವಯ ಶಿವನ ನಿಜದ ನಿಲುವು ಆಗಮಕಾರರಿಗೆ ಅಗೋಚರವೆಂದು ಅಕ್ಕ ಹೇಳಿದ್ದಾಳೆ.

ಏಕೆಂದರೆ ಆಗಮಕಾರರು ಜ್ಞಾನ ಕ್ರಿಯೆ ಸಮನ್ವಯದಭಿಮಾನಿಗಳು . ಈ ಅಭಿಮಾನವೆ ಆದಿ ಅನಾದಿಗಳೆಂಬೆರಡಿಲ್ಲದ ನಿರವಯ ಶಿವನನ್ನು ತಿಳಿಯಗೊಡದಂತೆ ಮಾಡಿತು. ಆದಿ ಎಂದರೆ ರೂಪಕ್ಕೊಳಗಾಯಿತು. ಅನಾದಿ ಎಂದು ಶಬ್ದಕ್ಕಿಂಬುವಾಡಿತ್ತು. ಈ ಎರಡಕ್ಕೂ ಇಂಬು ಕೊಡದಿರುವಾಗ ಅಲ್ಲಿ ಕ್ರಿಯೆಯೂ ಇಲ್ಲ , ಮತ್ತು ಶಬ್ದದಿಂದುಕ್ತವಾದ ಜ್ಞಾನವು ಇಲ್ಲ .ಅದಕ್ಕಾಗಿ ಅಕ್ಕನು ನಿರವಯ ಶಿವನೆಂದು ಹೇಳಿದ್ದಾಳೆ.

ಈ ನಿರವಯ ಶಿವ ನಾದುದರಿಂದ ನಿಃಕ್ರಿಯೆ ಶಿವ , ನಿಃಶಬ್ದ ಶಿವ, ನಿಃಕ್ರಿಯೆ ಶಿವನಲ್ಲಿ ಕ್ರಿಯೆ ಮಾಡುವುದು ಹೇಗೆ ? ನಿಃಶಬ್ದ ಘನ ಶಿವನಲ್ಲಿ ಶಬ್ದ ರೂಪ ಜ್ಞಾನವೆಲ್ಲಿ ? ಜ್ಞಾನಾತೀತನು ಜ್ಞಾನಕ್ಕೆ ನಿಲುಕುವದೆಂತು ? ನಿಃಕ್ರಿಯೆನು ಕ್ರಿಯೆಗಳಿಗೆ ನಿಲುಕುವದದೆಂತು ? ಇದು ಕಾರಣ ಆಗಮವನ್ನು ನಂಬಿದ ಭಕ್ತರು ಜ್ಞಾನ ಕ್ರಿಯೆಗಳೆರಡನ್ನು ಸಮ ಮಾಡುವದರಲ್ಲಿ ಇವರು ಪ್ರಿಯರಾದರಲ್ಲದೆ ಜ್ಞಾನಾತೀತ ಶಿವ ನಿಃಕ್ರಿಯೆ ಶಿವರೂಪಿ ನಿರವಯ ತತ್ವ ತಿಳಿಯಲು ಇವರಿಗೆ ಅಸಾಧ್ಯವಾದುದರಿಂದ ಆಗಮಕ್ಕಗೋಚರನೆಂದು ಹೇಳಿದ್ದಾಳೆ.

**ತರ್ಕಕ್ಕೆ ಅತರ್ಕ್ಯನು :** ತರ್ಕವು ಭೇದವನ್ನಾಶ್ರಯ ಮಾಡಿಕೊಂಡೆ ಪ್ರಾರಂಭವಾಗಿದೆ. ಎಲ್ಲಿ ವಿಷಮ ನೋಟವಿದೆ ಅಲ್ಲಿ ವಿಷಮ ದೃಶ್ಯವಾಗಿ ಭಾಸಿಸುವದು. ಅಲ್ಲಿಯೆ ವಿಷಮ ಸಂಕಲ್ಪ ವಿಕಲ್ಪ, ಅಲ್ಲಿಯೆ ವಿಷಮ ಭಾವ , ವಿಷಮ ಜ್ಞಾನ, ವಿಷಮ ಕಲ್ಪಿತ ಕಲ್ಪಿತರು. ಒಬ್ಬನು ಭೇದ ಸಾಧಿಸಿದರೆ ಇನ್ನೊಬ್ಬನು ಅದನ್ನು ತಿರಸ್ಕರಿಸುತ್ತಾನೆ. ಒಬ್ಬನು ಶಕ್ತಿಯು ಶ್ರೇಷ್ಠವೆಂದು ಸಾಧಿಸಿದರೆ ಇನ್ನೊಬ್ಬನು

ಶಿವನು ಶ್ರೇಷ್ಟವೆಂದು ಸಾಧಿಸುವವನು. ಒಬ್ಬನಿಗೆ ದ್ವೈತ ತತ್ವಪ್ರಿಯವಾಗಿ ವಿಶಿಷ್ಠಾದ್ವೈತಕ್ಕೆ ಅಪ್ರಿಯನಾಗಿರುವನು. ವಿಶಿಷ್ಟಾದ್ವೈತಕ್ಕೆ ಪ್ರಿಯನಾದವನು ಅದ್ವೈತಕ್ಕೆ ಅಪ್ರಿಯನು ಆಗಿರುವನು. ಅದ್ವೈತ ತತ್ವಕ್ಕೆ ಪ್ರಿಯನಾದವನು ಶಕ್ತಿ ವಿಶಿಷ್ಟಾ ದ್ವೈತಕ್ಕೆ ಅಪ್ರಿಯ ಆಗಿರುವನು. ಶಕ್ತಿ ವಿಶಿಷ್ಟಾದ್ವೈತಕ್ಕೆ ಪ್ರಿಯನಾದವನು ಇವೆಲ್ಲಕ್ಕೂ ಅಪ್ರಿಯನಾಗಿರುವನು.

ಇವರುಗಳು ಆದಿ ಅನಾದಿಗಳೆಂಬೆರಡಿಲ್ಲದ ನಿರವಯನಾಗಿಪ್ಪ ಶಿವ ಸಮಸ್ವರೂಪ ಶಿವ ನಿರಂತರ ನಿರಾತಂಕವಿಲ್ಲದೆ ಬೆಳಗುವ ನಿರವಯ ಶಿವನನ್ನು ಅರಿಯದ್ದರಿಂದ ಭೇದ ಸಾಧಿಸಿ ತರ್ಕ ಮಾಡಿದರು. ಇವರುಗಳೆಲ್ಲರಿಗೂ ನಿಲುಕದ್ದರಿಂದ ತರ್ಕಕ್ಕೆ ಅತರ್ಕ್ಯನು ಎಂದು ಹೇಳಿದ್ದಾಳೆ.

**ವಾಙ್ಮನೋತೀತ ಪರಶಿವ ಲಿಂಗವನು ಕೆಲಬರು ಸಕಲನೆಂಬರು :** ಕೆಲಬರು ನಿಃಕಲನೆಂಬರು ಸ್ಥೂಲನೆಂಬರು ಸೂಕ್ಷನೆಂಬರು.

ವಾಙ್ಮನೋತೀತ ಪರಶಿವಲಿಂಗ ವಾಣಿಗತೀತ, ಕಲ್ಪನೆಗತೀತ, ವಾಣಿಗತೀತನೆಂದರೆ ಶೃತಿಗೆ ನಿಲುಕದವ, ಶಬ್ದಕ್ಕೆ ನಿಲುಕದವ, ರೂಪಕ್ಕತೀತ, ನಾಮಕ್ಕತೀತ, ಕಲ್ಪನೆಗತೀತನೆಂದರೆ, ನಾನು ಜೀವನೆಂಬ ವಿಕಲ್ಪಕ್ಕೂ ಅತೀತ, ನಾನು ಶಿವನೆಂಬ ಸಂಕಲ್ಪಕ್ಕೂ ಅತೀತ. ಅತೀತನಾದ್ದರಿಂದ ನೆನಹಿಗೂ ನಿಲುಕದವನು, ನಿರ್ಣಯಕ್ಕೂ ಮೀರಿದವನು, ಭಾವಕ್ಕೂ ಮೀರಿದವನು, ಚಿಂತನೆಗೆ ಒಳಗಾಗದವನು. ಇಂತಹ ಅಪ್ರಮಾಣಗಮ್ಯವಾದ ಕೆಲಬರು ಸಕಲನೆಂಬರು. ಅಂದರೆ ಕಲೆಗಳುಳ್ಳವನು ಸಗುಣನು, ಸರ್ವಜ್ಞನು, ಸರ್ವಶಕ್ತಿಯಿಂದುಕ್ತನು , ಸ್ವತಂತ್ರನು , ಸರ್ವಾಂತರ್ಯಾಮಿಯು ಮಹಾ ಮಹಿಮನು ಎನ್ನುವರು.

**ಕೆಲಬರು ನಿಃಕಲನೆಂಬರು :** ಅಂದರೆ ಕಲೆಗಳಿಲ್ಲದವನು ನಿರುಪಾಧಿಯು ನಿರ್ಮಾಯ ನಿರ್ಗುಣನೆಂದು ಹೇಳಿದರು. ಅಂದರೆ ಗುಣಗಳಿಲ್ಲದವನು, ಉಪಾಧಿಯಿಲ್ಲದವನು, ಆವಾವ ಕಲೆಗಳಿಲ್ಲದವನೆಂದರು.

ಕೆಲಬರು ಸೂಕ್ಷ್ಮಾತಿ ಸೂಕ್ಷ್ಮನೆಂದು, ಕೆಲಬರು ದೊಡ್ಡದಾದುದಕ್ಕಿಂತಲೂ ದೊಡ್ಡದೆಂದು ಈ ಬಗೆಯ ಭಾವದಿಂದ ಹರಿಬ್ರಹ್ಮರು ಇಂದ್ರ ಚಂದ್ರರು, ಕಾಲ, ಕಾಮ, ದಕ್ಷ, ದೇವ, ದಾನವ ಮಾನವರೊಳಗಾದವರೆಲ್ಲರು ನಿರವಯ ಶಿವನನ್ನು ಕಾಣಲರಿಯದೆ ಭವಭಾರಿಗಳಾಗಿ ಹೋದರು. ಅಂದರೆ ಈ ರೀತಿ ಬೇರೆ ಬೇರೆ ಭಾವದಿಂದುಕ್ತರಾಗಿ ಹರಿಬ್ರಹ್ಮರು, ಇಂದ್ರ ಚಂದ್ರರು, ದೇವತಾದೈತ್ಯರು, ಮಾನವರು, ಪರಶಿವ ಲಿಂಗವನರಿಯದೆ ಜನನ ಮರಣರೂಪಿ ಭವ ಚಕ್ರಕ್ಕೆ ಗುರಿಯಾದರೆಂದು ಹೇಳುತ್ತಾಳೆ ಅಕ್ಕ.

ಇವರೆಲ್ಲರು ಲಿಂಗಮಯ ಘನದೋಳ್ ಮಾಯಾಮಯವನ್ನೆ ಕಂಡರಲ್ಲದೆ ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತಿರುವ ನಿರವಯ ಶಿವ, ವಾಙ್ಮನೋತೀತವಾದ ಪರಶಿವಲಿಂಗವರಿಯಲಿಲ್ಲ, ಅರಿಯದ್ದರಿಂದ ಮಾಯಿಕರಾಗಿ ಭವಭಾರಿಗಳಾಗಿ ಹೋದರು. ಅದಕ್ಕಾಗಿ ದೇವತಾ ದೈತ್ಯ ಮಾನವ ಆರೆ ಆಗಲಿ ವ್ಯರ್ಥ ಜೀವನವಾಗಬಾರದೆಂದು ದಯಾಮಯನಾದ ಬಸವಣ್ಣನು ಜಗದ್ಧಿತಾರ್ಥವಾಗಿ ಮರ್ತ್ಯಕ್ಕವತರಿಸಿ ವೀರಶೈವ ಮಾರ್ಗ ಅರುಪುದಕ್ಕೆ ಐವತ್ತೆರಡು ಆಚಾರವನೊಳಕೊಂಡು ಚರಿಸಿದನು. ಅದೆಂತೆಂದೊಡೆ .

**ಗುರುಕಾರುಣ್ಯವೇದ್ಯನು :** ನಿಃಶಬ್ದ ಘನ ಗಂಭೀರ ಸುಖಮಯ ತಾನಾಗಿದ್ದರೂ ದಯಾಮಯನಾಗಿ ಮರ್ತ್ಯಕ್ಕವತರಿಸಿ ಜಗದ್ಧಿತಾರ್ಥದ ಅಭಿನಯ, ದೇವ ದೇವ ಬಸವ ದೇವನ ಅಭಿನಯ. ಅಹಹ ಇದೆಂಥ ನಿರಾಡಂಬರದ ಘನ! ದೇವತಾ ದೈತ್ಯರಿಗೂ ಮಾನವರಿಗೂ

ಮನುಗಳಿಗೂ ಮುನಿಗಳಿಗೂ ತಪಸ್ವಿಗಳಿಗೂ ಗುರುಕಾರುಣ್ಯಬೇಕು ಎಂಬುದಕ್ಕೆ ತಾನೆ ಗುರು ಕಾರುಣ್ಯ ವೇದ್ಯನಾಗಿದ್ದಾನೆ. ಏಕೆಂದರೆ ಗುರು ಕರುಣೆಯಾಗದ ವಿನಃ ವಾಙ್ಮನೋತೀತವಾದ ಪರಶಿವ ಲಿಂಗವು ವೇದ್ಯವಾಗದು. ಕಾರಣ ಸಕಲರು ಈ ಪಥ ಅವಶ್ಯವಾಗಿ ಅನುಸರಿಸಬೇಕೆಂದು ತೋರಿಸಲು ತಾನು ಅರಿಯದವನಂತೆ ನಟಿಸಿ ಗುರು ಭಕ್ತನಾಗಿ ಶ್ರೀ ಗುರುವಿನ ಘನತ್ವವನ್ನು ವರ್ಣಿಸಿರುವನು. ಶ್ರೀ ಗುರು ವಾಙ್ಮನೋತೀತವಾದ ಪರಶಿವನಾದುದರಿಂದ ಭಕ್ತರ ಕಲ್ಯಾಣಕ್ಕಾಗಿ ಶೃತಿ ಸ್ಮೃತಿಗಳು ಆತನ ಆಕಾಶವಾಣಿಯಿಂದ ಪ್ರಕಟವಾದವುಗಳು. ಇವುಗಳೇ ಗುರು ಘನದ ಕರುಣಾಜಲ.

**ಬಸವರಸ ವಿಭೂತಿ ರುದ್ರಾಕ್ಷಿಧಾರಕನು :** ಬಸವರಸನ ವಿಭೂತಿ ಧರಿಸಿದ ಚಿನ್ನ ಎಂತಹುದು ಎಂದರೆ ವಿಭೂತಿ ಇದು ಚಿದ್ ವಿಭೂತಿ. ಚಿಂತನ ಭಸ್ಮ ಮಾಡಿದ ವಿಭೂತಿ, ಮಲ ತ್ರಯದ ಚಿಂತನ ಭಸ್ಮ ಮಾಡಿದ ಚಿನ್ಹ, ಚಿದ್ಘನ ಲಿಂಗದ ಮಹಿಮೆಯಲ್ಲಿ ಮನ ಮಗ್ನವಾದ ಚಿದ್‌ವಿಭೂತಿ ಧರಿಸಿದ ಚಿನ್ಹ, ರುದ್ರಾಕ್ಷಿ ಧರಿಸಿದ ಚಿನ್ಹ, ರುದ್ರನ ಜ್ಞಾನದ ಚಿನ್ಹ, ಜ್ಞಾನದೇವನ ಚಿನ್ಹ, ದಿವ್ಯ ಜ್ಞಾನದ ಚಿನ್ಹ. ಜ್ಞಾನಾಗ್ನಿಯಿಂದ ಸಂಚಿತ ಆಗಾಮಿ ಪ್ರಾರಬ್ಧ ಮೂರು ಕರ್ಮಗಳು ದಗ್ಧವಾದ ಚಿನ್ಹವೆ ರುದ್ರಾಕ್ಷಿ ಧರಿಸಿದ ಚಿನ್ಹ. ಇದು ಮುಕ್ಕಣ್ಣನ ಚಿನ್ಹ ಮುಕ್ತಾತ್ಮನ ಚಿನ್ಹ.

**ಪಂಚಾಕ್ಷರಿ ಭಾಷಾ ಸಮೇತನು :** ಅಂದರೆ ಪಂಚಾಕ್ಷರಿ ಭಾಷೆ ಇದು ಅಂಗ ಲಿಂಗ ಸಮರಸದ ಭಾಷೆ.ಜೀವ ಶಿವರೇಕತ್ವ ಭಾಷೆ,ಅಸಿಪದಭಾಷೆ, ಅಖಂಡ ಭಾಷೆ, ನಿರ್ಮಾಯ ಭಾಷೆ, ನಿಷ್ಕಳಂಕ ಭಾಷೆಯಿಂದುಕ್ತನು. ಈ ಬಸವರಸನ ಭಾಷೆ ಪೂರ್ಣ ಪರಮಾನಂದದಿದುಕ್ತವಾದ ಭಾಷೆಯಾದ್ದರಿಂದ ಈ ಘನಮಹಿಮನ ಭಾಷೆ ಚಿನ್ಮಯ ಭಾಷೆ ಚೈತನ್ಯದ ಭಾಷೆ ನೋಡಾ.

**ಈತನು ನಿತ್ಯ ಲಿಂಗಾರ್ಚಕನು :** ಈ ಲಿಂಗಾರ್ಚಕನ ಘನವನೇನೆಂಬೆ , ಸಮರತಿ ಸಮಕಳೆಯ ಅರ್ಚನೆಯಾದುದರಿಂದ ಈ ಲಿಂಗಾರ್ಚಕನ ನೆನಹಿನ ಸುಖವಾದ್ದರಿಂದ ಈತನ ನೋಟ ಲಿಂಗ , ಕೂಟ ಲಿಂಗ , ಆಲಿಂಗನ ಲಿಂಗ , ಸಂಗ ಲಿಂಗ , ಎಲ್ಲಿ ನೋಡಿದಡಲ್ಲಿ ಲಿಂಗ ಸಂಗದ ಸುಖ. ಈ ಸುಖದ ಅರ್ಚನೆಯೆ ನಿತ್ಯ ಲಿಂಗಾರ್ಚನೆಯಾದ್ದರಿಂದ ಆತ ಸಮರತಿಯ ಸಮಕಲೆಯ ಘನನಾಗಿರುವುದರಿಂದ ಸಮಸ್ವರೂಪವಾಗಿರುವ ಸಚ್ಚಿದ್ಘನ ಲಿಂಗದೇವನು. ಈ ಘನಲಿಂಗದ ದಿವ್ಯದೃಷ್ಟಿಗೆ ನುಡಿಯಿಲ್ಲ, ನಡೆಯಿಲ್ಲ, ಈ ಘನಮಹಿಮನ ನುಡಿಕೆಟ್ಟ ನುಡಿಯಾದ್ದರಿಂದ ದೇಹವೆಂದರಷ್ಟೆ, ದೇಹಿ ಎಂದರಷ್ಟೆ , ಸಾವಯವವೆಂದರಷ್ಟೆ, ನಿರವಯವೆಂದರಷ್ಟೆ, ನಿರ್ವಿಕಾರ ಪ್ರಭು ನೆಲೆಯಿಲ್ಲದ ನಿಲುವಿನ ಪ್ರಭು.

ಈ ಪ್ರಭುವೆ ನಿತ್ಯಲಿಂಗಾರ್ಚಕನಾದ ಮೇಲೆ ಆ ಲಿಂಗಾರ್ಚನವದನೇನು ಹೇಳುವುದು ? ಲಿಂಗವೆ ಜಗದ್ಹಿತಾರ್ಥವಾಗಿ ಲಿಂಗಾರ್ಚನೆ ಮಾಡಿದುದು. ಅಲ್ಲಿ ಅಂಗನೆಂಬುದಿಲ್ಲ ಲಿಂಗನೆಂಬುದಿಲ್ಲ, ಸಂಗಿ ಎಂಬುದಿಲ್ಲ, ನಿಸ್ಸಂಗಿ ಎಂಬುವದಿಲ್ಲ, ಬೇರಾದುದಿಲ್ಲ , ಕೂಡಿದುದಿಲ್ಲ, ಇದು ಅಗಲಲಿಲ್ಲದ ಕೂಟ, ನೋಡಲು ಬಿಚ್ಚಿ ಬೇರಾದಂತೆ ಕಂಡರೂ ಇದು ಅಚಿಂತ್ಯ ನಿಲಯ , ಇದು ಬೇರ್ಪಡಿಸಲಾಗದ ನಿಲಯ. ಚಿದ್ಘನ ಲಿಂಗವು ತಾನಾಗಿರುವುದರಿಂದ ಇದು ಕೆಡುವ ಹಿಡಿವ ಬಿಡುವ ಲಿಂಗಾರ್ಚನೆಯಲ್ಲ.

**ಇದು ನಿತ್ಯ ಲಿಂಗಾರ್ಚನೆ ಅರ್ಪಿತದಲ್ಲಿ ಅವಧಾನಿ :** ಅಂದರೆ ಅರ್ಪಿತದಲ್ಲಿ ಬಹು ಎಚ್ಚರಿಕೆಯುಳ್ಳಾತ ಏಕೆಂದರೆ ಅರ್ಪಿತವರಿತಾತನಾಗಿರುವುದರಿಂದ ರೂಪವನರ್ಪಿಸಿ ಅಂಗನೆನಲಿಲ್ಲ, ರುಚಿಯನರ್ಪಿಸಿ ಪ್ರಾಣವೆನಲಿಲ್ಲ , ಭಾವವರ್ಪಿಸಿ ನಿರ್ಭಾವದ ನಿಜದೊಳ್ ನಿಃಶಬ್ದನಾಗಿ ಘನ ಗಂಭೀರ ಸುಖದಲ್ಲಿರುವ ಘನವಂತನಿಗೆ ರೂಪ , ಲಿಂಗ ರುಚಿ , ಜಂಗಮವಾದುದರಿಂದ ಅರ್ಪಿಸುವ

ಅರ್ಪಣ ಮುನ್ನಿಲ್ಲ.

ಏಕೆಂದರೆ ಇಲ್ಲೆಂಬುದ ನಿಲ್ಲೆನಬಲ್ಲರೆ ಅರ್ಪಿತ. ಈ ಅರ್ಪಿತ ಯತಾರ್ಥ ಅಳವಟ್ಟುದದರಿಂದ ಆತ ಅರ್ಪಿತದಲ್ಲಿ ಅವಧಾನಿಯಾಗಿದ್ದಾನೆ. ಬಸವ ದೇವನ ಅರ್ಪಿತ ಅರ್ಪಿಸಿ ಅರ್ಪಿಸದ ನಿಲುವು ನಿರೂಪ ಲಿಂಗಕ್ಕೆ ರೂಪವರ್ಪಿಸುವದದೆಂತು? ಲಿಂಗದ ಘನತ್ವತಿಳಿಯದ್ದರಿಂದ ರೂಪನರ್ಪಿಸುವುದು. ಇದೆ ವಾಙ್ಮನೋತೀತವಾದ ಪರಾತ್ಪರ ಲಿಂಗವ ತಿಳಿಯುವಡೆ ಅರ್ಪಿಸುವ ಅರ್ಪಣ . ಅದು ಅರ್ಪಿಸಿ ಅರ್ಪಿಸದ ನಿಲುವಾದ್ದರಿಂದ ಅರ್ಪಿತದಲ್ಲಿ ಅವಧಾನಿ ಬಸವಣ್ಣ ಎಂದು ಅಕ್ಕ ಹೇಳಿರುವಳು.

ಜಂಗಮದ ಘನತ್ವತಿಳಿಯದ್ದರಿಂದ ರುಚಿ ಸುಖ ಆನಂದ ಬೇರೆಂಬುವದಕ್ಕಾಗಿತ್ತು. ಜಂಗಮದ ಘನತ್ವ ತಿಳಿವುಡೆ ರುಚಿ, ಸುಖ, ಆನಂದ. ಅಂದರೆ ತನ್ನ ಸ್ವಸುಖವೆ ಇರುವುದು. ಅದರ ಹೊರತು ಅನ್ಯವಾವುದು ಇಲ್ಲದಿರುವಾಗ ಇಲ್ಲಿ ಅರ್ಪಿಸುವವನಾರು ? ಅರ್ಪಿಸಿಕೊಳ್ಳುವವನಾರು ? ಇಲ್ಲಿ ಕರ್ತಾರೂಪಿ ಅಹಮಿಗಿಂಬಿಲ್ಲ . ನಿರ್ಭಾವ ಘನ, ನಿರಾಲಂಬ ಘನ, ಶಬ್ದ ಮುಗ್ದ ಘನ, ತತ್ವವರಿಯದ್ದರಿಂದ ಭಾವಂಗಳು ಬೇರಾಗಿ ಕಾಣಿಸುತ್ತಿದ್ದವು. ನಿರ್ಭಾವವೆಂಬುದು ಭಾವಾತೀತ ಘನ, ನಿರಾಲಂಬ ಘನವೆಂಬುವದದುವೆ ಜ್ಞಾನಾತೀತ ಘನ. ಏನೊಂದುಸುರಲು ಎಡೆಗೊಡದ್ದರಿಂದ ಶಬ್ದ ಮುಗ್ದ ಘನ, ಇದುವೆ ತಾನಾರೆಂದರಿತ ಘನ, ಅಂದರೆ ತನ್ನನ್ನು ತಾನು ಯತಾರ್ಥ ತಿಳಿದುದು. ಅಲ್ಲಿ ಆವಾವ ಭಾವಕ್ಕಿಂಬಿಲ್ಲ , ಮತಿಗಿಂಬಿಲ್ಲ , ಅರಿತೆನೆಂಬುದಕ್ಕಿಂಬಿಲ್ಲ , ಅರಿಯೆನೆಂಬುದಕ್ಕಿಂಬಿಲ್ಲ , ನಾನೆಂಬುದಕ್ಕಿಂಬಿಲ್ಲ , ನೀನೆಂಬುದಕ್ಕಿಂಬಿಲ್ಲ , ಗುರು ಶಿಷ್ಯರೋಳ್ ಮಾಯಿಕ ದೃಷ್ಟಿ ಮುನ್ನಿಲ್ಲ , ಬದ್ಧ ಮುಕ್ತನೆನ್ನುವ ಹಲುಬಾಟಕ್ಕಿಂಬುಕೊಡದ ಯತಾರ್ಥ ಜ್ಞಾನಿಯಾದುದರಿಂದ ಅರ್ಪಿತದಲ್ಲಿ ಅವಧಾನಿ ಎಂದು ಹೇಳಿದ್ದಾಳೆ.

**ಪಾದೋದಕ ಪ್ರಸಾದಿ ಗ್ರಾಹಕನು** : ಈ ಎಂಥ ಪಾದೋದಕ ಗ್ರಾಹಕ ! ಘನ ಚೈತನ್ಯ ಜಂಗಮದ ಪಾದೋದಕದ ಗ್ರಾಹಕ. ಈ ಪಾದೋದಕ ಜಲವಿಲ್ಲದ ಜಲದಿಂದಾದ ಪಾದೋದಕ. ಸಮತಾ ರೂಪಿ , ಸಚಿದ್ಘನದ ಪಾದೋದಕ , ಸ್ವಾನುಭವ ಪಾದೋದಕ, ಜ್ಞಾನಾಮೃತ ಪಾದೋದಕ. ಇದು ಪರಿಪೂರ್ಣ ಪರಮಾನಂದದ ಪರಮಾಮೃತದ ಘನ ಪಾದೋದಕವಾದುದರಿಂದ ತೆರಹಿಲ್ಲದ ನುಡಿ, ತೆರಹಿಲ್ಲದ ನಡೆ , ತೆರಹಿಲ್ಲದ ಸಂಭಾಷಣೆಯಾದುದರಿಂದ ಅಲ್ಲಿಯ ಪ್ರಸಾದ ಲಿಂಗ ಪ್ರಸಾದ, ಜಂಗಮ ಪ್ರಸಾದವೆಂಬುದು ಅಖಂಡ ಪ್ರಸಾದ, ಚಿನ್ಮಯ ಪ್ರಸಾದ. ಬಸವಣ್ಣ ಈ ಪಾದೋದಕ ಪ್ರಸಾದದ ಗ್ರಾಹಕನಾಗಿರುವುದರಿಂದ ಸಮ್ಯಕ ಪ್ರಸಾದಿ, ಸವೆಯದ ಸುಖದ ಪ್ರಸಾದಿಯಾಗಿ ಅಹಮಿಲ್ಲದ ಚಿದ್ಘನ ತಾನೇ ತಾನಾಗಿ ಪ್ರಕಾಶಿಸುವುದರಿಂದ ಅಖಂಡಾನಂದ ಶರಣ ಬಸವಪ್ರಭು ನೋಡಾ.

**ಗುರು ಭಕ್ತಿಸಂಪನ್ನರು** : ದಂಡಾದೀಶ ಬಸವರಸ ಶ್ರೀಗುರು ಭಕ್ತಿ ಸಂಪನ್ನ. ಶ್ರೀ ಗುರು ಎಂಬುದು ಕಾಣಬಾರದ ಗುರು . ಕಾಣಬಾರದ ಗುರುವಿನ ಗುರು ಭಕ್ತಿ ಸಂಪನ್ನ. ಈ ಭಕ್ತಿ ಸಂಪನ್ನತೆಯು ನಿರಹಂ ಭಾವದ ನಿಲಯ, ನಿರಾಡಂಬರ ನಿಲಯ, ತಾನೆನ್ನದ ನಿಲಯ, ತನ್ನದೆನ್ನದ ನಿಲಯ ನಿರ್ವಿಕಾರ ನಿಲಯ, ಪ್ರಶಾಂತ ನಿಲಯ . ಪ್ರಕಾಶಿಸುವ ಪ್ರಕಾಶಮಯ ಘನ . ಇಲ್ಲಿ ವಿಭಾಗ ದೃಷ್ಟಿಯಿಲ್ಲ. ಈ ನೆಲೆಯಿಲ್ಲದ ನಿಲುವಿನ ಘನತ್ವತಿಳಿಯಬೇಕಾದರೆ ಒಮ್ಮೆ ಅಹಂಕಾರಿಯಾಗಿ ಒಮ್ಮೆ ನಿರಹಂಕಾರಿಗಳಾದರೆ, ಅಲ್ಲಿ ಗುರು ಭಕ್ತಿ ಸಂಪನ್ನತ್ವವಿಲ್ಲ. ಅದಕ್ಕಾಗಿ ಶೃತಿಯು 'ನಿರ್ಲಜ್ಜಾ ಗುರು ಸನ್ನಿಧೌ' ಎಂದು ಹೇಳಿದೆ. ಏಕೆಂದರೆ ಶ್ರೀಗುರುವಿನ ಘನತ್ವಗೊತ್ತಾಗಬೇಕಾದರೆ ದಾಸೋಹಂ ಭಾವ ರೂಪಿ ಭಕ್ತಿ ಸಂಪನ್ನನಾಗಬೇಕು. ಚಿದಹಂನಶಿಸಿದ ಭಕ್ತನಾಗಬೇಕು. ಇದು ಕಾರಣ ಸರ್ವರಿಗೆ

ಶ್ರೀಗುರುವಿನ ದರ್ಶನವೇ ''ಪ್ರಕಾಶಮಯನಾಗಿದ್ದರೂ ಪರಪ್ರಕಾಶನು, ಸರ್ವರೂಪನಾಗಿದ್ದರೂ ಅಪರಿಚಿತನು, ಸರ್ವ ಸ್ಥಾನದೊಳಿದ್ದರೂ ಅಗಮ್ಯನು, ನಿರಂಜನ ಪ್ರಭು ನಾಗೇಶ್ವರಾ'' ನಿನ್ನ ಅನನ್ಯ ಭಕ್ತರಿಗೆ ಪರ ಪ್ರಕಾಶ ಸ್ವ ಪ್ರಕಾಶವೆನ್ನದೆ, ರೂಪಾರೂಪವೆನ್ನದೆ, ಒಳಹೊರಗೆನ್ನದೆ, ನಾನೀನೆನ್ನದೆ, ಇದ್ದಕ್ಕಿದ್ದಂತೆ ಘನಕ್ಕೆ ಘನವಾದುದನೇನೆಂಬೆ !

ಶ್ರೀ ಗುರು ಸರ್ವರೂಪನು ಏನೊಂದಾಗದ ಘನ ಸ್ವಮಹಿಮನೆಂಬುದು ನಮ್ಮಗಳ ಅನುಭವಕ್ಕೆ ಬರಬೇಕಾದರೆ ಗುರು ಭಕ್ತಿ ಸಂಪನ್ನರಾಗಬೇಕು. ಏಕೆಂದರೆ ಶೃತಿಗಗೋಚರ ವಾಙ್ಮನಕ್ಕಗೋಚರ.

ಶಾಸ್ತ್ರಕ್ಕಸಾಧ್ಯವಾದವನನ್ನು ಶೃತಿಯಿಂದ ಶಾಸ್ತ್ರದಿಂದ ಕಾಣುವೆನೆನ್ನುವುದು ಹೇಗೆ ಸಾಧ್ಯ? ಅದಕ್ಕಾಗಿ ಶ್ರೀ ಗುರುವೆಂಬ ಘನ ನಡೆನುಡಿಯಿಲ್ಲದ ಘನ. ಬೋಧಿಸಿಯೂ ಬೋಧಿಸದ ಘನ ನಿಃಶಬ್ದ ಘನವೇ ತಾನಾದ ಗಂಭೀರ ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತಿದ್ದ ಘನ. ಈ ನಿರುಪಮ ಘನ ಮಹಿಮನನ್ನು ಕಂಡೆ, ಕಾಣೆ, ಕೂಡಿದೆ, ಅಗಲಿದೆನೆನ್ನಬಹುದೇ !

ನಿಸ್ಸೀಮ ಘನವು ಸೀಮೆಯುಳ್ಳದ್ದಾಗಬಹುದೆ ! ಅಚಿಂತ್ಯ ಘನವು ಚಿಂತನಕ್ಕೊಳಪಡಬಹುದೆ! ಇದು ನಿರಾಲಂಬ ಘನವಾದುದರಿಂದ ಈ ಗುರುಲಿಂಗವನ್ನು ಪರಪ್ರಕಾಶನೆಂದು ಆರಾಧಿಸಿದರೂ ಅಷ್ಟೆ ಸ್ವಯಂ ಪ್ರಕಾಶನೆಂದು ಆರಾಧಿಸಿದರೂ ಅಷ್ಟೆ. ಇದು ಏನೊಂದುಸುರಲು ಎಡೆಗೊಡದ ಘನವಾದುದರಿಂದ ನಿಸ್ಸೀಮವು, ಅಚಿಂತ್ಯವು, ನಿರಾಲಂಬವು, ಈ ಘನ ಗಂಭೀರದ ಘನತ್ವ ತಿಳಿಯಲು ಗುರು ಕಾರುಣ್ಯ ಬೇಕು. ಅದಕ್ಕಾಗಿ ಗುರುಭಕ್ತಿ ಸಂಪನ್ನರಾಗುವುದು .

ಈ ಗುರು ಭಕ್ತರಿಗೆ ಕಾಣಬಾರದ ಶ್ರೀ ಗುರು ಕಂಡುದರಿಂದ ಹೇಳಲಿಲ್ಲದ ಭಿನ್ನಪ . ಏಕೆಂದರೆ ಇದು ಎಂದೆಂದೂ ಕೇಳದ ಕಥನ, ನುಡಿಗೆಡೆಗೊಡದ ಮಂತ್ರ, ಕಾಣಬಾರದ ಲಿಂಗ, ಆಗಮವಿಲ್ಲದ ದೀಕ್ಷೆ,ಕೂಡದಗಲದ ಸ್ವಾನುಭವ , ಉಪಮಿಸಬಾರದ ಸುಖ, ವರ್ಣಿಸುವರೆ ಅಗಮ್ಯವಾದುದರಿಂದ ಸೀಮೆ ನಿಸ್ಸೀಮೆಯಾಯಿತ್ತು. ಇಲ್ಲಿ ಸ್ಥಾವರ ಜಂಗಮ ಜಗವೆಂಬುದು ಸಚ್ಚಿದ್ಘನಲಿಂಗವು. ಮರವು ಅರುವು ಎಂಬುದು ಸಚ್ಚಿದ್ಘನ ಲಿಂಗವು . ಪ್ರಕೃತಿ ಪುರುಷ ಸಚಿದ್ಘನ ಲಿಂಗವೆ ಪ್ರಜ್ವಲಿಸುವದರಿಂದ ನಿಸ್ಸೀಮವಾಯಿತ್ತು. ಕಾರಣ ಸಕಲರಿಗೂ ಇಂಥ ಗುರುಭಕ್ತಿಸಂಪನ್ನತ್ವಬೇಕು. ಇದರಿಂದ ಭಕ್ತನಲ್ಲಿ ನಿಸ್ಸೀಮ ಭಾವ, ನಿಸ್ಸೀಮಜ್ಞಾನ, ನಿಸ್ಸೀಮ ದೃಷ್ಟಿ ಉಂಟಾಗಿ ಅಹಂತ್ವ ಉಳಿದುಕೊಳ್ಳಲು ಸ್ಥಾನವಿಲ್ಲವಾಗುತ್ತದೆ .

ಆಗ ಹೃದಯ ಸರ್ವಾತ್ಮ ಹೃದಯ. ಅದು ಸಮರಸದ ಸುಧೆ. ಕರುಣಾ ಸಮುದ್ರ ಪರಿಪೂರ್ಣತ್ವದಿಂದ ತುಂಬಿ ತುಳುಕದಂತಾಗುವುದು.ಅದಕ್ಕಾಗಿ ಅಣ್ಣನವರು ಗುರು ಭಕ್ತಿ ಸಂಪನ್ನರಾಗಲು ಪ್ರಿಯರಾಗಿದ್ದರಲ್ಲದೆ ಗುರುಗಳಾಗಲು ಪ್ರಿಯರಾಗಲಿಲ್ಲ . ಚಿಜ್ಯೋತಿ, ದೇವ ದೇವ ಬಸವೇಶ, ಸಕಲರಿಗೂ ಶ್ರೀ ಗುರುವಾದರೂ ತಾ ಗುರುವೆಂದೆನಿಸಿಕೊಳ್ಳದಾತ. ಇದುವೆ ಗುರುಭಕ್ತಿಯ ಸಂಪನ್ನತೆಯ ಘನತ್ವ, ಈ ಗುರು ಭಕ್ತಿಯ ಸಂಪನ್ನತ್ವವೆ ಕಾಣಬಾರದ ಗುರುವಾಗಿ ಸಕಲರಿಗೂ ಶ್ರೀಗುರುವಿನ ಘನತ್ವ ತೋರಿಸಿಕೊಟ್ಟರು.

**ಏಕಲಿಂಗಾನಿಷ್ಟಪರನು** : ಅಂದರೆ ನಿರವಯ ಲಿಂಗದ ನಿಷ್ಠಾಪರನು ತಾನೆ. ಆದಿ ಅನಾದಿ ಗಳೆಂಬೆರಡಿಲ್ಲದ ನಿರವಯ ಲಿಂಗವಾಗಿ ಸಕಲರಿಗೂ ನಿರವಯ ಲಿಂಗವನ್ನೇ ಇಷ್ಟ ಪ್ರಾಣ ಭಾವ ರೂಪದಲ್ಲಿ ಅನುವು ಮಾಡಿಕೊಟ್ಟ ಮಹಾಮಹಿಮ. ಈ ಘನಮಹಿಮನು ವಾಙ್ಮನೋತೀತವಾದ ಪರಶಿವಲಿಂಗವನು ,ಇಷ್ಟ,ಪ್ರಾಣ, ಭಾವ ರೂಪದಲ್ಲಿ ತೋರಿಕೊಟ್ಟ ತ್ರಿವಿಧ ಲಿಂಗದ ಅನುವಾದರೂ

ಅದನ್ನಾವ ಭಾಷೆಯಿಂದ ಹೇಳುವುದು, ಭಾವಕ್ಕಿಂಬಿಲ್ಲದುದರೋಳ್ ಅದಾವ ಭಾವದಿಂದ ಭಾವಿಸುವುದು .ಅದಕ್ಕಾಗಿ ಆ ಮಹಾಮಹಿಮ ಏಕ ಲಿಂಗಾನಿಷ್ಟಾಪರನು ಎಂದು ಹೇಳಿದ್ದಾಳೆ.

**ಚರಲಿಂಗಲೋಲುಪ್ತ** : ಅಂದರೆ ನಿರುಪಾದಿ ,ನಿರ್ಮಾಯ ,ಜಂಗಮರೂಪಿ ,ಚರಲಿಂಗ ಲೋಲುಪ್ತ .ಅಂದರೆ ಮಹಾಲಿಂಗದೋಳ್ ತನ್ಮಯ. ಚಿನ್ಮಯ ಭಾವದೋಳ್ ತನ್ಮಯ ನಾದುದರಿಂದ ಅಖಂಡ ಸ್ವರೂಪನು .ಅದಕ್ಕಾಗಿ ನಿಜೈಕ್ಯನಾದ ಪ್ರಭುರೂಪಿ ಚರಲಿಂಗಕ್ಕೆ ಬಹುಪ್ರೀತಿಸುತ್ತಿದ್ದನಲ್ಲದೆ ಚರಲಿಂಗ ಲೋಲುಪ್ತನಾಗಿದ್ದನು.

**ಶರಣ ಸಂಗಮೇಶ್ವರನು** : ಅಂದರೆ ಶರಣೆಂದರೆ ಸಂಗಮೇಶ್ವರನೆಂದು ಕಾಣುತ್ತಿದ್ದ. ಶರಣರ ಸಂಗಮವೆಂಬುದು ಸಂಗಮೇಶನ ಸಾಕ್ಷಾತ್ಕಾರವೆಂಬ ಪೂರ್ಣ ಭಾವ, ಪೂರ್ಣ ಜ್ಞಾನ, ಪೂರ್ಣ ಮದಂ,ಪೂರ್ಣಮಿದಂತ್ವ ಸ್ವತಃ ಸಿದ್ಧಿಸುವುದು ಎಂಬ ಶರಣ ಸಂಗಮೇಶ್ವರನ ಘನತ್ವವನ್ನು ಬಸವಣ್ಣನವರು ಯತಾರ್ಥ ತಿಳಿದುದರಿಂದ ''ಎಮ್ಮವರಿಗೆ ಸಾವಿಲ್ಲ, ಎಮ್ಮವರು ಸಾವನರಿಯರು. ಸಾವು ಎಂಬುವುದು ಸ್ವಯವಲ್ಲ, ಲಿಂಗದಲಿ ಉದಯವಾದ ಲಿಂಗೈಕ್ಯಂಗೆ ಆ ಲಿಂಗದಲ್ಲಿ ಯಲ್ಲದೆ ಬೇರೆ ಮತ್ತೊಂದೆಡೆಯುಂಟೆ ? ಕೂಡಲ ಸಂಗಮದೇವಾ'' ಎಂದು ಶರಣರ ನಿಜದ ನಿಲುವನ್ನು ಲೋಕಕ್ಕೆ ಎತ್ತಿ ತೋರಿಸಿದ್ದಾರೆ.

ಎಮ್ಮವರೆಂದರೆ ಲಿಂಗಾಂಗ ಸಮರಸ ಜ್ಞಾನಿಗಳೇ ಎಮ್ಮವರು. ಲಿಂಗಾಂಗ ಸಮರಸ ತತ್ವ ಅರಿಯದ ಪ್ರಮಾದವಂತರೆಲ್ಲ ಹುಟ್ಟು ಸಾವು ಕಾಣುತ್ತಾರೆ. ಈ ಪಿಂಡಾಂಡ ಬ್ರಹ್ಮಾಂಡ ರೂಪಿ ಜಗತ್ತು ಹುಟ್ಟಿದಂತೆ ಇದ್ದಂತೆ ಲಯವಾದಂತೆ ಭಾಸಿಸುತ್ತದೆ. ಶರಣರೆಂದರೆ ಚಿದಾಕಾಶ ಸ್ವರೂಪರು, ಚಿನ್ಮಯರು, ಸಚಿದ್ಘನ ಲಿಂಗವೆ ತಾವಾಗಿರುವುದರಿಂದ ಅವರ ದೃಷ್ಠಿ ಚಿನ್ಮಯದೃಷ್ಠಿಯಾದುದರಿಂದ ಜಗವೆಲ್ಲ ಲಿಂಗಮಯವು. ಸ್ಥಾವರವು ಲಿಂಗವೆ , ಜಂಗಮ ಲಿಂಗವೆ , ಲಿಂಗದ ಹೊರತಾಗಿ ಅನ್ಯವಿಲ್ಲವೆಂಬ ಯತಾರ್ಥ ಜ್ಞಾನಿಗೆ ನೀರಿನಲ್ಲಿ ಹುಟ್ಟಿ, ತೋರಿ, ಅಳಿಯುವ ನೀರಿನ ಗುರುಳೆಗಳೆಲ್ಲ ನೀರಲ್ಲದೆ ಅನ್ಯ ಹೇಗಲ್ಲವೋ ಹಾಗೆ ಚಿದಾಕಾಶದಲ್ಲಿ ತೋರುವ ಪಿಂಡಾಂಡ ಬ್ರಹ್ಮಾಂಡಗಳು . ಚಿದಾಕಾಶವಲ್ಲದೆ ಅನ್ಯವಲ್ಲ, ಸಚ್ಚಿದ್ಘನ ಲಿಂಗದಲ್ಲಿ ತೋರುವ ಅಖಿಲ ನಾಮರೂಪ ಜಗವೆಲ್ಲ ಲಿಂಗವೆಂಬ ಜ್ಞಾನ, ಶರಣರ ಜ್ಞಾನವಾದುದರಿಂದ ಶರಣರು ಪೂರ್ಣಾನಂದಮಯರು. ಅದಕ್ಕಾಗಿ ಶರಣ ಸಂಗಮೇಶ್ವರನೆಂದು ಸ್ತುತಿಸುತ್ತಿದ್ದಾಳೆ.

**ತ್ರಿವಿಧಕ್ಕಾಯತನು** : ಲೋಕದವರು ಹೊನ್ನು,ಹೆಣ್ಣು,ಮಣ್ಣಕ್ಕಾಯತರಾದರೆ ಬಸವ ಪ್ರಭು ಇಷ್ಟ ಲಿಂಗ, ಪ್ರಾಣ ಲಿಂಗ, ಭಾವ ಲಿಂಗಕ್ಕಾಯತ,ಲಿಂಗದ ಘನತ್ವವನ್ನೆ ಸಿದ್ಧ ಮಾಡುವ ಸನ್ನದ್ಧ. ಏಕೆಂದರೆ ನಿರವಯ ಲಿಂಗವನ್ನೇ ಭಕ್ತರ ಇಷ್ಟಾರ್ಥಪೂರ್ತಿಗಾಗಿ ಇಷ್ಟಲಿಂಗ ಮಾಡಿದ ಸಿದ್ದಿನಾಥ. ಇದರಲ್ಲಿಯೆ ಪ್ರಾಣ ಲಿಂಗ, ಮಹಾಲಿಂಗ ಮಾಡಿ ತೋರಿದ ಈ ಮಹಾ ಮಹಿಮ. ಸಾವಯವ ನಿರವಯ ಮಾಡಬಲ್ಲ, ನಿರವಯ ಸಾವಯವ ಮಾಡಬಲ್ಲವನಾದುದರಿಂದ ತ್ರಿವಿಧಕ್ಕಾಯತನು.

**ತ್ರಿಕರಣಶುದ್ಧನು** : ಅಂದರೆ ಇಚ್ಛೆ , ಕ್ರಿಯೆ, ಭಾವ, ಈ ಮೂರು ಶುದ್ಧ. ಈತನದು ಲಿಂಗಾಂಗ ಸಮರಸದ ಇಚ್ಛೆಯು ಸದಿಚ್ಛೆ ಈ ಸದಿಚ್ಛೆಯೆ ಆತನ ಕರಣಗಳಾಗಿರುವುದರಿಂದ ಸಚ್ಚಿದ್ಘನ ಲಿಂಗಾನುಸಂಧಾನವೆ ಆತನ ಕ್ರಿಯೆ. ಈ ಘನಲಿಂಗ ಭಾವವೆ ಈತನ ಭಾವ. ಈ ಭರಿತ ಭಾವಕೊಂಬಲ್ಲಿ, ಕೊಡುವಲ್ಲಿ, ಉಣುವಲ್ಲಿ, ಉಡುವಲ್ಲಿ, ಏಳುವಲ್ಲಿ, ಮಲಗುವಲ್ಲಿ ಸಕಲ ವ್ಯವಹಾರದಲ್ಲಿ, ಲಿಂಗಭೋಗೋಪಭೋಗಿಯಾದುದೆ ಲಿಂಗಕ್ರಿಯೆ . ಲಿಂಗಾಂಗ ಸಮರಸದ ಇಚ್ಛೆಯ ಸದಿಚ್ಛೆ. ಅಖಂಡ ಭಾವವೆ ಲಿಂಗಭಾವವಾಗಿರುವುದರಿಂದ ತ್ರಿಕರಣ ಶುದ್ಧನು

ಎಂದು ಹೇಳಿದ್ದಾಳೆ.

**ಅನ್ಯದೈವ ಸ್ಮರಣೆಯ ಹೊದ್ದ :** ಅಂದರೆ ಕಲ್ಲು ದೈವ, ಮರ ದೈವ, ನೀರು ದೈವ, ಪಂಚಲೋಹದಿಂದ ಮಾಡಿದ ದೈವ ದೈವವಲ್ಲ. ಕಾಶಿ ರಾಮೇಶ್ವರ ಅಷ್ಟಾವಷ್ಠಿ ಪುಣ್ಯ ತೀರ್ಥಂಗಳಲ್ಲಿರುವ ದೈವ ದೈವವಲ್ಲ. ಶಂಕರ ಶಶಿಧರ ಈಶ್ವರ ಗಣಾಧೀಶರನ್ನು ದೈವವೆಂದು ಸ್ಮರಿಸಿದಾತನಲ್ಲ. ಅಖಂಡ ಚಿನ್ಮಯ ಲಿಂಗವೆ ನಿಜವಾದ ದೇವ ದೈವವೆಂದು ತಿಳಿದಿರುವುದರಿಂದ ಅನ್ಯ ದೈವದ ಸ್ಮರಣೆಯ ಹೊದ್ದನೆಂದು ಹೇಳಿದ್ದಾಳೆ.

**ಭವಿಸಂಗಮಾಡ :** ಅಂದರೆ ಕಾಮಾದಿಗಳೆ ಭವಿಗಳು. ಏಕೆಂದರೆ ಇವು ಅಧೋದೃಷ್ಟಿಯುಳ್ಳವು ಗಳಾಗಿರುವುದರಿಂದ ಇವು ಮಾಯಿಕ ಮುಖವುಳ್ಳವುಗಳಾಗಿ ಹೆಣ್ಣು ಹೊನ್ನು ಮಣ್ಣು ಅಧಿಕಾರ ಗೌರವದಲ್ಲಿ ಹೆಚ್ಚಿನ ವಿಷಯಾಸಕ್ತಿಯುಳ್ಳವುಗಳಾಗಿ ವಿಷಯ ರತಿಯನ್ನೇ ಬಯಸುವುದರಿಂದ ಭೋಗದಿಚ್ಛೆ ಭೋಗದ ಬಡಬಡಿಕೆಯ ಭೋಗಾಲಯವಾದುದಕ್ಕಾಗಿ ಕಾಮಾದಿಗಳೆ ಭವಿಗಳು. ಅದಕ್ಕಾಗಿ ಲಿಂಗ ಸುಖದ ಸುಖಿಗಳಾಗಿ ಬಸವಣ್ಣನವರು ವಿಷಯಾಸಕ್ತರಾಗದೆ ಕಾಮಾದಿಗಳ ಬಲೆಗೆ ಬೀಳದೆ ಇಂದ್ರೀಯಂಗಳ ಅಧೀನರಾಗದೆ ಭವಿಯ ಸಂಗ ಮಾಡ ಎಂದು ಹೇಳಿದ್ದಾರೆ.

**ತ್ರಿವಿಧ ಲಿಂಗಾಂಗ ಸಂಬಂಧಿ :** ಇಷ್ಟ ಲಿಂಗ, ಪ್ರಾಣಲಿಂಗ, ಭಾವಲಿಂಗ, ಈ ಮೂರರ ಸಂಬಂಧಿಗಳೆ ತ್ರಿವಿಧಲಿಂಗಾಂಗ ಸಂಬಂಧಿ.

**ಭವಿಯ ಪಾಕವಕೊಳ್ಳ :** ಜೀವ ಭಾವದಿಂದ ಮಾಡಿದ ಪಾಕವಕೊಳ್ಳ. ಲಿಂಗಾಂಗ ಸಮರಸದ ಅವಧೂತ ಪ್ರಭು ಬಸವಣ್ಣ ಆ ಮಹಿಮನಿಗೇತರ ಜೀವಭಾವ, ಅಮೃತದೋಳ್ ವಿಷ ಉಂಟೆ ? ಅಮೃತವು ಅಮೃತವೇ! ಜ್ಞಾನಾಮೃತವು ಜ್ಞಾನಾನಂದಮಯವೇ! ಜ್ಞಾನಮೃತರೂಪಿ ಬಸವ ಪ್ರಭು, ಲಿಂಗ ಪ್ರಸಾದ ಲಿಂಗಕ್ಕೆ ಅರ್ಪಿತವೆಂಬ ಪ್ರಸಾದ ಕಾಯನಾದುದರಿಂದ ಭವಿಪಾಕಕೊಳ್ಳ ಎಂದು ಹೇಳಿದ್ದಾಳೆ.

**ಪರಸ್ತ್ರೀಯರ ಬೆರೆಸ :** ಅಂದರೆ ಅಂಗಭೋಗೋಪಭೋಗದಿಂದ ನಿಸ್ಸಂಗನು , ವಿಷಯ ವ್ಯಾಮೋಹದಿಂದ ದೂರನು, ''ಸತಿಯನು ಕಂಡು ವ್ರತಿಯಾದ ಬಸವಣ್ಣ , ವ್ರತಿಯಾಗಿ ಬ್ರಹ್ಮಚಾರಿಯಾದ ಬಸವಣ್ಣ , ಬ್ರಹ್ಮಚಾರಿಯಾಗಿ ಭವಗೆಟ್ಟನಯ್ಯ ಬಸವಣ್ಣ , ಗುಹೇಶ್ವರ ನಿನ್ನಲ್ಲಿ ಬಾಲ ಬ್ರಹ್ಮಚಾರಿಯಾದಾತ ಬಸವಣ್ಣನೊಬ್ಬನೆ'' ಎಂದು ಪ್ರಭು ಪ್ರಶಂಶಿಸಿದ್ದಾನೆ . ಪ್ರಭು ಸಾಮಾನ್ಯನೆ, ಮಾಯಾ ಕೋಲಾಹಲ ಪ್ರಭು, ಕಾಮಾರಿ ಪ್ರಭು, ನಿಃಕಾಮಿಪ್ರಭು, ನಿರ್ಮಾಯ ಪ್ರಭು, ನಿರ್ಣಯಕ್ಕೆ ನಿಲುಕದ ಪ್ರಭುವೆ ನಾನು ಬಾಲ ಬ್ರಹ್ಮಚಾರಿಯಲ್ಲ . ಗುಹೇಶ್ವರಲಿಂಗದಲ್ಲಿ ಬಾಲ ಬ್ರಹ್ಮಚಾರಿ ಬಸವಣ್ಣನವರೆಂದು ಕೊಂಡಾಡಿದ್ದಾನೆ. ಬಸವಣ್ಣನವರ ಸತಿ ಯಾರೆಂದರೆ ಗೊತ್ತೆ? ಲಿಂಗಾಂಗ ಸಮರಸ ಜ್ಞಾನದಿಂದುಕ್ತವಾದ ಬುದ್ಧಿಯೆ ಸತಿ. ಶ್ರೀಗುರು ಕಾರುಣ್ಯದಿಂದ ಯಾವಾಗ ಲಿಂಗಾಂಗ ಸಮರಸ ಬುದ್ಧಿ ರೂಪಿ ಸತಿಯು ದೊರೆತಳು ಆಗ ಲಿಂಗಸುಖದ ವ್ರತಿ, ಬ್ರಹ್ಮಾಕಾರದ ವ್ರತಿ, ಸ್ವಸುಖದ ವ್ರತಿ ಯಾವಾಗ ವ್ರತಿಯಾದ ಆಗ ಬ್ರಹ್ಮಾಚಾರಿಯಾದ ಬ್ರಹ್ಮಭಾವಿಯಾದ ಸರ್ವಂಖಲ್ವಿದಂ ಬ್ರಹ್ಮ ; ಎಂಬ ಪರಾತ್ಪರ ಭಾವ ಭರಿತನಾಗಿ ಎತ್ತನೋಡಿದಡತ್ತ ಬ್ರಹ್ಮವೆ ಬ್ರಹ್ಮಮಯನಾಗಿ, ಶಬ್ದದ ಮುಗ್ದನಾಗಿ, ಆ ಘನಸುಖದ ಸುಧೆಯು ಸವಿದು ನಿಸ್ಸೀಮನಾದ ನಿರುಪಮನಾದನೆಂದು ಬಸವಣ್ಣನವರ ಅಹಮಿಲ್ಲದ ಜ್ಞಾನ ಘನಕ್ಕೆ ಬಾಲಬ್ರಹ್ಮಚಾರಿಯೆಂದು ಹೊಗಳಿದ್ದಾರೆ.

**ಪರಧನವನೊಲ್ಲ :** ಅಂದರೆ ಅಚಿಂತ್ಯರೂಪಮಾದ ಜ್ಞಾನಾಮೃತದ ಘನಸುಖದಲ್ಲಿದ್ದ ಘನವಂತನಿಗೆ ಈ ಲೋಕವಾಗಲಿ, ಈ ಲೋಕದೈಶ್ವರ್ಯವಾಗಲಿ, ಪರಲೋಕವಾಗಲಿ,

ಪರಲೋಕದೈಶ್ವರ್ಯವಾಗಲಿ, ಸಾಲೋಕ್ಯ ಸಾಮೀಪ್ಯ , ಸಾರೂಪ್ಯ, ಸಾಯುಜ್ಯ ಪದವಿಗಳೇ ಆಗಲಿ ಇವುಗಳು ಸ್ವಯಧನವಲ್ಲ ಪರಧನವೆಂದು ತಿಳಿದಿದ್ದರು. ಕೇವಲ ಸ್ವಾತ್ಮ ಜ್ಞಾನವೆ ಸ್ವಧನ . ಇದು ನಿರಂಕುಶ ಧನ, ನಿರ್ಭಯ ಧನವೆಂದು ತಿಳಿದವರಾದುದರಿಂದ ಮಾಯಿಕ ರೂಪ ಅನಾತ್ಮ ಧನವೆಲ್ಲ ಪರಧನವೆಂದು ತಿಳಿದುದರಿಂದ ಇದು ಅವರಿಗೆ ಅಪ್ರಿಯವಾಗಿದ್ದರಿಂದ ಪರಧನವನೊಲ್ಲನೆಂದು ಹೇಳಿದ್ದಾಳೆ.

**ಅನೃತನುಡಿಯ** : ಅಂದರೆ ಬಸವಣ್ಣನವರ ದಿವ್ಯ ದೃಷ್ಟಿಗೆ ದೇಶ ಕಾಲ ಪರಿಚ್ಛೇದದಿಂದ ಕೂಡಿದ ಭಾಷೆಗಳೆಲ್ಲ ಅನೃತ ನುಡಿ, ಅದಕ್ಕಾಗಿ ಆ ಮಹಿಮನು ದ್ವೈತನಾಗಿ ನುಡಿಯ ನುಡಿದಾತನಲ್ಲ, ಅದ್ವೈತನಾಗಿ ನುಡಿಯ ನುಡಿದಾತನಲ್ಲ . ಆವಾವ ಮತದಾತನಾಗಿ ನುಡಿಯ ನುಡಿದಾತನಲ್ಲ. ಆತನ ನುಡಿ ನುಡಿದು ನುಡಿಯದ ನುಡಿ . ಶಬ್ದ ಮುಗ್ಧನಾದ ನುಡಿ. ಅವರ್ಣೀಯ ನುಡಿ, ಸಕಲವು ಕೂಡಲ ಸಂಗಯ್ಯನೆಂಬ ಭಾವ ಭರಿತದ ನುಡಿಯಾದ್ದರಿಂದ ಅನೃತ ನುಡಿಯ ಎಂದು ಹೇಳಿದ್ದಾಳೆ.

**ತಾಮಸ ಭಕ್ತಿಯ ಸಂಗಮಾಡ** : ಅಂದರೆ ತಾಮಸ ಭಕ್ತಿ ಎಂಬುದು ಅಹಂಕಾರದಿಂದುಕ್ತವಾದ ಭಕ್ತಿ , ಫಲಾಪೇಕ್ಷೆಯಿಂದುಕ್ತವಾದ ಭಕ್ತಿ. ಫಲಪದಗಳ ಧ್ಯೇಯವನಿಟ್ಟು ಮಾಡುವ ಭಕ್ತಿ , ಲೋಕಂಗಳ ಅಧಿಪತಿಯಾಗಬೇಕೆಂಬ ಕಾಮನ ಭಕ್ತಿ , ಇಂಥ ಅವಿದ್ಯೆಯಿಂದುಕ್ತವಾದ ತಾಮಸ ಭಕ್ತಿಯ ಸಂಗ ಮಾಡನು ಎಂದು ಹೇಳಿದ್ದಾಳೆ.

**ಜಂಗಮ ನಿಂದೆಯ ಸೈರಿಸ** : ಜಂಗಮನೆಂದರೆ ನಿರುಪಾಧಿ ಜಂಗಮ, ನಿರ್ಮಾಯ ಜಂಗಮ, ನಿರಾಲಂಬ ಜಂಗಮ, ನಿಜೈಕ್ಯ ಜಂಗಮ ಈ ಜಂಗಮನೆಂದರೆ ಪರಾತ್ಪರ ಪರವಸ್ತು, ಪರಂಜ್ಯೋತಿ, ಈ ಘನ ಚೈತನ್ಯ ಜಂಗಮನ ನಿಂದೆಯ ನೋಡಿ ಸೈರಿಸುತ್ತಿದ್ದಿಲ್ಲ ಬಸವಣ್ಣ. ಏಕೆಂದರೆ ಜಂಗಮನೆಂದರೆ ಲಿಂಗದ ಒಡಲು, ಲಿಂಗಪ್ರಭೆ, ಜ್ಞಾನ ಪ್ರಭು, ಎಂಬ ಅಚಲ ನಿಷ್ಟೆ ಇವರದಾದುದರಿಂದ ಜಂಗಮನಿಂದೆ ಸೈರಿಸ ಎಂದು ಹೇಳಿದ್ದಾಳೆ.

**ಗುರುಲಿಂಗ ಜಂಗಮಕ್ಕೆ ಅರ್ಥ ಪ್ರಾಣಾಭಿಮಾನ ಮುಂತಾದವನೆಲ್ಲವ ಸಮರ್ಪಿಸಿ ಪ್ರಸಾದ ಮುಂತಾಗಿ ಭೋಗಿಸುವ** : ಅಂದರೆ ಸರ್ವವ್ಯಾಪಿಯಾದ ಚಿನ್ಮಯದೇವನೆ ಗುರು , ಅದುವೇ ಲಿಂಗ, ಅದುವೇ ಜಂಗಮವೆಂದು ತನ್ನ ಅರ್ಥ ಪ್ರಾಣಾಭಿಮಾನ ಮುಂತಾದವೆಲ್ಲವ ಸಮರ್ಪಿಸಿ ಇದ್ದುದೆಲ್ಲ ಚಿನ್ಮಯದಾಸ್ತಿ ಅಂದರೆ ಸತ್ತಾಸ್ವರೂಪವೆಂದು ತಿಳಿದು ಶುದ್ಧ ಪ್ರಸಾದ ,ಸಿದ್ಧ ಪ್ರಸಾದ , ಪ್ರಸಿದ್ಧ ಪ್ರಸಾದ, ಮುಂತಾಗಿ ಭೋಗಿಸುವನೆಂದು ಹೇಳಿದ್ದಾ

**ಪ್ರಸಾದ ನಿಂದೆಯ ಕೇಳ** : ಅಂಥ ಮಹಾ ಪ್ರಸಾದಿಯ ನಿಂದೆ ಕೇಳ ಆ ಮಹಾ ಪ್ರಸಾದಿ ಘನವನೇನೆಂಬೆ ! ಜ್ಯೋತಿಯ ಮುಟ್ಟಿದ ಬತ್ತಿಯೆಲ್ಲ ಜ್ಯೋತಿಯಪ್ಪುದಯ್ಯ. ಸಾಗರಕ್ಕೆ ಮುಟ್ಟಿದ ನದಿಗಳೆಲ್ಲ ಸಾಗರವಪ್ಪುವವಯ್ಯ , ಪ್ರಸಾದ ಮುಟ್ಟಿದ ಪದಾರ್ಥವೆಲ್ಲ ಪ್ರಸಾದವಪ್ಪುವವಯ್ಯ , ಲಿಂಗ ಮುಟ್ಟಿದ ಅಂಗವೆಲ್ಲ ಲಿಂಗವಪ್ಪುವಯ್ಯ , ನಿಮ್ಮ ಮುಟ್ಟಿದವರೆಲ್ಲ ನಿಮ್ಮಂತಪ್ಪರಯ್ಯ ಎಂದಂತೆ ಪ್ರಸಾದ ಮುಟ್ಟಿದ ಕಾಯ ಪ್ರಸಾದಮಯವು . ಅಂದರೆ ಪ್ರಸಾದವೆಂಬುದು ಪರಂಜ್ಯೋತಿ , ಪರಮಜ್ಞಾನ, ಪರಮಾನಂದ ಪರವಸ್ತು , ಇದು ಮುಟ್ಟಿದ ಅಂಗವು ಕೂಡ ಪರಂಜ್ಯೋತಿ , ಪರವಸ್ತು ಪರಮಾನಂದ ಘನವಾಗುವುದರಿಂದ ಅಂತಪ್ಪ ಪ್ರಸಾದ ನಿಂದೆಯ ಕೇಳಾ ಎಂದು ಅಕ್ಕಾ ಹೇಳಿದ್ದಾಳೆ.

**ಅನ್ಯರ ಆಸೆಯನ್ನು ಮಾಡನು** : ಶ್ರೀ ಜಗಜ್ಯೋತಿ ಬಸವ ಪ್ರಭು ಪಂಚ ಪರುಷದ ಖಣಿ, ಕಾಮಧೇನು , ಅದಕ್ಕೆ ಆವುದರ ಕಾಮನೆಯಾದರೂ ಇರಬಹುದೇ? ಚಿಂತಾಮಣಿಯು ಚಿಂತೆಯನ್ನು

ಪರಿಹರಿಸುವ ಮಣಿ ಅದು ಅದಾವ ಕಾರಣದಿಂದ ಚಿಂತೆಯನ್ನು ಮಾಡಬೇಕು? ದೇವ ದೇವ , ಮಹಾಪ್ರಸಾದ, ಬಸವ ದೇವ, ಗುರು ಪರುಷ, ಲಿಂಗ ಪರುಷ, ಜಂಗಮ ಪರುಷ, ಪಾದೋದಕ ಪರುಷ, ಪ್ರಸಾದ ಪರುಷ, ಈ ಪಂಚ ಪರುಷವುಳ್ಳ ಪರಮ ಜ್ಞಾನಿ ಪರಮಾತ್ಮ ಪರಮಾವಧೂತನಾಗಿರುವಾಗ ಅವರಿಗಾವ ಧನಕನಕದ ಆಸೆ, ಇಹಲೋಕದ ಅಧಿಪತಿಯಾಸೆ, ದೇವಲೋಕದ ದೇವೇಂದ್ರ ಪದವಿ ಆಸೆ, ಬ್ರಹ್ಮ ಪದವಿ ವಿಷ್ಣು ಪದವಿ, ರುದ್ರ ಪದವಿ ಆಸೆ ಮಾಡಬಹುದೆ ? ಇದು ಕಾರಣ ಅನ್ಯರ ಆಸೆ ಮಾಡನು ಎಂದು ಹೇಳಿದ್ದಾಳೆ.

**ಪಾತ್ರ ಸತ್ಪಾತ್ರವನರಿವ :** ಅಂದರೆ ನಿರಂತರ ನಿರಾತಂಕವಿಲ್ಲದೆ ಬೆಳಗುವ ಲಿಂಗದ ಘನತ್ವ ತಿಳಿಯುವ ಹಂಬಲವೆ ಸತ್ಪಾತ್ರ. ಮಾನವ ವಿವೇಕ ವೈರಾಗ್ಯ ಸಮಾದಿ, ಷಟ್‌ಸಂಪತ್ತಿ, ಮುಮುಕ್ಷತ್ವ , ಲಕ್ಷಣವುಳ್ಳುದೆ ಪಾತ್ರ. ಅನಿತ್ಯ ಸುಖದಿಂದ ವಿಮುಖವಾದುದು ಪಾತ್ರ, ನಿತ್ಯ ನಿರತಿಯವಾದ ಸಚ್ಚಿದ್ಘನಲಿಂಗ ಸುಖವುಳ್ಳದ್ದು ಸತ್ಪಾತ್ರವೆಂಬುವದನ್ನು ಚೆನ್ನಾಗಿ ಅರಿತವರಾದುದರಿಂದ ಪಾತ್ರ ಸತ್ಪಾತ್ರವನರಿವ ಎಂದು ಹೇಳಿದ್ದಾಳೆ.

**ಚತುರ್ವಿಧ ಪದವಿಗೆ ಹಾರ :** ಅಂದರೆ ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ, ಸಾರುಪ್ಯ ಎಂಬ ಪದವಿಗಳಿಗೆ ಒಪ್ಪನು. ಅವು ದಿಟವೆನ್ನನು ಮತ್ತು ಅವುಗಳ ಬಯಕೆಯಿಲ್ಲದವನು ಹಾಗೂ ಅವುಗಳಿಗೆ ಮೋಹಿಸದ್ದರಿಂದ ಹಾರ ಎಂದಿದ್ದಾಳೆ.

**ಅರಿಷಡ್ವರ್ಗಂಗಳಿಗೆ ಅಳುಕು :** ಅಂದರೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಂಗಳಿಗೆ ಅಳುಕನು, ಬೆದರನು, ಅಂಜನು. ಅಂದರೆ ಬಲಹೀನನನ್ನು ಕಳ್ಳರು ಅವನಲ್ಲಿರುವ ಸಂಪತ್ತನ್ನು ದೋಚುವರು. ಅದಕ್ಕಾಗಿ ಅವರಿಗೆ ಅವನು ಅಂಜುವನು ಅಳುಕುವನು. ಮುಖ್ಯಮಂತ್ರಿಯನ್ನು ಕಳ್ಳರೇನು ಮಾಡುವರು. ಇದ್ದ ಕಳ್ಳರೆಲ್ಲ ಅವನ ವಶವರ್ತಿಯಾಗುವರು. ಅವನು ಹೇಳಿದಂತೆ ಕೇಳುವರು. ಹಾಗೆ ದೇಹ ಬುದ್ಧಿಯುಳ್ಳ ಅಜ್ಞಾನಿಗಳು ಆತ್ಮ ಬಲವಿಲ್ಲದುದರಿಂದ ಬಲಹೀನರು. ಇವರು ಕಾಮಾದಿಗಳೆಂಬ ಅರಿಷಡ್ವರ್ಗಕ್ಕೆ ಅಳುಕುತ್ತಾರೆ. ಲಿಂಗಾಂಗ ಸಮರಸ ಜ್ಞಾನಿ ಶರಣ ಲಿಂಗ ಸುಖದಲ್ಲಿ ತನ್ಮಯರಾದುದರಿಂದ ಅರಿಷಡ್ವರ್ಗಕ್ಕೆ ಅಳುಕನು ಎಂದು ಹೇಳಿದ್ದಾಳೆ.

**ಕುಲಾದಿ ಮದಂಗಳಿಗೆ ಬಲಗೊಳ್ಳ :** ಅಂದರೆ ಕುಲಾದಿಗಳ ಶ್ರೇಷ್ಟತ್ವಕ್ಕೆ ಮುಖ್ಯತ್ವವನ್ನು ಕೊಡನು. ಅದಕ್ಕಾಗಿಯೆ ಬಸವರಸರು ಶೆಟ್ಟಿಯೆಂಬೆನೆ ಶಿರಿಯಾಳನ ? ಮಡಿವಾಳನೆಂಬೆನೆ ಮಾಚಯ್ಯನ? ಡೋಹರನೆಂಬೆನೆ ಕಕ್ಕಯ್ಯನ ಮಾದಾರನೆಂಬೆನೆ ಚೆನ್ನಯ್ಯನ ? ಮಾದಿಗನೆಂಬೆನೆ ಹರಳಯ್ಯನ ? ಆನು ಹಾರುವನೆಂದೆಡೆ ಕೂಡಲ ಸಂಗಮ ನಗುವನಯ್ಯ ಎಂದು ಕುಲದ ಶ್ರೇಷ್ಟತ್ವಕ್ಕೆ ಮಹತ್ವ ಕೊಡದ್ದರಿಂದ ಆತ ಕುಲಮದಂಗಳಿಗೆ ಬಲಗೊಳ್ಳನು ಎಂದು ಹೇಳಿದ್ದಾಳೆ.

**ದ್ವೈತಾದ್ವೈತ ನುಡಿವನಲ್ಲ :** ಏಕೆಂದರೆ ಸಮಸ್ವರೂಪವಾಗಿರುವ ಪರಮಸತ್ಯವನ್ನು ಅರಿತುದುದರಿಂದ ವಿಭಾಗ ದೃಷ್ಟಿ ಮುನ್ನಿಲ್ಲ . ಕಡೆಮೊದಲಿಲ್ಲದ ಸಚ್ಚಿದ್ಘನ ಲಿಂಗ ತತ್ವವನ್ನು ಅರಿತುದರಿಂದ ಶಬ್ದ ಮುಗ್ದನಾದವಂಗೆ ದ್ವೈತದ ನುಡಿ ನುಡಿದಾತನೆಂದು ಹೇಗನ್ನಬೇಕು ಅದ್ವೈತ ನುಡಿದಾತನೆಂದು ಹೇಗನ್ನಬೇಕು ? ಅದಕ್ಕಾಗಿ ಆ ಮಹಿಮ ನುಡಿದು ನಿಃಶಬ್ದ ಬ್ರಹ್ಮವಾಗಿರುವಾತ ಮತ್ತು ಅಚಿಂತ್ಯ ಬ್ರಹ್ಮ ತಾನೆ ನೋಡಾ.

**ಸಂಕಲ್ಪ ವಿಕಲ್ಪ ಮಾಡುವನಲ್ಲ :** ಅಣ್ಣನವರು ಚಿನ್ಮಯದೇವ ಚಿದಾಕಾಶಲಿಂಗ ಅಖಂಡೈಕರಸ ಪೂರ್ಣ ತಾನಾರೆಂದು ತನ್ನನ್ನು ಯತಾರ್ಥ ತಿಳಿದುದರಿಂದ ಅಕಥನೀಯ ತಾನೆ. ಶೃತಿಗಗೋಚರ ತಾನೆ, ಅಲ್ಲಿ ಮನಕ್ಕಿಂಬಿಲ್ಲ , ಮಾಯಕ್ಕಿಂಬಿಲ್ಲ , ನಿರ್ವಿಕಲ್ಪ ಘನ. ಅಚಿಂತ್ಯ ಘನ, ಅಪ್ರಮಾಣ

ಘನ, ತಾನಾದವನಿಗೆ ಸಂಕಲ್ಪವೇತರದು ವಿಕಲ್ಪವೇತರದು !

**ಕಾಲೋಚಿತಬಲ್ಲ:** ಅಂದರೆ ಯಾವ ಕಾಲಕ್ಕೆ ಯಾವ ಮಾರ್ಗವನ್ನು ಅನುಸರಿಸುವುದರಿಂದ ಜಗತ್ತಿನ ಹಿತವಾಗುವುದು, ಜೀವಿಗಳ ಕಲ್ಯಾಣವಾಗುವುದು, ಕೈವಲ್ಯಸುಖಿಗಳಾಗುವರು. ಯಾವ ಯಾವ ಕಾಲದಲ್ಲಿ ಏನನ್ನು ಬೋಧಿಸುವುದರಿಂದ ಅಂಗ ಭಾವ ನಷ್ಟವಾಗಿ ಲಿಂಗಭಾವ ವೃದ್ಧಿಯಾಗುವುದು ಮತ್ತು ಘನ ಲಿಂಗ ಸುಖ ಸವೆಯುವುದು ಮಾನವರುಗಳಿಗೆ ಬರಬೇಕು. ಕಾಲಗಳು ಬಹಳ ಇವೆ ಪ್ರಾತಃ ಕಾಲ, ಮಧ್ಯಾಹ್ನ ಕಾಲ, ಸಾಯಂಕಾಲ, ಅವನತಿ ಕಾಲ, ಅವಸಾನ ಕಾಲ, ಪ್ರವೃತ್ತಿಕಾಲ, ನಿವೃತ್ತಿಕಾಲ, ಜಪಕಾಲ, ಧ್ಯಾನಕಾಲ, ಸಮಾಧಿಕಾಲ, ಬ್ರಹ್ಮನ ಕಾಲ, ವಿಷ್ಣುವಿನ ಕಾಲ, ರುದ್ರನ ಕಾಲ ಆದರೆ ಇವುಗಳಾವು ಯತಾರ್ಥ ಕಾಲವಲ್ಲ. ತಾನಾರೆಂದರಿತ ಕಾಲವೇ ಉಚಿತ ಕಾಲವೆಂದು ಹೇಳಿದ್ದಾಳೆ. ಅದುವೆ ಅಕ್ಷಯ ಸುಖಿಯ ಕಾಲ, ಈ ಕಾಲವನ್ನು ಚೆನ್ನಾಗಿ ಬಲ್ಲವರಾದು ದರಿಂದ ಕಾಲೋಚಿತ ಬಲ್ಲನೆಂದು ಹೇಳಿದ್ದಾಳೆ.

**ಕ್ರಮಯುಕ್ತನಾಗಿ ಷಟ್‌ಸ್ಥಲಭರಿತ :** ಅಂದರೆ ಭಕ್ತ , ಮಹೇಶ , ಪ್ರಸಾದಿ , ಪ್ರಾಣಲಿಂಗಿ , ಶರಣ, ಐಕ್ಯ ಸ್ಥಲವೆಂಬುದನ್ನು ಕ್ರಮಯುಕ್ತನಾಗಿ ತಾನೆ ಭಕ್ತ , ತಾನೆ ಮಹೇಶ, ತಾನೆ ಪ್ರಸಾದಿ, ತಾನೆ ಪ್ರಾಣಲಿಂಗಿ, ತಾನೆ ಶರಣ , ತಾನೆ ಐಕ್ಯನ ಐಕ್ಯನಾಗಿ ಯತಾರ್ಥ ತಿಳಿದುದರಿಂದ ಷಟ್‌ಸ್ಥಲಭರಿತ ಎಂದು ಹೇಳಿದ್ದಾಳೆ.

**ಸರ್ವಾಂಗ ಲಿಂಗಿ :** ಸರ್ವಾಂಗ ಲಿಂಗಿಯು ಲಿಂಗವಾಗಿಯೆ ನಡೆವನಾ ಶರಣ, ಲಿಂಗವಾಗಿಯೆ ನುಡಿವನಾ ಶರಣ, ಲಿಂಗಕಾಯ ಶರಣ ಶರಣ ಕಾಯ ಲಿಂಗವಾದುದರಿಂದ ನಿಮ್ಮ ಶರಣ ಬಸವಣ್ಣ ಸರ್ವಾಂಗ ಲಿಂಗಿ . ಲಿಂಗದ ಘನತ್ವವನ್ನು ಅರಿತ ಶರಣರಿಗೆ ಪಿಂಡಾಂಡ ಬ್ರಹ್ಮಾಂಡವೆಂಬುದು ಲಿಂಗವೆ ಅಜ್ಞಾನ ದೃಷ್ಟಿಗೆ ಪಿಂಡಾಂಡ ಬ್ರಹ್ಮಾಂಡಗಳಾಗಿ ಭಾಸಿಸಿದರೆ ಸುಜ್ಞಾನಿ ಶರಣರ ದೃಷ್ಟಿಗೆ ಚಿದ್ಘನ ಲಿಂಗವೆ ಸಿದ್ಧವಾದುದರಿಂದ ಶರಣರ ನೋಟ ಲಿಂಗ, ಮಾಟ ಲಿಂಗ, ಮಾತು ಲಿಂಗ, ನೆನಹು ಲಿಂಗ, ಭಾವ ಲಿಂಗ, ಚಿಂತನ ಲಿಂಗ, ಮರವು ಲಿಂಗ, ಅರವು ಲಿಂಗ, ಶಿವ ಲಿಂಗ ಶಕ್ತಿ ಲಿಂಗವಾದುದರಿಂದ ಸರ್ವಾಂಗ ಲಿಂಗಿ ಎಂದು ಹೇಳಿದ್ದಾಳೆ.

**ದಾಸೋಹ ಸಂಪನ್ನ :** ಅಹಂಮಿಲ್ಲದ ಲಿಂಗಾಂಗ ತೇಜ,ಲಿಂಗಾನುಭವಿ ,ಲಿಂಗಜ್ಞಾನಿ ,ಲಿಂಗಾ ನಂದನಾಗಿ ಸಕಲ ಲಿಂಗ ಪ್ರೇಮಿಗಳಿಗೂ ಲಿಂಗಪ್ರಸಾದವ ಉಣಬಡಸಿ ಅಂದರೆ ಉಣ್ಣದೂಟವ ಉಣ ಬಡಿಸಿ ತೃಪ್ತರೂಪ ತೃಪ್ತಿಯ ಮಾಡಿ ಭವ ತಾಪವ ಕಾಣದಂತೆ ಮಾಡುವದರಿಂದ ದಾಸೋಹ ಸಂಪನ್ನನೆಂದು ಹೇಳಿದ್ದಾಳೆ.

ಇಂತೀ ಐವತ್ತೆರಡು ವಿಧದಲ್ಲಿ ನಿಪುಣನಾಗಿ ಮೆರೆದ ನಮ್ಮ ಬಸವಣ್ಣನು ಆ ಬಸವಣ್ಣನ ಶ್ರೀಪಾ ದಕ್ಕೆ ನಮೋ ನಮೋ ಎಂದು ಬದುಕಿದೆನು ಎಂದು ಬಸವರಾಜ ದೇವರ ಘನತ್ವವನ್ನು ಸ್ತುತಿಸಿದ್ದಾಳೆ.

ಮತ್ತಂ .

**51**

**ಎನ್ನ ಭಕ್ತಿ ನಿಮ್ಮ ದರ್ಮ, ಎನ್ನ ಜ್ಞಾನ ಪ್ರಭುದೇವರ ಧರ್ಮ.**
**ಎನ್ನ ಪರಿಣಾಮ ಚೆನ್ನಬಸವಣ್ಣನ ಧರ್ಮ.**
**ಈ ಮೂವ್ವರು ಒಂದೊಂದ ಕೊಟ್ಟರೆನಗೆ ಮೂರು ಭಾವವಾಯಿತ್ತು .**
**ಈ ಮೂರನು ನಿಮ್ಮಲ್ಲಿ ಸಮರ್ಪಿಸಿದ ಬಳಿಕ ಎನಗಾವ ಜಂಜಡವಿಲ್ಲ.**

**ಚೆನ್ನಮಲ್ಲಿಕಾರ್ಜುನ ದೇವರ ನೆನಹಿನಲ್ಲಿ**
**ನಿನ್ನ ಕರುಣದ ಶಿಶು ನಾನು ಕಾಣಾ ಸಂಗನಬಸವಣ್ಣಾ.**

**ತಾತ್ಪರ್ಯ :** ಅಯ್ಯ ಎನ್ನ ವಿಶ್ವಾಸ ಅದು ನಿಮ್ಮ ಹುಟ್ಟು ಸ್ವಾಭಾವ, ಎನ್ನ ನಿಷ್ಟೆ ಅದು ನಿಮ್ಮ ಅಚಲತ್ವ, ಎನ್ನ ಅನುರಾಗ ಅದು ನಿಮ್ಮ ಅಪಾರ ಪ್ರೀತಿ, ಎನ್ನ ಸಮರಸ ಅದು ನಿಮ್ಮ ಸಹಜ ನಿಲುವು ಅಯ್ಯ. ಎನ್ನದು ಕಲಿತನ ನಿಮ್ಮದು ಸಹಜಸ್ಥಿತಿ ಅದಕ್ಕಾಗಿ ಎನ್ನ ಭಕ್ತಿ ನಿಮ್ಮ ಧರ್ಮ ನೋಡಾ.

ಎನ್ನ ಜ್ಞಾನ ಅದು ಪ್ರಭುದೇವರ ಸ್ವಭಾವ, ಎನ್ನ ಅರಿವು ಅದು ಪ್ರಭುದೇವರ ನಿಲವು, ಎನ್ನ ಜ್ಞಾನ ಪ್ರಭುವಿನಿಂದ ಪ್ರಾಪ್ತವಾದುದು. ಪ್ರಭುವಿನ ಧರ್ಮ ತಾನಾಗಿ ಇದ್ದುದ್ದು, ಎನ್ನ ವಿಚಾರ ನಿಮ್ಮ ಕರುಣೆಯಿಂದ ಉದಯವಾದದ್ದು. ಪ್ರಭುವಿನ ಧರ್ಮ; ಅದು ಅವರ ಹುಟ್ಟುಗುಣ. ಎನ್ನ ಜ್ಞಾನ ನೀವು ಒಲಿದು ಕೊಟ್ಟಾಗ ಪ್ರಾಪ್ತವಾದ ಜ್ಞಾನ , ಪ್ರಭುದೇವರ ಧರ್ಮ ಸ್ವತಃ ಸಿದ್ದ ತಾನೆ ತಾನಾಗಿದ್ದ ಧರ್ಮ ನೋಡಾ.

ಎನ್ನ ಪರಿಣಾಮ ಚೆನ್ನಬಸವಣ್ಣನ ಧರ್ಮ ಅಂದರೆ ಎನ್ನ ಸುಖಸ್ವರೂಪದ ಸುಃಖ, ಇದು ಎನ್ನ ಪರಿಣಾಮ, ಇದು ಚೆನ್ನಬಸವಣ್ಣನ ಸವೆಯದ ಸುಖ ಅಂದರೆ ಆತನ ಸಹಜ ಧರ್ಮ.

ನೀವು ಮೂವ್ವರು ಒಂದೊಂದು ಕೊಟ್ಟುದರಿಂದ ಮೂರು ಭಾವವಾಯಿತ್ತು . ಬಸವರಾಜ ದೇವರು ಸಮರತಿ, ಸದ್ಭಕ್ತಿ , ಸಮಕಲೆಯ ಕೊಟ್ಟ. ಪ್ರಭುದೇವರು ಸಮ್ಯಜ್ಞಾನ, ಅಖಂಡ ಜ್ಞಾನ, ಏಕಾತ್ಮಜ್ಞಾನವ ಕೊಟ್ಟ. ಚೆನ್ನಬಸವದೇವರು ತನ್ನ ಸ್ವಯಸುಖರೂಪಿ ಪರಮಾನಂದವೆಂಬ ನಿರ್ವಾಣ ಕೊಟ್ಟ. ಈ ಮೂವ್ವರು ಒಂದೊಂದು ಕೊಟ್ಟ ಕಾರಣ ನಾನು ಸದ್ಭಕ್ತಳೆಂದೆನಿಸಿದೆ. ಸದಾಚಾರಿಯೆಂದೆನಿಸಿದೆ, ಕಾಮಾರಿಯೆಂದೆನಿಸಿದೆ, ಸುಜ್ಞಾನಿಯೆಂದೆನಿಸಿದೆ, ಅರಿತವಳೆಂದೆನಿಸಿದೆ, ಲಿಂಗೈಕ್ಯಳೆಂದೆನಿಸಿದೆ, ನಿಷ್ಪತ್ತಿಯ ನಿಜೈಕ್ಯಳೆಂದೆನಿಸಿದೆ. ಅಯ್ಯ, ಇವುಗಳೆಲ್ಲವು ನೀವು ಕರುಣಿಸಿದಾಗ ಬಂದವು. ಇವು ನಿಮ್ಮ ದೆಶೆ, ನಿಮ್ಮ ನಿಲವು, ನಿಮ್ಮವು. ನಿಮಗರ್ಪಿಸಿದುದರಿಂದ ನನಗಾವ ಚಿಂತನವಿಲ್ಲನೋಡಾ, ಚೆನ್ನಮಲ್ಲಿಕಾರ್ಜುನ ದೇವನ ನೆನಹಿನಲ್ಲಿ ನಿಮ್ಮ ಕರುಣದ ಶಿಶು ನಾನು ಕಾಣಾ ಸಂಗನಬಸವಣ್ಣ. ಅಯ್ಯ ಚೆನ್ನಮಲ್ಲಿಕಾರ್ಜುನನ ನೆನಹು ಅದು ನೀವು ಕೊಟ್ಟ ನೆನಹು ; ಸಾಮಾನ್ಯವೆ? ಅಚಿಂತ್ಯನ ನೆನಹು ಅಪ್ರಮಾಣ ನೆನೆಹು, ಅಯ್ಯ ಇದು ನೆನೆಯದ ನೆನೆಹು, ಚಿಂತಿಸದ ಚಿಂತನ. ಆದಿ, ಮಧ್ಯ , ಅಂತ್ಯವ ಕಾಣದ ನೆನಹು, ಇದು ನಿಮ್ಮಗಳಿಗೆ ಸಲ್ಲುವ ನೆನೆಹು. ಅದಕ್ಕಾಗಿ ನಿಮ್ಮ ಕರುಣದ ಶಿಶು ನಾನು. ಆದುದರಿಂದ ನನಗೆ ನಾನೆಂಬುದಿಲ್ಲ ನನ್ನದೆಂಬುದಿಲ್ಲ, ಪ್ರಿಯವಾದುದಿಲ್ಲ ಅಪ್ರಿಯವಾದುದಿಲ್ಲ , ಅಹುದಾದುದಿಲ್ಲ ಅಲ್ಲಾದುದಿಲ್ಲ , ಪಡೆಯಬೇಕಾದುದಿಲ್ಲ ಪಡೆದುಕೊಳ್ಳುವುದಿಲ್ಲ, ಅರಿತುದಿಲ್ಲ ಮರೆತುದಿಲ್ಲ, ಭಾವಿಸುವುದಿಲ್ಲ ಭಾವನೆಯಿಲ್ಲ. ಏಕೆಂದರೆ ಇದು ನಿಮ್ಮ ಕರುಣದ ಶಿಶು, ಸುಖರೂಪದ ಶಿಶು, ಶಬ್ದ ಮುಗ್ದನ ನಿಲುವಿನ ಶಿಶು, ನಿಮ್ಮಗಳಿಗೆ ಪ್ರಿಯವಾದ ಶಿಶು ಆನು ಕಾಣಾ ಸಂಗನಬಸವಣ್ಣ. ಹೀಗೆಂದು ಮಹಾದೇವಿಯಕ್ಕಗಳು ಭಿನ್ನೈಸಲು ಆ ಸಮಯದಲ್ಲಿ ಪ್ರಭುದೇವರು ಮಹಾದೇವಿಯಕ್ಕಂಗಳಿಗೆ ನಮಸ್ಕರಿಸಿದ ಪ್ರಸ್ತಾವದ ವಚನ.

**52**

**ಆದಿಶಕ್ತಿ, ಅನಾದಿಶಕ್ತಿಯೆಂಬರು, ಅದನಾರು ಬಲ್ಲರಯ್ಯ .**
**ಆದಿ ಎಂದರೆ ಕುರುಹಿಂಗೆ ಬಂದಿತ್ತು , ಅನಾದಿ ಎಂದರೆ ನಾಮಕ್ಕೆ ಬಂದಿತ್ತು .**
**ಆದಿಯಲ್ಲ, ಅನಾದಿಯಲ್ಲ, ನಾಮವಿಲ್ಲದ ಸೀಮೆಯಿಲ್ಲದ**

**ನಿಜಶಕ್ತಿ ಚಿಚ್ಛಕ್ತಿಯಾಯಿತ್ತು ನೋಡಾ !**
**ಅಂತರಂಗದ ಪ್ರಭೆ ಬಹಿರಂಗದಲ್ಲಿ ತಾನೆಯಾಗಿ ಗುಹೇಶ್ವರ ಲಿಂಗದಲ್ಲಿ**
**ಸಂದಿಲ್ಲದಿಪ್ಪ ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎಂಬೆನು.**

**ತಾತ್ಪರ್ಯ :** ನದಿಯು ಸಮುದ್ರದೋಳ್ ಬೆರೆತು ಸಮುದ್ರ ಎನಿಸುವಲ್ಲಿ ಅಲ್ಲಿ ಪೂರ್ವದ ಸಂಕೇತ ಕಾಣಬಹುದೆ ? ಆಗ ಅದು ಕೂಡಿದುದಲ್ಲ, ಅಗಲಿದುದಲ್ಲ, ಜಲವೇ ಜಲವು.ಅಪಾರ ಜಲನಿಧಿ. ಅದಕ್ಕೆ ನಾಮವಿಲ್ಲ, ನೇಮವಿಲ್ಲ ಹೇಗೋ ಹಾಗೆ. ಪ್ರಭು ಅಕ್ಕನ ಯತಾರ್ಥನಿಲುವನ್ನು ನೋಡಿ ಹರ್ಷದಿಂದ ಸ್ತುತಿಸುತ್ತಿದ್ದಾನೆ. ಅಹಹ ಅಕ್ಕ ಆದಿಶಕ್ತಿಯಲ್ಲ, ಅನಾದಿಶಕ್ತಿಯಲ್ಲ. ಏಕೆಂದರೆ ಕುರುಹಿನಿಂದುಕ್ತ ಶಕ್ತಿಯೂ ಅಲ್ಲ , ನಾಮದಿಂದುಕ್ತ ಶಕ್ತಿಯು ಅಲ್ಲ . ಅಂದರೆ ಲೋಕದೃಷ್ಟಿ , ಚರ್ಮದೃಷ್ಟಿ,

ಮಾಯಿಕ ದೃಷ್ಟಿಯುಳ್ಳದಾದುದರಿಂದ ಅಕ್ಕ ರೂಪಶಕ್ತಿಯಿಂದುಕ್ತವಾದ ಹೆಂಗೂಸಲ್ಲ , ನಾಮ ಶಕ್ತಿಯಿಂದುಕ್ತವಾದ ಮಾಯಿಕವಲ್ಲ , ವಾಸನೆಯಿಂದುಕ್ತವಾದುದಲ್ಲ.

ಇದು ನಿಜ ಶಕ್ತಿ, ದಿಟ ಸಟೆಯ ಕೂಡದ ಶಕ್ತಿ, ಬೆಳಕು ಕತ್ತಲೆ ಕಾಣದ ಶಕ್ತಿ, ಇದ್ದಕ್ಕಿದ್ದಂತಿರುವ

ನಿರ್ವಿಕಾರ ಶಕ್ತಿ, ಕಂದದ ಶಕ್ತಿ, ಕುಂದದ ಶಕ್ತಿ, ಅಕಲಂಕ ಶಕ್ತಿ, ಅಚಿಂತ್ಯ ಶಕ್ತಿ, ನಿರ್ವಿಕಾರ ಶಕ್ತಿ. ತನ್ನ ಮರೆದಿಪ್ಪ ಅಪಾರ ಶಕ್ತಿ. ಇದು ಘನದ ಶಕ್ತಿಯಾದುದರಿಂದ ಚಿಚ್ಛಕ್ತಿ ನೋಡಾ.

ಇದುವೆ ಹೃದಯ ಪ್ರಭೆ, ಸ್ವಯ ಪ್ರಭೆ, ಮೇರೆದಪ್ಪಿದ ಪ್ರಭೆಯಾಗಿ ರೂಪು ತಾನೆ, ನಿರೂಪ ತಾನೆ, ದೃಶ್ಯ ತಾನೆ, ದೃಕ್ ತಾನೆ, ಸ್ಥಾವರ ತಾನೆ, ಜಂಗಮ ತಾನೆ, ಕಲ್ಪಿತ ತಾನೆ, ಕಲ್ಪನೆ ತಾನೆ, ಧ್ಯಾತಾ ತಾನೆ, ಧ್ಯೇಯ ತಾನೆ, ಧ್ಯಾನ ತಾನೆ, ಸಮಾಧಿ ತಾನೆ, ಅಸಮಾಧಿ ತಾನೆ ಆದುದರಿಂದ ಗುಹೇಶ್ವರ ಲಿಂಗದಲ್ಲಿ ಸಂದಿಲ್ಲದಿಪ್ಪ ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದನು .

ಪೂರ್ಣವು ಅಪೂರ್ಣವಾಗುವದುಂಟೆ ? ನಿಸ್ಸೀಮವು ಸೀಮಿತವೇ ? ನಿರುಪಮವು ಉಪಮೆಯಿಂದುಕ್ತವೆ ? ಅಕಥನೀಯ ಘನ ಅಕ್ಕ ತಾನಾರೆಂದರಿದು ಅರುವಿನ ಅಹಂತ್ವ ಮರೆದು ತಾನೆ ತಾನಾಗಿಪ್ಪ ಶಬ್ದ ಮುಗ್ದ ವಾದ ಘನ .

ಈ ಘನವೆ ಅಕ್ಕನ ಶ್ರೀಪಾದ ಈ ಶ್ರೀಪಾದ ಕಾಣದುದ ಕಂಡುದರಿಂದ ಅತ್ಯಂತ ಪ್ರಸನ್ನನಾಗಿ ಪ್ರಭು ಸ್ತುತಿಸಿದುದು ಅವರ್ಣೀಯ ಸ್ತುತಿ, ಒಮ್ಮತದ ಸ್ತುತಿ, ಏಕತ್ವದ ಸ್ತುತಿ,ಅಂದರೆ ಅಕ್ಕನ ಇರವು ಪ್ರಭುವಿನ ಇರವು ಒಂದೆ, ಸ್ಥಿತಿ ಒಂದೆ, ಸುಖ ಒಂದೆ, ನಿರ್ವಾಣ ಒಂದೆ ಆಗಿರುವುದು.

**53**

**ಅಂಗೈಯ ಲಿಂಗದಲ್ಲಿ ಕಂಗಳ ನೋಟ ಸ್ವಯವಾದ ಇರವು ನೋಡಾ.**
**ತನ್ನ ಸ್ವಾನುಭವದ ಉದಯದಿಂದ ತನ್ನನರಿದ ನಿಜ ಶಕ್ತಿಯ ನೋಡಾ.**
**ಭಿನ್ನವಿಲ್ಲದಿರವು ಮನ್ನಣೆಯ ಮಮಕಾರವ ಮೀರಿದ ಭಾವ.**
**ತನ್ನಿಂದ ತಾನಾದಳು, ಗುಹೇಶ್ವರ ಲಿಂಗದಲ್ಲಿ ಮಹಾದೇವಿಯಕ್ಕನ**
**ನಿಲುವಿಂಗೆ ನಮೋ ನಮೋ ಎನುತಿರ್ದೆ ಕಾಣಾ ಚನ್ನಬಸವಣ್ಣ.**

**ತಾತ್ಪರ್ಯ :** ಚೆನ್ನಬಸವಣ್ಣ ಅಂಗೈಯ ಲಿಂಗದ ಕಂಗಳ ನೋಟವೆಂಬುದು ತಾನೆ. ಇದು ತನ್ನಯ ಸ್ವರೂಪ. ಇದು ತಾನೆ ತಾನಾದ ನೋಟ, ಸಾಕ್ಷಾತ್ಕಾರದ ನೋಟ, ಲಿಂಗದಲ್ಲಿ ಸ್ವಯವಾದ

ನೋಟ, ಇದುವೆ ಅಂಗೈಯ ಲಿಂಗ.

ಇದು ವಾಙ್ಮನೋತೀತ ಶೃತಿ ಸ್ಮೃತಿಗಳಿಗೂ ಮೀರಿದುದು. ಇದು ಶ್ರೀಗುರುವಿನ ಕರುಣೆಯಿಂದ ಕರಗತವಾದ ಲಿಂಗ ಘನಲಿಂಗ ಅಪ್ರತಿಮ ಲಿಂಗ ನೋಡಾ. ಈ ನಿರವಯ ರೂಪಿ ನಿಷ್ಕಲ ಲಿಂಗವೆ ಮಹಾಲಿಂಗ, ಪ್ರಾಣಲಿಂಗ, ಇಷ್ಟಲಿಂಗವೆಂದು ತ್ರಿವಿಧವು ಏಕೀಕರಿಸಿದ ಶ್ರೀಗುರುವು ಕರುಣಿಸಿದ ಕರುಣೆಯ ಲಿಂಗ ನೋಡಾ, ಕರುಣೆಯ ಅನುವ ನೋಡಾ ಕರುಣಾರಸ ನೋಡಾ. ಇಂತಪ್ಪ ಘನ ಲಿಂಗದಲ್ಲಿ ಕಂಗಳ ನೋಟ ಸ್ವಯವಾದ ಇರುವು ನೋಡಾ.

ಕಂಗಳ ನೋಟವೆಂಬುದು ಸ್ವಯಂ ನೋಟ, ಲಿಂಗ ನೋಟ, ಇದುವೆ ದಿವ್ಯ ನೋಟ, ಇದು ನೋಡದ ನೋಟ, ಕೂಡದ ನೋಟ, ಆಗಲಲಿಲ್ಲದ ಪ್ರಭೆಯಾದುದರಿಂದ ನೋಟ ಕಂಗಳು ಒಂದೆ, ಲಿಂಗ ಕಂಗಳು ಒಂದೆ, ಆದುದರಿಂದ ಸ್ವಯವಾದ ಇರವು ಅಂದರೆ ಲಿಂಗದ ಇರುವು ತನ್ನ ಇರುವು ಒಂದೆ ಆದುದೆ ಸಾಕ್ಷಾತ್ಕಾರದ ಘನ ನೋಡಾ.

ಇದುವೆ ಸ್ವಾನುಭವ ನೋಡಾ, ಎಲ್ಲರು ಅಹುದೆಂಬುದು ಪ್ರಮಾಣವಲ್ಲ ಕಾಣಿರೋ, ಎಲ್ಲರು ಅಲ್ಲವೆಂಬುದು ಪ್ರಮಾಣವಲ್ಲ ಕಾಣಿರೋ, ಅದೇನು ಕಾರಣವೆಂದರೆ ಶಿವಶರಣರ ಹೃದಯದ ಅಂತಸ್ಥವ ನರಿಯರಾಗಿ ಎನ್ನ ಅಹುದೆಂಬುದನೂ, ಅಲ್ಲ ಎಂಬುದನೂ ಎನ್ನ ಮನೋಮೂರ್ತಿ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೆ ನೀನೆ ಬಲ್ಲೆ ಎಂದು ಹೇಳಿದ. ಎಂಥ ಪರಾತ್ಪರವಾಣಿ. ಇದು ಅಪ್ರಮಾಣನವಾಣಿ, ಚಿನ್ಮಯವಾಣಿ , ಆದುದರಿಂದ ಮೇರೆದಪ್ಪಿದ ಆಕಾಶವಾಣಿ ನುಡಿಗಿಂಬಿಲ್ಲದ, ನಡೆಗಿಂಬಿಲ್ಲದ, ಭಾವಕ್ಕಿಂಬುಕೊಡದ ಪರಮನ ವಾಣಿ. ಅದಕ್ಕಾಗಿ ಎಲ್ಲರು ಅಹುದೆಂಬುದು ಸ್ವಾನುಭವವಲ್ಲ, ಎಲ್ಲರು ಅಲ್ಲವೆಂಬುದು ಸ್ವಾನುಭವವಲ್ಲ. ಏಕೆಂದರೆ ಅಹುದು ಅಲ್ಲವೆಂಬ ಪ್ರಮಾಣಂಗಳು ಮನೋಮೂರ್ತಿ ಮಹಾಲಿಂಗದಿಂದ ಸಿದ್ಧವಾಗುವಾಗ ಆ ಮಹಾಲಿಂಗ ಘನವು ಅಹುದೆಂಬ ಪ್ರಮಾಣಕ್ಕೂ ತಾನು ಇದ್ದಕ್ಕಿದ್ದ ಹಾಗೆ ನಿರಂತರ ನಿರಾತಂಕವಿಲ್ಲದೆ ಪ್ರಕಾಶಿಸುವದು. ಅಲ್ಲವೆಂಬ ಪ್ರಮಾಣಕ್ಕೂ ತಾನು ಇದ್ದಕ್ಕಿದ್ದ ಹಾಗೆ ನಿರ್ವಿಕಾರವಿರುವಾಗ ಅಂಥ ಅಪ್ರಮಾಣ ಲಿಂಗವನ್ನು ಈ ಅಹುದು ಅಲ್ಲವೆಂಬ ಪ್ರಮಾಣಗಳು ಹೇಗೆ ಸಿದ್ದ ಮಾಡುವವು; ಮಾಡಲರಿಯವು.

ಇದು ಕಾರಣ ಮಹಾಲಿಂಗ ತಾನಾದ ಯತಾರ್ಥ ದೃಷ್ಟಿಯಲ್ಲಿ ಅಹುದು ಎನಲು ಇಂಬಿಲ್ಲ ಅಲ್ಲೆನಲು ಇಂಬಿಲ್ಲ, ಮಹಾಲಿಂಗರೂಪನಾದ ತನ್ನ ಸ್ವರೂಪ, ಆವುದರೋಳ್ ಕೂಡದ ಘನ, ತನ್ನ ಸ್ವರೂಪ ದೋಳ್ ಇದು ನಿತ್ಯ ಇದು ಅನಿತ್ಯವೆಂದು ಬೇರ್ಪಡಿಸಲು ಇಂಬಿಲ್ಲವಾದುದರಿಂದ ತಾನು ಬೇರ್ಪಡಿಸಲಾಗದ ಘನ. ತನ್ನಂ ಹೀಗೆಯೆ ಎಂದು ಹೇಳಲುಬಾರದ್ದರಿಂದ ತಾನು ಅಕಥನೀಯನಾದುದರಿಂದ ಏನೊಂದುಸುರಲು ಎಡೆಗೊಡದ ಘನ. ಇದುವೆ ತನ್ನ ಸ್ವಾನುಭವದ ಉದಯದಿಂದ ತನ್ನನರಿದ ನಿಜಶಕ್ತಿಯು. ಈ ನಿಜಶಕ್ತಿಯ ದೃಷ್ಟಿಯಲ್ಲಿ ಅಂಗನೆಂಬುದಿಲ್ಲ, ಲಿಂಗ ನೆಂಬುದಿಲ್ಲ , ಭಿನ್ನನೆಂಬುದಿಲ್ಲ , ಅಭಿನ್ನನೆಂಬುದಿಲ್ಲ, ಸಂಗವಿಲ್ಲ, ಸಮರಸವೆಂಬುದಿಲ್ಲವಾದುದ ರಿಂದ ತನ್ನ ನರಿದ ನಿಜಶಕ್ತಿಯು ನೋಡಾ.

ಇದು ಭಿನ್ನವಿಲ್ಲದಿರುವು ಗಗನದಿರವು. ಗಗನಕ್ಕೆ ಘಟಾಕಾಶ, ಮಠಾಕಾಶ, ಮೇಘಾಕಾಶ ಹೇಗೆ ತನಗಿಂತ ಭಿನ್ನವಿಲ್ಲದಿರವು ; ಅದು ಆಕಾಶವತ್ ಆಕಾಶವಾದುದರಿಂದ ತಾನು ಇದ್ದಕ್ಕಿದ್ದ ಹಾಗೇ ಇದೆಯೋ ಹಾಗೆ ತಾನಾರೆಂದರಿದ ಇರವು ಭಿನ್ನವಿಲ್ಲದಿರವು. ಜೀವ ಜಡ, ಈಶ ಜಡ, ಜೀವ

ಜೀವಾಜೀವ, ಜಡಾಜಡ ಬೇರೆಂದು ವಿಭಾಗಿಸಿದರೂ ವಿಭಾಗವಾಗದ ಇರವು. ಪಂಚ ಪ್ರಕಾರದ ಭೇದವನ್ನು ಕೆಡಿಸಿ ಅಭೇದ ಮಾಡಿದರೂ ತಾನು ಇದ್ದಕ್ಕಿದ್ದಂತಿದ್ದ ಇರವು. ಇದುವೆ ಭಿನ್ನವಿಲ್ಲದಿರವು, ಈ ಇರುವೆ ತನ್ನ ಇರುವು. ಇದು ತಾನಾರೆಂದರಿತ ಯತಾರ್ಥ ಇರುವು, ಇದು ನಿಸ್ಸೀಮವು ಅಪಾರವು. ಇಲ್ಲಿ ಇದು ಅಹುದು ಇದು ಅಲ್ಲವೆಂದು ಬೇರ್ಪಡಿಸಲು ಇಂಬುಕೊಡದ ಇರವು, ಇದುವೆ ನಿಜದಿರವು. ನಿರಾಲಂಬದಿರವು, ನಿರುಪಮದಿರುವೆ ಭಿನ್ನವಿಲ್ಲದಿರವು. ಆದುದರಿಂದ ಮನ್ನಣೆ ಮಮಕಾರ ಮೀರಿದ ಭಾವ, ಇದು ತಾನೆ ತಾನಾದ ಭಾವ, ನಿರ್ಭಾವ.ಇಲ್ಲಿ ಕಾಯುವುಳ್ಳವರಿಲ್ಲ, ಕಾಯ ಬಯಲಾದವರಿಲ್ಲ ಸಾಕಾರ ನಿರಾಕಾರವೆಂಬ ವಿಭಾಗವಿಲ್ಲ , ಅರಿತವರಿಲ್ಲ ಮರೆತವರಿಲ್ಲ ತನ್ನವರಿಲ್ಲ ಅನ್ಯರಿಲ್ಲ ತಾನೆಂಬುದಿಲ್ಲ ಅನ್ಯರೆಂಬುದಿಲ್ಲ, ಸರ್ವಮಂಗಳಮಯ ಸಚ್ಚಿದ್ಘನ ಲಿಂಗ ತಾನಾದುದರಿಂದ ಇದು ಮನ್ನಣೆ ಮಮಕಾರ ಮೀರಿದ ಭಾವ ಎದ್ದು ಕಾಣುವುದರಿಂದ ತನ್ನಿಂದ ತಾನಾದಳು. ತನ್ನಿಂದ ತಾನಾದ ಘನತ್ವ ನಮ್ಮ ಗುಹೇಶ್ವರ ಲಿಂಗದಲ್ಲಿ ಮಹಾದೇವಿಯಕ್ಕನ ನಿಲುವಿಂಗೆ ನಮೋ ನಮೋ ಎನುತಿರ್ದೆನು ಕಾಣಾ ಚೆನ್ನಬಸವಣ್ಣ. ಹೀಗೆಂದು ಪ್ರಭುದೇವರು ನಿರೂಪಿಸಲು ಚಿಕ್ಕದಣ್ಣಾಯಕರು ಆ ಮಹಾದೇವಿಯಕ್ಕಂಗೆ ಪ್ರಸನ್ನರಾಗಿ ಸ್ತುತಿಸಿದ ವಚನ.

**54**

**ಅಜಕಲ್ಪ ಕೋಟಿ ವರ್ಷದವರೆಲ್ಲರೂ ಹಿರೆಯರೆ ?**
**ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರೆಯರೆ ?**
**ನಡುಮುರಿದು ಗೂಡು ಗೂರಿ ತಲೆ ನಡುಗಿ ನೆರೆ ತೆರೆ ಹಚ್ಚಿ ಮತಿಗೆಟ್ಟು**
**ಒಂದನಾಡಹೋಗಿ ಒಂಭತ್ತನಾಡುವ ಅಜ್ಞಾನಿಗಳೆಲ್ಲರೂ ಹಿರೆಯರೆ ?**
**ಅನುವನರಿದು ಘನವ ಬೆರೆಸಿ ಹಿರಿದು ಕಿರಿದೆಂಬ ಭೇದವ ಮರೆದು**
**ಕೂಡಲ ಚೆನ್ನಸಂಗಯ್ಯನಲ್ಲಿ ಬೆರೆಸಿ ಬೇರಿಲ್ಲದಪ್ಪ**
**ಹಿರಿಯತನ ನಮ್ಮ ಮಹಾದೇವಿಯಕ್ಕಂಗಾಯಿತ್ತು .**

**ತಾತ್ಪರ್ಯ :** ಬ್ರಹ್ಮ ಕಲ್ಪಕೋಟಿ ವರ್ಷದವನು ಅಂದರೆ ಬ್ರಹ್ಮನಷ್ಟು ಕಲ್ಪಕೋಟಿ ಬಾಳಿದವನಾದರೂ ಹಿರಿಯರಲ್ಲ, ಏಕೆಂದರೆ ಬ್ರಹ್ಮನಷ್ಟು ಆಯುಷ್ಯ ಬಾಳಿದವ ನಾನಾರು ಎಂದು ತನ್ನನ್ನು ತಾನು ಅರಿಯಲಿಲ್ಲ. ಅರಿಯದ್ದರಿಂದ ಮರವಿನಲ್ಲಿದ್ದವನಲ್ಲದೆ ಅರುವಿನ ಘನವ ತಿಳಯಲಿಲ್ಲ. ಮರವೆಂಬುದು ಕಾರ್ಗತ್ತಲೆ, ಕಾರ್ಗತ್ತಲೆಯಲ್ಲಿ ವಾಸ ಮಾಡಿದವನಿಗೆ ಬೆಳಕಿನ ಘನವ ಗೊತ್ತಾಗದು. ಜೇಡಹುಳು ತಾನೆ ಜಾಲವ ರಚಿಸಿ ಅದರೋಳ್ ಸುತ್ತಾಡುವುದು ದೂರವಾಗದು. ಜೀವನಾದರೂ ತನ್ನ ವಾಸನಾರೂಪಿ ಜಾಲವನ್ನು ರಚಿಸಿ ಅದರೋಳ್ ಮೋಹವನ್ನು ಸುತ್ತಿಕೊಂಡು ಬಂಧಿತನಾಗಿಹನು. ತಾನಾರೆಂದು ತಿಳಿಯದ ಪ್ರಮಾದವೆ ತನ್ನ ಸ್ಥಾವರದಂತೆ ಜಡನಾಗಿ ಮೂಢನಾಗಿಹನು. ಇದರಿಂದಾಗುವ ತನ್ನ ಪುರುಷಾರ್ಥ ರೂಪ ಹಾನಿಯನ್ನು ಅರಿಯನು. ಇದು ಕಾರಣ ಅಜಕಲ್ಪ ಕೋಟಿ ವರ್ಷ ಪವನಸೇವನೆಯಿಂದ ಬಾಳಿದರೂ ಅರಿಯಲಿಲ್ಲ.ಅಜ್ಞಾನ ಹೋಗಲಿಲ್ಲ ದೇಹ ಬುದ್ಧಿ ನಾಶವಾಗಲಿಲ್ಲ. ವಿಷಯದ ವ್ಯಸನ ಕ್ಷಯವಾಗಲಿಲ್ಲ . ಪುನಃ ಪುನಃ ಹುಟ್ಟಿ ಸಾಯುವುದು ತಪ್ಪಲಿಲ್ಲ. ಅದಕ್ಕಾಗಿ ಇವರು ಹಿರಿಯರೆ ?

**ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲ ಹಿರಿಯರೆ ?: ಆವುದಾದರೂ ಒಂದು ಧ್ಯಾನದಲ್ಲಿ ಕುಳಿತಾಗ ಹುತ್ತೇರಿ , ಬೆತ್ತ ಬೆಳೆದ ತಪಸ್ವಿಗಳು ಹಿರಿಯರೆ ?** ಏಕೆಂದರೆ ಧ್ಯಾನ ಮಾಡುವವ ತಾನಾರು ಎಂಬುದನರಿಯಲಿಲ್ಲ ತನ್ನ ಧ್ಯೇಯ ಮೂರ್ತಿಯನ್ನಾದರೂ ಅರಿಯಲಿಲ್ಲ ಅಥವಾ ತಪವನ್ನಾಚರಿಸುವ ದೇಹೇಂದ್ರಿಯಂಗಳ ನ್ನಾದರೂ ಅರಿತನೆ ? ಅರಿಯದ್ದರಿಂದ ಮಾಯಿಕ ವಸ್ತುವನ್ನು ಆರಾಧಿಸಿ ಮಾಯಿಕ ಫಲವೆ ಪ್ರಾಪ್ತವಾಯಿತಲ್ಲದೆ ನಿತ್ಯನಿರತಿಶಯವಾದ ಪರಮಾನಂದವೆಂಬ ತನ್ನ ಸ್ವರೂಪ ಸುಖ ಪ್ರಾಪ್ತವಾಗದ್ದರಿಂದ ಸಮ್ಯಜ್ಞಾನಿ ಶರಣರ ದೃಷ್ಟಿಗೆ ಇವರು ತಮ್ಮ ಅಮೂಲ್ಯ ಜೀವನವನ್ನೇ ಹಾಳು ಮಾಡಿಕೊಂಡವರು. ತಮ್ಮನ್ನೆ ತಾವು ಕೊಂದು ಕೊಂಡವರು, ಭಾಗ್ಯಹೀನರು, ತಮ್ಮ ಸ್ವರೂಪಮಾದ ಶಿವ ಸುಖದ ಸಮಯವನ್ನೆ ಹಾಳು ಮಾಡಿಕೊಂಡದ್ದರಿಂದ ಇವರೆಲ್ಲ ಹಿರಿಯರಲ್ಲವೆಂದಿದ್ದಾರೆ.

**ನಡು ಮುರಿದು ಗೂಡು ಗೂರಿ ತಲೆ ನೆರೆ ತೆರೆ ಹಚ್ಚಿ ಮತಿಗೆಟ್ಟು , ಒಂದನಾಡ ಹೋಗಿ ಒಂಭತ್ತುನಾಡುವ ಅಜ್ಞಾನಿಗಳೆಲ್ಲ ಹಿರಿಯರೆ:** ವೃದ್ಧಾವಸ್ಥೆಯೆಂಬುದು ಶರೀರದ ಜೀರ್ಣಾವಸ್ಥೆ, ಕ್ಷಯಾವಸ್ಥೆ . ಇದು ಅನೇಕ ಚಿಂತಿಯ, ಚಿಂತನಾಲಯ, ದುಃಖಾಲಯ, ಮೋಹಾಲಯ, ಇಲ್ಲಿ ವಿಷಯಾಸಕ್ತಿಯೆ ಅಧಿಕವಾಗಿ ಭೋಗ ಪ್ರೇಮವೆ ಅಧಿಕಾಧಿಕವಾಗಿ ನೋಡಲು ಶರೀರ ಬಾಗಿದರೇನು? ದಮ್ಮಿನಿಂದ ಕೂಡಿ ತೇಕು ಹತ್ತಿದರೇನು? ತಲೆ ನಡುಗಿ ಮೈಯೆಲ್ಲ ಬಿಳಿಕೂದಲುಗಳಿಂದ ತುಂಬಿದರೇನು? ಅರುಮರವಾಗಿ ಬುದ್ಧಿ ಇಲ್ಲದೆ ಒಂದ ಮಾತನಾಡಹೋಗಿ ಒಂಭತ್ತನಾಡುವ ದೇಹಬುದ್ಧಿಯುಳ್ಳ ಅಜ್ಞಾನಿಗಳೆಲ್ಲ ಹಿರಿಯರೆ? ಇವರು ಎಷ್ಟುದಿವಸ ಬಾಳಿದರೂ ನರ ಜನ್ಮದ ಸಾರ್ಥಕತೆ ಮಾಡಿಕೊಳ್ಳಲಿಲ್ಲ, ವಿಷಯಲಂಪಟರಾಗಿ ಭೋಗಾಸಕ್ತಿಯಿಂದ ಇಂದ್ರಿಯರಾಮ ರಾದರಲ್ಲದೆ ಆತ್ಮರಾಮರಾಗಲಿಲ್ಲತಮ್ಮ ತಾವರಿಯಲಿಲ್ಲ . ತಮ್ಮ ಜನ್ಮ ಸಾರ್ಥಕ ಮಾಡಿಕೊಳ್ಳದವರು ಅವರೆಂತು ಹಿರಿಯರಾಗುವರು?

**ಅನುಪಮ ಘನವ ಬೆರೆದು ಹಿರಿದು ಕಿರಿದೆಂಬ ಭೇದವ ಮರೆದು ಕೂಡಲ ಚೆನ್ನಸಂಗಯ್ಯನಲ್ಲಿ ಬೆರೆಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿಕ್ಕಂಗಾಯಿತ್ತು :** ಅಂದರೆ ತಾನಾರೆಂಬ ತನ್ನ ಸ್ವರೂಪವ ತಿಳಿದು ಅಖಂಡಾನಂದ ದೋಳ್ ಮಗ್ನವಾಗಿ ಶರಣಸತಿ, ಲಿಂಗಪತಿ ಭೇದವ ಮರೆತು ಅಂದರೆ ಕಾಣದೆ ಸತಿ ಕಿರಿದು, ಪತಿ ಹಿರಿದೆಂಬ ಭಾವ ಮರೆದು ಕೂಡಲಚೆನ್ನಸಂಗಯ್ಯನಲ್ಲಿ ಅಂದರೆ ತಾನೆ ತಾನಾಗಿಪ್ಪ ನಿಃಕಲದಲ್ಲಿ ಬೆರೆದು ಅಂದರೆ ತಾನೆ ಆಗಿ ತಾನು ಅದುವೆ, ಅದುವೆ ತಾನೆಂಬ ಭಾವವಿಲ್ಲದೆ ತಾನೆ ತಾನಾಗಿಹುದೆ ಹಿರಿಯತನ ಇದು ನಮ್ಮ ಮಹಾದೇವಿಯಂಕ್ಕಗಾಯಿತ್ತು .

ಮಠದೊಳಿದ್ದ ಆಕಾಶ ಮಠದೊಳಗಿದ್ದಂತೆ ಭಾಸಿಸಿದರೂ ಅದು ತಾನೆ ತಾನಾಗಿ ಹೇಗೆ ಇದೆಯೋ ಹಾಗೆ ಅಂಗದೊಳಗೆಯಿರುವ ಅಂಗ ಅಂದರೆ ಅರುವು ಸ್ಥೂಲ ಸೂಕ್ಷ್ಮ ಕಾರಣ ಮಹಾಕಾರಣ ರೂಪಿ ತನುವಿನೊಳಗಿದ್ದರೂ ಅದಕ್ಕೆ ಅಂಟದೆ ಕಂದದೆ ಕುಂದದೆ ಇದ್ದಕ್ಕಿದ್ದಂತಿದ್ದ ಚಿದ್ಘನವಾಗಿದೆ. ಪರಬ್ರಹ್ಮ ಪರಮಾತ್ಮನೆಂಬುದು ಇದು ಕೇವಲ ಅರುವು. ಅಖಂಡ. ಏನೊಂದಾಗದ ಅರುವು, ಇದ್ದಕ್ಕಿದ್ದ ಹಾಗೆ ಅಂದು ಇಂದು ಎಂದೆದೂ ಇದ್ದಕ್ಕಿದ್ದಂತಿದ್ದ ಅರುವು. ಇದು ಆವ ತತ್ವದೋಳ್ ಬೆರೆಯೆದೆ ತಾನೆ ತಾನಾಗಿಪ್ಪ , ಖಂಡಿತವಿಲ್ಲದ ಅಖಂಡವು. ಇದು ಖಂಡಿತವಿಲ್ಲ ಅಖಂಡ ವಾದುದರಿಂದ, ಅಂಗನೆಂಬುದು ಅದುವೆ , ಲಿಂಗನೆಂಬುದು ಅದುವೆ, ಅದರ ಹೊರತು ಅನ್ಯವಾದುದು ಇರಲಿಲ್ಲವಾದ್ದರಿಂದ ಪೂರ್ಣಮದಃ, ಪೂರ್ಣಮಿದಂ, ಪೂರ್ಣಾತ್ ಪೂರ್ಣ ಮುದಚ್ಯತೆ, ಅಂದರೆ ಪೂರ್ಣದಲ್ಲಿ ಬದಲಾವಣೆಗಿಂಬಿಲ್ಲ , ಕೂಡಿದುದಿಲ್ಲ , ಅಗಲಿದುದಿಲ್ಲ ,

ನಿಸ್ಸೀಮವು ಸೀಮೆಯುಳ್ಳದ್ದಾಗದು. ಹೀಗೆ ಅರಿತುದೆ ಅನುವರಿದಂತೆ ಘನವು ಬೆರೆತಂತೆ. ಎರಡೆಂಬುದಿದ್ದಲ್ಲಿ ಹಿರಿದುಂಟು ಕಿರಿದುಂಟು, ದ್ವೈತವೆಂಬುದಕ್ಕಿಂಬಿಲ್ಲದಿರುವಾಗ ಹಿರಿದಾವುದು ಕಿರಿದಾವುದು ? ಪೂರ್ಣವೆಂಬುದು ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತಿದ್ದ ಚಿನ್ಮಯ ಸ್ವರೂಪವು ತನ್ನ ಸ್ವರೂಪವಾದುದೆ ಕೂಡಲಸಂಗಯ್ಯನಲ್ಲಿ ಬೆರೆಸಿ ತನ್ನಲ್ಲಿ ಬೇರಿಲ್ಲದಿಪ್ಪ ಹಿರಿತನ. ಈ ಹಿರಿತನ ಘಟ್ಟಗೊಂಡಿರುದರಿಂದ ತನ್ನನ್ನು ಮರೆತ ಇರವು. ಸ್ವಮಹಿಮ್ನವು, ನಮ್ಮ ಮಹಾದೇವಿ ಯಕ್ಕಂಗಾಯಿತ್ತು.

ಆ ಸಮಯದಲ್ಲಿ ಸಿದ್ಧರಾಮಯ್ಯ ತಂದೆಗಳು ಮಹಾದೇವಿಯಕ್ಕಂಗಳ ಸ್ತುತಿಸಿದ ವಚನ .

**55**

**ಅಹುದಹುದು ಮತ್ತೇನು ಮರಹಿಂಗೆ ಹಿರಿದು ಕಿರಿದುಂಟಲ್ಲದೆ**
**ಅರುವಿಂಗೆ ಹಿರಿದು ಕಿರಿದುಂಟೆ ಹೇಳಯ್ಯಾ , ಸಾವಿಂಗೆ ಭಯವುಂಟಲ್ಲದೆ**
**ಅಜಾತಂಗೆ ಭಯ ಉಂಟೆ ಹೇಳಯ್ಯಾ , ಕಪಿಲ ಸಿದ್ಧಮಲ್ಲಿನಾಥನಲ್ಲಿ**
**ಮಹಾದೇವಿಯಕ್ಕಳ ನಿಲುವಿಂಗೆ ಶರಣೆಂದು ಶುದ್ಧನಾದೆನು ಕಾಣಾ ಚೆನ್ನಬಸವಣ್ಣಾ.**

**ತಾತ್ಪರ್ಯ :** ಅಹುದಹುದು, ಷಟ್‌ಸ್ಥಲ ಚಕ್ರವರ್ತಿ, ಪ್ರಭು ನೀವು ಅಕ್ಕನ ಮೇರೆದಪ್ಪಿದ ನಿಲುವು ಸ್ತುತಿಸಿದುದು ಯತಾರ್ಥವು. ಕಪಿಲಸಿದ್ಧ ಮಲ್ಲಿನಾಥನಲ್ಲಿ ಬೆರೆಸಿ ಬೇರಿಲ್ಲದಪ್ಪ ಹಿರಿತನ ಮಹಾದೇವಿಯಕ್ಕಂಗೆ ಸಲುವದು. ಮರವಿಂಗೆ ಹಿರಿದು ಕಿರಿದುಂಟಲ್ಲದೆ ಅರುವಿಂಗೆ ಹಿರಿದುಕಿರಿದುಂಟೆ ಮರವಿಂಗೆ ಸೀಮೆಯು ಅರುವಿಂಗೆ ಸೀಮೆಯೆ ? ಮರವಿನಲ್ಲಿ ಪ್ರಕೃತಿ ಪುರುಷ, ಇಲ್ಲಿಯೆ ಸತ್ವ, ರಜ, ತಮಗಳ ವಿಭಾಗ. ಇಲ್ಲಿಯೆ ಜಗತ್ತು ಜೀವ, ಈಶ. ಈ ಪ್ರಕೃತಿಯ ವಿಕೃತಿಯಿಂದ ಜೀವನ ಕಿರಿದಾಗಿ ಈಶನು ಹಿರಿದಾಗಿ ಜಗವು ಇವನು ಉಪಭೋಗಿಸುವ ವಸ್ತುವಾಗಿ ಭಾಸಿಸುವದು. ತಾನಾರೆಂಬುದು ಮರೆದು ಪ್ರಕೃತಿ ಕಾರ್ಯದಲ್ಲಿ ಸತ್ಯತ್ವ ಬುದ್ಧಿ ಮಾಡಿಹುದೆ ಮರವು. ಈ ಮರವಿನಲ್ಲಿಯೆ ದ್ವೈತವು ಸಿದ್ಧವಾದುದರಿಂದ ಅರಿತವನು ಹಿರಿಯನಾಗಿ ಮರತವನು ಕಿರಿದಾಗಿ ಅವಿವೇಕಿ ಕಿರಿದಾಗಿ, ವಿವೇಕಿ ಹಿರಿದಾಗಿ, ವಿಷಯ ಕಿರಿದಾಗಿ ನಿರ್ವಿಷಯ ಹಿರಿದಾಗಿ ಸಿದ್ಧವಾಗುವುದು. ಇದು ಕಾರಣ ಮರವಿಂಗೆ ಹಿರಿದು ಕಿರಿದು, ಅರುವಿಂಗೆ ಹಿರಿದು ಕಿರಿದುಂಟೆ ?

ಏಕೆಂದರೆ ಅನ್ಯವೆಂಬುದು ನಿರ್ವಿಕಾರವು ನಿಸ್ಸೀಮವು ಉದಾಯಸ್ತಗಳಿಲ್ಲದ ಸ್ವಯಂಪ್ರಕಾಶ, ಚಿನ್ಮಯ, ಇದ್ದಕ್ಕಿದ್ದಂತಿರುವ ಅಚಿಂತ್ಯವು ಅಖಂಡೈಕರಸವು. ಇಲ್ಲಿ ವಿಭಾಗ ದೃಷ್ಟಿಗಿಂಬಿಲ್ಲವಾದ್ದರಿಂದ ಸಮಸ್ವರೂಪವಾಗಿರುವ ಪರಮಸತ್ಯ. ಇಲ್ಲಿ ಅರಿತವರಷ್ಟೆ ಅರಿಯದವರಷ್ಟೆ , ಬ್ರಾಹ್ಮಣರಷ್ಟೆ ಚಾಂಡಾಲರಷ್ಟೆ, ಶತೃಗಳಷ್ಟೆ ಮಿತ್ರರಷ್ಟೆ, ಪಶುಗಳಷ್ಟೆ ತನ್ನವರಷ್ಟೆ ಅನ್ಯರಷ್ಟೆ, ಪ್ರಿಯಾರದವರಿಲ್ಲ ಅಪ್ರಿಯಾರಾದವರಿಲ್ಲ . ಸಕಲವು ಬ್ರಹ್ಮಮಯವು. ಸರ್ವಂಖಲ್ವಿದಂ ಎಂಬ ಭರಿತ ಭಾವವು ಕರಿಗೊಂಡಿರುವದರಿಂದ ನಿಸ್ಸೀಮವಾದುದೆ ಸರ್ವಮಂಗಳಮಯವಾದ ಸದ್ವಸ್ತು. ಅದು ನಿರಂತರತತ್ವ. ಅದು ಕೆಡದು ಏನೊಂದಾಗದು ಇದ್ದಕ್ಕಿದ್ದ ಹಾಗೆ ಇದ್ದ ಅಕಳಂಕ.

ಅಕಳಂಕವು ಕಳಂಕವುಳ್ಳವುದ್ದಾಗುವುದೆ ? ಕೂಡದಗಲದ ಘನ ಅದು ಕೂಡಿದುದೆಂತು ಅಗಲಿದುದೆಂತು? ಏಕಂದರೆ ಅದು ಬೇರ್ಪಡಿಸಲಾಗದ ಘನವಾದ್ದರಿಂದ ಅಲ್ಲಿ ಇದು ಆತ್ಮ, ಇದು ಅನಾತ್ಮ, ಇದು ಜೀವ, ಇದು ಬ್ರಹ್ಮ , ಇದು ಸಂಗಿ ,ಇದು ನಿಸ್ಸಂಗಿ ಎಂದು ಬೇರ್ಪಡಿಸುವುದು

ಹೇಗೆ ? ಅದಕ್ಕಾಗಿ ಅವಿಚಾರಕ್ಕಿಂಬಿಲ್ಲ , ವಿಚಾರಕ್ಕಿಂಬಿಲ್ಲ , ಅವಿದ್ಯೆಗಿಂಬಿಲ್ಲ , ವಿದ್ಯೆಗಿಂಬಿಲ್ಲ , ಕಲ್ಪಿತನಿಲ್ಲ , ಕಲ್ಪನೆಯಿಲ್ಲ , ಬಂಧವಿಲ್ಲ , ಮೋಕ್ಷವಿಲ್ಲ , ಅಲ್ಲಿ ಏಕವೆಂಬುದಿಲ್ಲ , ಅನೇಕವೆಂಬುದಿಲ್ಲ, ಏಕವೆನ್ನಲು ಬಾರದ ಘನದೊಳ್ ಹಿರಿದಾವುದು ಕಿರಿದಾವುದು ? ಅಂದು ಇಂದು ಎಂದೆಂದೂ ಇದ್ದಕ್ಕಿದ್ದ ಹಾಗೆ ಇರುವ ಸರ್ವಮಂಗಳಮಯವಾದ ಸದ್ವಸ್ತುವಿನಲ್ಲಿ ಅರಿತ ಹಿರಿಯನಾರು ಮರೆತ ಕಿರಿಯನಾರು ? ಸಾವಿಂಗೆ ಭಯವಲ್ಲದೆ, ಅಜಾತಂಗೆ ಭಯವುಂಟೆ ? ಅವಯವದಿಂದುಕ್ತವಾದುದೆಲ್ಲವು ಜಾತವು, ಇದು ಉತ್ಪತ್ತಿ ಲಯವುಳ್ಳದು. ಇದಕ್ಕೆ ಸಾವುಂಟು, ಎಲ್ಲಿ ಸಾವು ಇದೆ ಅಲ್ಲಿ ಭಯವಿದೆ. ನಿರವಯವಾವುದು ಅದು ಅಜಾತನು, ಅದು ಅನಂತವು. ಅದಕ್ಕೆ ಆದಿಯು ಇಲ್ಲ, ಮಧ್ಯವಿಲ್ಲ, ಅಂತ್ಯವಿಲ್ಲ ಅದಕ್ಕಾಗಿ ನಿರ್ಭಯವು. ಹುಟ್ಟಿದ್ದುಸಾವುದು ಹುಟ್ಟದುದು ಸಾಯದು. ಅದಕ್ಕಾಗಿ ಅದು ಅಮರ ನಿರ್ಭೀತವು. ಕಲ್ಪಿತವೆಲ್ಲ ಹುಟ್ಟಿದುದು ಅದಕ್ಕಾಗಿ ಅದಕ್ಕೆ ಸಾವಿನ ಭೀತಿ ಉಂಟು .ಅಕಲ್ಪಿತವು ಹುಟ್ಟದ್ದು ಅಂದು ಇಂದು ಎಂದೆಂದೂ ಇದ್ದಕ್ಕಿದ್ದ ಹಾಗೆ ಇರುವುದರಿಂದ ಅಜಾತವು ನಿರ್ಭೀತವು. ಅಕ್ಕನು ಅಜಾತಳು, ಅಕಲ್ಪಿತಳು, ಅಚಿಂತ್ಯಳು ಆದವಳಿಗೆ ಅದಾವ ಚಿಂತೆ ಅದಾವ ಭಯ ? ಇಂಥ ಅಜಾತ ಮಹಾದೇವಿಯಕ್ಕನ ನಿಲುವಿಗೆ ಶರಣು, ಅಚಿಂತ್ಯಳಿಗೆ ಶರಣೆಂದು ನಾನು ಶುದ್ಧವಾದೆನೆಂದು ಸಿದ್ಧರಾಮ ಶಿವಯೋಗಿಯು ಪ್ರಶಂಸಿದ್ದಾನೆ .

(ಇದಕ್ಕೆ ಅಕ್ಕಗಳ ಉತ್ತರ)

**56**

**ಮರ್ತ್ಯಲೋಕದ ಭಕ್ತರ ಮನವ ಬೆಳಗಲೆಂದು ಇಳಿತಂದನಯ್ಯಾ ಶಿವನು.**
**ಕತ್ತಲೆಯ ಪಾಳೆಯವ ರವಿ ಹೊಕ್ಕಂತಾಯಿತ್ತಯ್ಯ .**
**ಚಿತ್ತದ ಪ್ರವೃತ್ತಿಯ ಹಿಂಗಿಸಿ ಮುಕ್ತಿ ಪಥವ ತೋರಿದನಲ್ಲ.**
**ಅಸಂಖ್ಯಾತ ಗಣಂಗಳಿಗೆ ತನುವೆಲ್ಲ ಸ್ವಯಲಿಂಗ ,**
**ಮನವೆಲ್ಲ ಚರಲಿಂಗ , ಭಾವವೆಲ್ಲ ಮಹಾಘನದ ಬೆಳಗು .**
**ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣ ಸಮ್ಯಜ್ಞಾನಿ**
**ಚನ್ನಬಸವಣ್ಣನ ಶ್ರೀಪಾದಕ್ಕೆ ಶರಣೆಂದು ಎನ್ನ ಭವಂ ನಾಸ್ತಿಯಾಯಿತ್ತಯ್ಯ ಪ್ರಭುವೆ .**

**ತಾತ್ಪರ್ಯ :** ಮರ್ತ್ಯಲೋಕದ ಭಕ್ತರ ಮನವ ಬೆಳಗಲೆಂದು ಇಳಿತಂದನಯ್ಯಾ ಶಿವನು .ಇದು ಶಿವನ ಬೆಳಗು, ಕರುಣಾಮೃತದ ಕರುಣೆಯು, ಕರುಣಾಜಲ ಜ್ಞಾನಗಂಗಾ ನೋಡಿರೆ, ಭಕ್ತರಿಗೊಲಿದು ಇಳಿತಂದ ಘನವ ನೋಡಿರೆ ? ಇದು ಭಕ್ತರ ಪುಣ್ಯದ ಪುಣ್ಯನು, ಭಕ್ತರು ಬಹು ಜನ್ಮಂಗಳಲ್ಲಿ ಮಾಡಿದ ನಿಷ್ಕಾಮನಾರೂಪ ಪುಣ್ಯದ ಪೂರ್ಣನು, ತಾನಾಗಿಯೆ ಭಕ್ತರ ಮನವ ಬೆಳಗಲು ಬಂದ ಇಷ್ಟಾರ್ಥವು. ಇದನಾರಾಯ್ಯ ವರ್ಣಿಸುವವರು. ಅವರ್ಣೀಯವು ವರ್ಣನೆಗೆ ಸಾಧ್ಯವೆ! ಇದು ಬಸವ ಪ್ರಭುವಿನ ಲೀಲೆ. ಅಗಮ್ಯ ಗುಹೇಶ್ವರ ಲಿಂಗ ಘನ, ಇವರೀರ್ವರ ಕೂಟದ ಕೂಟ, ಇದು ಮರ್ತ್ಯಲೋಕದ ಭಕ್ತರ ಮನವ ಬೆಳಗಲು ಬಂದ ಬೆಳಗು ಮಹಾಬೆಳಗು, ಅಖಂಡ ಬೆಳಗು, ಶಿವನು ಇಳಿತಂದ ಬೆಳಗು, ಆದುದರಿಂದ ಕತ್ತಲೆಯ ಪಾಳೆಯವ ರವಿ ಹೊಕ್ಕಂತಾಯಿತ್ತಯ್ಯ. ರಾತ್ರಿಯಲ್ಲಿ ಅಮವಾಸೆ ಕತ್ತಲೆ, ಘನ ಕತ್ತಲೆ, ರವಿಹೊಕ್ಕ ಮೇಲೆ ಕತ್ತಲೆ ಪಾಳೆಯಿದ್ದರೂ ಅದು ವ್ಯರ್ಥವು ಹೇಗೋ ಹಾಗೆ; ಮರ್ತ್ಯಲೋಕದ ಮನವೇನು ಅಮವಾಸೆಯ ಕಗ್ಗತ್ತಲೆ. ಅಲ್ಲಿ ಅವಿದ್ಯೆ ಅಸ್ಮಿತೆ ರಾಗ

ದ್ವೇಷ, ಅಭಿನವೇಶವೆಂಬ ಪಂಚಕ್ಲೇಶರೂಪೀ ವಾಸನೆಯೆ ತಾಂಡವಾಡುವದರಿಂದ ಪಿಂಡಾಂಡ ಬ್ರಹ್ಮಾಂಡಗಳ ಸತ್ಯತ್ವಬುದ್ಧಿ, ಅಂಗ ಲಿಂಗಗಳ ಭೇದಜ್ಞಾನ ದೇಹಬುದ್ಧಿ , ಇಂದ್ರಿಯಂಗಳ ಉಪಟಳ, ವಿಷಮ ನೋಟ, ವಿಷಯಜ್ಞಾನ, ವಿಷಯಾಕಾರ, ವಿಷಯಂಗಳಾಸಕ್ತರಾಗಿ ಇಂದ್ರಿಯರಾಮರಾಗಿ ವಿಷಯಭೋಗದಲ್ಲಿ ಪ್ರವೃತ್ತರಾಗಿರುವದು ಮರ್ತ್ಯಲೋಕದ ಮನಸ್ಸಿನ ಸಹಜ ಪ್ರವೃತ್ತಿಯಾದುದರಿಂದ ಕರುಣಾನಿಧಿಯಾದ ಕೈವಲ್ಯನಾಥನು ತನ್ನ ಕರುಣಾಜಲಮಾದ ಬೆಳಗನ್ನು ಮರ್ತ್ಯಲೋಕದ ಭಕ್ತರ ಮನವ ಬೆಳಗಲು ಇಳಿತಂದನಯ್ಯಾ . ಇದು ಶಿವನ ಕರುಣಾ ಬೆಳಗು.

ಈ ಕರುಣಾ ಬೆಳಗು ಭಕ್ತರ ಮನವ ಹೊಕ್ಕ ಮೇಲೆ ಅಲ್ಲಿ ಚಿಂತಿಯ ಪ್ರವೃತ್ತಿಗಿಂಬಿಲ್ಲ . ವಿಷಯ ವ್ಯಾಮೋಹಕ್ಕಿಂಬಿಲ್ಲ, ವಿಷಯಾಕಾರವದೇತರದು? ಏಕೆಂದರೆ ಅಲ್ಲಿ ಭವದ ಪ್ರವೃತ್ತಿಕೆಗಿಂಬಿಲ್ಲ ಅದು ಸತ್ಯವಾದುದಲ್ಲವೆಂಬುದನ್ನು ಸಿದ್ಧಮಾಡಿ ಮುಕ್ತಿಪಥ ತೋರಿದಿನಲ್ಲ ಅಸಂಖ್ಯಾತ ಗಣಂಗಳಿಗೆ; ಇದೆಂಥ ಘನಕ್ಕೆ ಘನ! ಅಸಂಖ್ಯಾತ ಗಣಂಗಳಿಗೆ ಮುಕ್ತಿಪಥ ತೋರಿದುದು ಸಾಮಾನ್ಯವೆ! ಶಿವನ ಬೆಳಗಿಗೆ ಘನವಾದುದೆ, ಕತ್ತಲೆ ಕೆಡಿಸಲು ರವಿಗೆ ಘನವಾದುದೆ ?

ಭಕ್ತರ ಮನದಲ್ಲಿರುವ ಪ್ರವೃತ್ತವುಳ್ಳ ವಿಕಲ್ಪರೂಪಿ ಕತ್ತಲೆಯ ಕೆಡಿಸಿ ನಿವೃತ್ತಿ ರೂಪಮಾದ ಪರಮಾರ್ಥದ ಪ್ರಕಾಶದ ಘನವ ಬೆಳಗಲು ಘನವಾದುದೇನು ? ಇದುವೆ ಬೆಳಗಿನ ಬೆಳಗು ,ಶಿವನ ಬೆಳಗು, ಅಲುಪ್ತ ಬೆಳಗು, ಈ ಬೆಳಗಿನ ಘನವನೇನೆಂಬೆ ? ಇದು ಆದಿ ಅಂತ್ಯವಿಲ್ಲದ ಬೆಳಗು ಸಕಲ ಬೆಳಗಿನ ಬೆಳಗು ಮಹಾಬೆಳಗು. ಇದು ಅಖಂಡವು, ಚಿದಾಕಾಶವು ಇಲ್ಲಿ ಬಂಧವೆಂದು ಆವುದಕ್ಕನ್ನಬೇಕು? ಮೋಕ್ಷವೆಂದು ಆವುದಕ್ಕನ್ನಬೇಕು ? ಚಿನ್ಮಯವು ತಾನೆ ತಾನಾದುದು. ಇದುವೆ ಭಕ್ತನ ಮನವ ಬೆಳಗಲೆಂದು ಇಳಿತಂದನಯ್ಯ ಶಿವನು. ಈ ಮಹಾಬೆಳಗು, ಭಕ್ತರ ಮನವ ಹೊಕ್ಕ ಮೇಲೆ ಸಕಲವು ತಾನೆ, ನಿಷ್ಕಳವು ತಾನೆ, ಪರಿಪೂರ್ಣದೋಳ್ ಭಾವಭಾವವಾವುದು ? ದ್ವೈತಾದ್ವೈತವಾವುದು ? ಪರಿಪೂರ್ಣವೆಂಬುದು ಸಕಲ ಕಲ್ಪನೆಯಿಂದ ಅತೀತವು .

ಸ್ವಮಹಿಮವು ತಾನೆ ತಾನಾದುದು ಅಸಂಖ್ಯಾತ ಗಣಂಗಳಿಗೆ ತೋರಿದನಲ್ಲ. ಆಗ ಚಿದಾಕಾಶ ಲಿಂಗವು ಎಲ್ಲಡೆಯಲ್ಲಿಯೂ ಪ್ರಕಾಶಿಸುವದರಿಂದ ತನುವೆಂಬುದು ಸ್ವಯಲಿಂಗ ಮನವೆಂಬುದು ಚರಲಿಂಗ ಭಾವವೆಂಬುದು ಮಹಾಘನದ ಬೆಳಗ ಮಾಡಿ ಪರಿಣಮಿಸಿದನು ನೋಡಾ.

ಇದು ಕಾರಣ ಭಾವನೆ ಗಿಂಬಿಲ್ಲದ ಘನವು ಸಾಕ್ಷಾತ್ಕಾರವಾಗುವುಡೆ ಆಗ ಭಾವವು ಮಹಾ ಘನದ ಬೆಳಗು. ಅಲ್ಲಿ ವಿಷಮ ಭಾವಕ್ಕಿಂಬಿಲ್ಲವಾದುದರಿಂದ ಭಾವಾತೀತನು ಮಹಾಘನವೆ ಅಖಂಡವಾಗಿ ಪ್ರಕಾಶಿಸುವದರಿಂದ ಅಲ್ಲಿ ವಿರೋಧಕ್ಕಿಂಬಿಲ್ಲ , ಪ್ರಿಯವಾದುದಿಲ್ಲ ಅಪ್ರಿಯವಾದುದಿಲ್ಲ, ನಿಜವು ಅದುವೆ, ಚೆನ್ನಮಲ್ಲಿಕಾರ್ಜುನಯ್ಯ ಬೆಳಗು ಅದುವೆ , ನಿಮ್ಮ ಶರಣ ಸಮ್ಯಜ್ಞಾನ ರೂಪಿ ಚನ್ನಬಸವಣ್ಣ ಅದುವೆ. ಈ ಬೆಳಗಿನ ಮಹಾಬೆಳಗುಳ್ಳ ಘನಪಾದ ಶ್ರೀಪಾದಕ್ಕೆ ಶರಣೆಂದು ಎನ್ನ ಭವಂ ನಾಸ್ತಿಯಾಯಿತ್ತಯ್ಯ ಪ್ರಭುವೆ.

57

**ತನುಗುಣ ನಾಸ್ತಿಯಾಗಿ ಲಿಂಗಸಂಗಿಯಾದಳು, ಮನಗುಣ ನಾಸ್ತಿಯಾಗಿ**
**ಅರುವು ಸಂಗಿಯಾದಳು, ಭಾವಗುಣನಾಸ್ತಿಯಾಗಿ ಮಹಾ ಪ್ರಭೆ ತಾನಾದಳು.**
**ತಾನಿದಿರೆಂಬೆರಡಳಿದು ನಮ್ಮ ಗುಹೇಶ್ವರ ಲಿಂಗದಲ್ಲಿ ಸ್ವಯಲಿಂಗವಾದ**

**ಮಹಾದೇವಿಯಕ್ಕಗಳ ನಿಲುವಿಂಗೆ ಶರಣೆಂದು ಬದುಕಿದೆನು.**

**ತಾತ್ಪರ್ಯ :** ಮರ್ತ್ಯಲೋಕದ ಭಕ್ತರ ಮನವ ಬೆಳಗಲು ಚಿತ್ಪ್ರಕಾಶವೇ ಭಕ್ತರ ಮನವ ಪ್ರವೇಶಿಸಲು ತನು ಗುಣವೆಂಬ ಭೂತವಿರದು, ಮನಗುಣವೆಂಬ ವಿಕಲ್ಪರೂಪಿ ಕಲ್ಪನೆ ಇರದು. ಭ್ರಮರೂಪಿ ಪಿಶಾಚಿ ಭಾವ ಇರದು. ಏಕೆಂದರೆ ನಿರಂತರ ನಿರಾತಂಕವಿಲ್ಲದೆ ಬೆಳಗುವ ಸಚ್ಚಿದ್ಘನಮಾದ ಸುಜ್ಞಾನರೂಪಿ ಲಿಂಗೋದ್ಭವವು ಪ್ರಜ್ವಲಿಸುವುಡೆ ಅಲ್ಲಿ ತನುಗುಣವಿರಲಿಂಬುಂಟೆ? ಬೆಳಕು ಹೊಕ್ಕ ಮನೆಯಲ್ಲಿ ಕತ್ತಲೆ ಇರಲುಂಟೆ? ಸುಬೋಧ ರೂಪಿ ಸಮ್ಯಜ್ಞಾನ ಭಕ್ತರ ಹೃದಯ ಪ್ರವೇಶಿಸಲು ತನುಗುಣ ನಾಸ್ತಿಯಾಗಿ ಲಿಂಗ ಸಂಗಿಯಾದಳು. ಅಕ್ಕನು ತನುಗುಣವಿಲ್ಲದವಳಾದುದರಿಂದ ಲಿಂಗ ಸಂಗವೆ ಸಂಗ, ಲಿಂಗಸಂಗವೆಂಬುದು ನಿಸ್ಸಂಗದ ಸಂಗ, ನಿರವಯದ ಸಂಗ, ಇದು ಚಿನ್ಮಯ ಚಿದ್ಘನದ ಸಂಗ.ಇದು ಗುರುಕರುಣೆಯ ಸಂಬಂಧವಾದುದರಿಂದ ಗುರುಲಿಂಗ; ಇದುವೆ ಭಕ್ತರ ಹೃದಯವು.

ಭಕ್ತರ ಹೃದಯವು ಗುರುಲಿಂಗದ ನಿವಾಸದಲ್ಲಿ ಅಲ್ಲಿ ಮನಗುಣವಿರಲುಂಟೆ? ಮನವೆಂಬುವುದು ಅಶುದ್ಧ ಸಂಕಲ್ಪ ವಿಕಲ್ಪದಿಂದುಕ್ತವು. ಇದು ಸದಾ ಅವಿಚಾರವನ್ನೆ ಮಂಡಿಸುವಂಥಾದ್ದು. ವಿಷಯಾಕಾರವುಳ್ಳದ್ದು. ಚಂಚಲ ಸ್ವಭಾವವು. ವಿಷಯಾದಿಗಳ ಸಂಗ್ರಹದ ನೆನಹಿನಿಂದುಕ್ತವು. ಇಂದ್ರಿಯ ಪ್ರೇಮವು ವಿಷಯ ಭೋಗಕ್ಕೆ ಅತಿ ಮಹತ್ವಕೊಟ್ಟು ವಾಸನಾಮಯಿ ಆಗಿರುವದು. ಇದು ನಶಿಸದ ಹೊರ್ತು ಅರುವಿನ ಸಂಗವಾಗದು. ಅಕ್ಕ, ಅರುವಿನ ಸಂಗಿಯಾದುದರಿಂದ ಮನದ ಅಶುದ್ಧಸಂಕಲ್ಪ ವಿಕಲ್ಪಕ್ಕಿಂಬಿಲ್ಲ ; ರಾಗವಿಲ್ಲ, ದ್ವೇಷವಿಲ್ಲ, ಶೋಕವಿಲ್ಲ, ಮೋಹವಿಲ್ಲ, ಕಾಮಾದಿಗಳಿಲ್ಲ, ವಾಸನೆ ತ್ರಯಗಳಿಗವಕಾಶ ಅದೇತರದು? ಕೇವಲ ಅರುವೆಂಬ ಶಿವತತ್ವವು ಹೃದಯದೊಳ್ ಪ್ರಕಾಶಿಸುವುಡೆ ಆಗ ಪರಿಪೂರ್ಣವಾದ ಭಾವಭರಿತವು. ಇದು ಒಳಹೊರಗೆನ್ನದೆ ಭರಿತವು. ಇದು ಮರವರುವಿಗೆ ಮೀರಿದ ಘನ. ಖಂಡಿತವಿಲ್ಲದ ಅಖಂಡ ಸರ್ವಾತ್ಮ ಸ್ವಯಂ ಪ್ರಕಾಶ. ಇದುವೆ ಅಕ್ಕನ ಹೃದಯವಾಗಿರುವಲ್ಲಿ ಅಕ್ಕನ ಮನವೆಂಬುದು ಶಿವಕಳೆ, ಪರಮ ಪ್ರಭೆ, ನಿರಂತರವಾಗಿರುವ ನಿರಾತಂಕ ಪ್ರಭೆ, ಜ್ಞಾನಪ್ರಭೆ, ಆದುದರಿಂದ ಅರುವಿನ ಸಂಗಿಯಾದಳು.

ಈ ಅರುವಿನ ಘನವ ಅದನೆಂತು ವರ್ಣಿಸುವದು. ಈ ಅರುವೆಂಬುದು ಇದ್ದಕ್ಕಿದ್ದಂತಿದ್ದ ಘನಾತ್ಮ, ಅಚಿಂತಾತ್ಮ, ಪ್ರಮಾದದಿಂದ ಬೇರಾಗಿ ತೋರಿದರೂ ಸಮ್ಯಜ್ಞಾನವು ಬೆಳಗುವಲ್ಲಿ ಅಲ್ಲಿ ಏನೊಂದಾದುದಿಲ್ಲ, ಹೋದುದಿಲ್ಲವೆಂಬುದು ದೃಢನಿಲಯವಾದುದರಿಂದ ಭಾವಾದಿಗಳಿಂದ ನಿರ್ಮುಕ್ತವಾದ ನಿಲಯ ; ಅಲ್ಲಿ ವ್ಯಾಪ್ತವಾವುದೋ? ವ್ಯಾಪಕವಾವುದೋ? ಅದ್ವಿತೀಯವಾದ ನಿಲಯ, ನೆಲೆಯಿಲ್ಲದ ನಿಲುವುಳ್ಳವಳಾಗಿರುವುದರಿಂದ ಇಹವಷ್ಟೆ ಪರವಷ್ಟೆ, ಅಳಿದುದಿಲ್ಲ ಉಳಿದುದಿಲ್ಲ, ಪ್ರಿಯವಾದುದಿಲ್ಲ ಅಪ್ರಿಯವಾದುದಿಲ್ಲ, ಭಾವಗುಣನಾಸ್ತಿಯಾಗಿ ಮಹಾಪ್ರಭೆ ತಾನಾದಳು. ಮಹಾಪ್ರಭೆಯೆಂಬುದು ತಾನೆ ತಾನಾದ ನಿಃಶಬ್ದ ಘನ ಏನೊಂದುಸರಲು ಎಡೆಗೊಡದ ಘನವೇ ತಾನಾದುದರಿಂದ ನಮ್ಮ ಗುಹೇಶ್ವರ ಲಿಂಗದಲ್ಲಿ ಸ್ವಯ ಲಿಂಗವಾದ ಮಹಾದೇವಿಯಕ್ಕಗಳ ನಿಲುವಿಗೆ ಶರಣೆನುತಿರ್ದೆನು. ಇದಕ್ಕೆ ಅಕ್ಕಗಳ ಭಿನ್ನಹ.

**58**

**ನೀರು ಕ್ಷೀರದಂತೆ ನೀನಿಪ್ಪೆಯಾಗಿ, ಆವುದು ಮುಂದು ಆವುದು**
**ಹಿಂದೆಂದರಿಯೆನು. ಆವುದು ಕರ್ತೃ,ಆವುದು ಭೃತ್ಯನೆಂದರಿಯೆನು,**

**ಆವುದು ಘನ, ಆವುದು ಕಿರಿದೆಂದರಿಯೆನು.ಚೆನ್ನಮಲ್ಲಿಕಾರ್ಜುನಯ್ಯ**
**ನೀನೊಲಿದು ಕೊಂಡಾಡಿದರೆ ಇರುಹೆ ರುದ್ರನಾಗದೆ ಹೇಳಯ್ಯಾ.**

**ತಾತ್ಪರ್ಯ :** ನೀರು ಕ್ಷೀರದ ಏಕತ್ವದಂತೆ ನೀ ಇರುವೆಯಾಗಿ ಇದರೋಳ್ ಆವುದು ಮುಂದು ಆವುದು ಹಿಂದೆನ್ನಬೇಕು,ನೀರು ಮುಂದೆನ್ನಬೇಕೋ? ಹಾಲು ಮುಂದೆನ್ನಬೇಕೋ? ಸಮರಸವಾದುದು. ಅಲ್ಲಿ ವಿಭಾಗ ಮಾಡಲು ಬರದು ಶರಣಸತಿ ಲಿಂಗಪತಿ ಎಂಬುದು ನೀರು ಕ್ಷೀರದ ಏಕತ್ವದಂತೆ ನೋಡಾ. ಸಮರತಿ ಸಮಕಲೆ ಮುಂದೆನ್ನಬೇಕೋ, ಸಮ್ಯಜ್ಞಾನ ಸವೆಯದ ಸುಖ ಹಿಂದೆನ್ನಬೇಕೋ ನಿಃಶಬ್ದಘನ ಮುಂದೆನ್ನಬೇಕೋ? ಶಬ್ದ ಘನ ಹಿಂದೆನ್ನಬೇಕೋ? ಅನಾಮಯವಾದ ನಿರ್ವಾಣ ಮುಂದೆನ್ನಬೇಕೋ? ನಿರ್ನಾಮವಾದ ಶಬ್ದ ಮುಗ್ಧ ಹಿಂದೆನ್ನಬೇಕೋ? ರೂಪ ಮುಂದೆನ್ನಬೇಕೋ? ಅರೂಪ ಹಿಂದೆನ್ನಬೇಕೋ? ಸಾವಯವ ಮುಂದೆನ್ನಬೇಕೋ ನಿರವಯ ಮುಂದೆನ್ನಬೇಕೋ? ಅಂಗ ಮುಂದೆನ್ನಬೇಕೋ ಲಿಂಗ ಮುಂದೆನ್ನಬೇಕೋ? ನಿಃಕಲ ಲಿಂಗ ಮುಂದೆನ್ನಬೇಕೋ ಸಕಲ ಲಿಂಗ ಮುಂದೆನ್ನಬೇಕೋ? ಇವೆಲ್ಲವೂ ನೀನಿಪ್ಪೆಯಾಗಿ ಆವುದು ಮುಂದು ಆವುದು ಹಿಂದಿನಿಂದಾಯಿತ್ತು ಎಂಬುದನ್ನು ನಾನು ತಿಳಿಯೆನು. ಆವುದು ಕರ್ತೃ ಆವುದು ಭೃತ್ಯ? ಆವುದು ಸೇವ್ಯ ಆವುದು ಸೇವಕ, ಆವುದು ಪೂಜ್ಯ ಆವುದು ಪೂಜಕ, ಆವುದು ಶ್ರೇಷ್ಠ ಆವುದು ಕೀಳೆಂಬುದು ತಿಳಿಯದು. ಏಕೆಂದರೆ ಸಮಸ್ವರೂಪವಾಗಿರುವ ಪರಮ ಸತ್ಯವು ನಿಸ್ಸೀಮವು ನಿರಾಲಂಬವು ಆಗಿದೆ.

ಅದಕ್ಕಾಗಿ ಅದು ಸಕಲವು ಅಹುದು ನಿಃಕಲವು ಅಹುದು, ಸಾವಯವ ಅಹುದು ನಿರವಯ ಅಹುದು. ಒಂದು ಅಹುದು, ಒಂದಾಗದೆ ಏನೊಂದಾಗದೆ ಇದ್ದುದು ಅಹುದು. ಸಮ್ಯಜ್ಞಾನ ತಾನೆ ಸವೆಯದ ಸುಖ ತಾನೆ, ಶಬ್ದ ಘನ ತಾನೆ, ನಿಃಶಬ್ದ ಘನ ತಾನೆ, ಸಕಲವು ತಾನೆ ತಾನಾದುದರಿಂದ ನೀರು ಕ್ಷೀರದಂತೆ ಏಕತ್ವನೀನೆ ನೋಡಾ. ಆವುದು ಮುಂದು ಆವುದು ಹಿಂದೆಂದರಿಯೆನು; ಏಕೆಂದರೆ ಎರಡಿದ್ದಲ್ಲಿ ಅರಿಯಬಹುದು, ಸ್ವಾಮಿ ಸೇವಕರಾಗಬಹುದು, ಪೂಜ್ಯ ಪೂಜಕರಾಗಬಹುದು ದ್ವೈತಕ್ಕಿಂಬಿಲ್ಲವಾದುದರಿಂದ ನುಡಿಗಿಂಬಿಲ್ಲ ನಡೆಗಿಂಬಿಲ್ಲ ಕಲ್ಪಿತನಿಗಿಂಬಿಲ್ಲ, ಕಲ್ಪನೆಯಿಲ್ಲ ಕುರುಹು ಇಲ್ಲ. ಕೂನವಿಲ್ಲ ಭಾವಕ್ಕಿಂಬಿಲ್ಲ ಆವಾವುದಕ್ಕೂ ಸಂದಿಲ್ಲದಿಪ್ಪ ನಿಮ್ಮ ಘನ ನೀನಿಪ್ಪೆಯಾಗಿ ಆವುದು ಘನವೆನ್ನಬೇಕು ; ಆವುದು ಕಿರಿದೆನ್ನಬೇಕು? ಚೆನ್ನಮಲ್ಲಿಕಾರ್ಜುನಯ್ಯಾ ನೀನಾಗಿ ಒಲಿದು ಕೊಂಡಾಡಿದಾಗ ಅದು ರುದ್ರಸ್ವರೂಪವು ನಿಶ್ಚಯವು.

**59**

**ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ.**
**ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ.**
**ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ.**
**ಅಜಗಣ್ಣನ ಐದು ವಚನಕ್ಕೆ ಕೂಡಲ ಸಂಗಯ್ಯನಲ್ಲಿ**
**ಮಹಾದೇವಿಯಕ್ಕಗಳ ಒಂದು ವಚನ ನಿರ್ವಚನ ಕಾಣಾ ಸಿದ್ಧರಾಮಯ್ಯ .**

**ತಾತ್ಪರ್ಯ :** ಆದ್ಯರೆಂದರೆ ಅರುವಿನ ಘನತ್ವವರಿತವರೆ ಆದ್ಯರು. ಅವರ ವಚನಗಳೆಂದರೆ

ಅರುವಿನ ಘನತ್ವ ಬೋಧಿಸುವ ವಚನ. ಲಿಂಗಾಂಗ ಸಾಮರಸ್ಯದ ವಚನ. ತಾನಾರೆಂಬ ಸ್ವರೂಪದ ಘನತ್ವಬೋಧಿಸುವ ಬೋಧೆ. ಬ್ರಹ್ಮಜ್ಞಾನ ಪರಮಾರ್ಥದ ಪರವಾಣಿ, ಲಿಂಗಾನುಭವಿಗಳೆ ಆದ್ಯರು. ಲಿಂಗಾನಂದರೆಂದರೆ ಆದ್ಯರು, ತಾನಾರೆಂಬ ಸಮ್ಯಜ್ಞಾನಿಗಳೇ ಆದ್ಯರು, ಸವೆಯದ ಸುಖಿಗಳೇ ಆದ್ಯರು, ಅವರ ಮಾತೆಂಬುದು ಮಹಾಕಾವ್ಯ, ಅವರ ವಚನವೆಂದರೆ ಜ್ಞಾನಾಮೃತ ; ಕೇವಲ ಜ್ಞಾನಘನ ಜ್ಞನಗಂಗಾ. ಸಕಲ ವೇದಂಗಳ ತಿರಳು, ಸ್ವಾನುಭವ ಸುಧೆ, ಮತ್ತು ಅಖಂಡಾನಂದ ರೂಪಿ ವಚನ ಪ್ರಭೆ. ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ ಸಮ. ಅಂದರೆ ಪೂರ್ವಿಕರ ಅರವತ್ತು ವಚನದ ತಾತ್ಪರ್ಯವು ಬಸವರಾಜ ದೇವರ ಇಪ್ಪತ್ತು ವಚನಗಳಲ್ಲಿಯೆ ಅವುಗಳ ಸಾರಭೂತವನ್ನು ಬೋಧಿಸುವವು. ಬಸವರಾಜನೆಂದರೆ ದಂಡನಾಯಕ ಅಹುದು, ಮುಖ್ಯಮಂತ್ರಿಯು ಹೌದು, ಅಲೌಕಿಕ ದೃಷ್ಟಿಗೆ ಶರಣರ ಸೇನಾಧಿಪತಿ ಶರಣ ತತ್ವದ ದಂಡನಾಯಕ.

ಶರಣ ತತ್ವವೆಂಬುದು ನಿರಂತರ ನಿರಾತಂಕವಿಲ್ಲದೆ ಬೆಳಗುವ ತತ್ವ; ಶಿವ ತತ್ವ, ಕೈವಲ್ಯ ತತ್ವ ಕಲ್ಯಾಣ ತತ್ವ , ಸುಖಮಯ ತತ್ವ. ಈ ಸುಖಮಯ ತತ್ವದ ದಂಡನಾಯಕರಾಗಿದ್ದರು; ಈ ದಂಡಾಧೀಶರು. ಸುಖಮಯ ತತ್ವದ ಸೇನಾಧಿಪತಿ ಆದುದರಿಂದ ಶಿವಸೈನ್ಯವನ್ನು ತಯಾರಿಸಿದರು. ಈ ಶಿವಸೈನ್ಯ ಯಾವುದು ಗೊತ್ತೆ? ಲಿಂಗಾಂಗ ಸಮರಸ ಜ್ಞಾನದ ಸೈನ್ಯ , ಶಿವಭಾವ ಸೈನ್ಯ , ಶಿವಜ್ಞಾನದ ಸೈನ್ಯ , ಶಿವಸುಖದ ಸೈನ್ಯ, ಈ ಸೈನ್ಯದಲ್ಲಿ ಸೇರಬೇಕಾದರೆ ಲಿಂಗಾಂಗ ಸಮರಸ ತತ್ವವನ್ನು ಚೆನ್ನಾಗಿ ಅಳವಡಿಸಿಕೊಂಡಿರಬೇಕು. ಲಿಂಗಾನುಭವಿಗಳಾಗಿ, ಲಿಂಗಜ್ಞಾನಿಗಳಾಗಿ, ನಿತ್ಯ ಲಿಂಗಾರ್ಚನೆಯಲ್ಲಿಲಿಂಗ ಘನ ಸುಖದೊಳ್ ಬೆರೆತು ನಿಬ್ಬೆರಗಿನ ಘನತ್ವ ಅಳವಡುತ್ತಿರಬೇಕು ಅಂದಾಗ ಇವರು ಕಾಲನ ಭಯವಿಲ್ಲದವರು ಮೃತ್ಯುಂಜಯರು ಮರುಜವಣಿಗಳು ಆಗುವಲ್ಲಿ ನಿಸ್ಸಂದೇಹ ನಿಸಂದೇಹ ನಿಸ್ಸಂದೇಹ ಎಂಬುದು ದಂಡಾಧೀಶ ಚೆನ್ನಾಗಿ ಬಲ್ಲವರಾದುದರಿಂದ ಅವರ ಯೋಗ್ಯತೆ ನೋಡಿ ತಮ್ಮ ಲಿಂಗಾಂಗ ಸಮರಸ ತತ್ವದಲ್ಲಿ ಸೇರಿಸಿಕೊಳ್ಳುತ್ತಿದ್ದರು.ಶರಣ ಸೇನೆಯಲ್ಲಿ ಸೇರಿಸಿಕೊಂಡ ಚಿನ್ಹವೆಂದರೆ ಇಷ್ಟಲಿಂಗ ಧರಿಸಿದ ಚಿನ್ಹ. ಲಿಂಗಾಂಗ ಸಮರಸ ತತ್ವ ಒಪ್ಪಿದ ಚಿನ್ಹವಾದುದರಿಂದ ಲಿಂಗ ಭಾವಿಗಳು ಲಿಂಗಜ್ಞಾನಿಗಳು ಲಿಂಗಾನಂದರು ಆದುದರಿಂದ ಇದು ಅಮರ ಸೈನ್ಯ ಈ ಸೈನ್ಯ ಯುದ್ಧ ಮಾಡಿದುದು ಏತಕ್ಕಾಗಿ ಗೊತ್ತೆ ? ಅತ್ಯಂತ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತರೂಪ ಪ್ರಾಪ್ತಿಯ ಸುಖಕ್ಕಾಗಿ.ಇದರಿಂದ ಅಮರಧ್ವಜವನ್ನೇರಿಸಿದರು.

ಕೈವಲ್ಯ ಧಾಮ ಸ್ಥಾಪಿತವಾಗಿ ಬಸವಕಲ್ಯಾಣವು ಎಂದು ಪ್ರಸಿದ್ಧ ಹೆಸರಾಯಿತು. ಮಾನವ ಜನ್ಮವೆಂಬುದು ಪುರುಷಾರ್ಥ ಜನ್ಮ, ಸುಖಮಯ ಜನ್ಮ , ಅದಕ್ಕಾಗಿ ಇದು ಕೈವಲ್ಯ ಧಾಮವು.ಆದುದರಿಂದ ಕೂಡಲ ಚೆನ್ನಸಂಗಯ್ಯನಲ್ಲಿ ಬೆರೆತು ಬೇರಿಲ್ಲದಿಪ್ಪ ಘನವು ಸಿದ್ಧಮಾಡುವುದಕ್ಕೆ ಆದ್ಯರಿಗೆ ಅರವತ್ತು ವಚನ ಬೇಕಾದರೆ ಬಸವಣ್ಣನವರು ಇಪ್ಪತ್ತು ವಚನಗಳನ್ನು ಹೇಳುವುದರಲ್ಲಿಯೆ ನಿಃಶಬ್ದ ಘನದ ಘನತ್ವವನ್ನು ಶಿವಸೈನ್ಯಕ್ಕೆ ಅಳವಡಿಸುತ್ತಿದ್ದರು.

ದಣ್ಣಾಯಕರು ಇಪ್ಪತ್ತು ವಚನಗಳ ತಾತ್ಪರ್ಯ ಘನತ್ವವನ್ನು ಪ್ರಭುವು ಹತ್ತು ವಚನಗಳಲ್ಲಿಯೆ ತಿಳಿಯ ಪಡಿಸುತ್ತಿದ್ದರು. ಪ್ರಭು ಎಂದರೆ ಸಾಮಾನ್ಯನೆ ಹೇಳಿ ಕೇಳಿ ಮಾಯಾ ಕೋಲಾಹಲ ಮಾಡಿದ ಪ್ರಭು, ದೇವ ದೇವ ತಾನಾದ ಪ್ರಭು, ಶುದ್ಧ ಪ್ರಸಾದ ಸಿದ್ಧ ಪ್ರಸಾದ ಪ್ರಸಿದ್ಧ ಪ್ರಸಾದದ ಘನವ ಶರಣರಿಗೆಲ್ಲಉಣಬಡಿಸಲು ಬಂದ ಪ್ರಭು, ಈ ಮಹಾಪ್ರಭು ಕಂಗಳಲ್ಲಿ ಕರುಳಿಲ್ಲದ ಪ್ರಭು, ನುಡಿದು ನಿಃಶಬ್ದನಾಗಿರುವ ಮಹಾಘನ. ಸಂಜ್ಞೆ ಸಂಕೇತಕ್ಕೆ ನಿಲುಕದ ಪ್ರಭು. ನೆಲೆಯಿಲ್ಲದ ನಿಲುವಿನ ಪ್ರಭು ಜ್ಞಾನಾತೀತ ಪ್ರಭು, ನಿರಾಲಂಬ ಪ್ರಭು ಆದುದರಿಂದ ನಿರ್ಣಯಕ್ಕೆ ಮೀರಿದ ನಿಜಪದವ ತಿಳಿಸಲು

ಇವರ ಹತ್ತು ವಚನಂಗಳೇ ಸಾಕು.

ಹತ್ತು ವಚನಗಳಲ್ಲಿಯೆ ದಣ್ಣಾಯಕರ ಇಪ್ಪತ್ತು ವಚನದ ತಾತ್ಪರ್ಯ ಬಂದಿರಬೇಕು. ಇದಲ್ಲದೆ ಆದ್ಯರ ಅರವತ್ತು ವಚನಂಗಳ ಸಾರವು ಬಂದಿರುವುದಲ್ಲದೆ ನಿರಂತರವಾದ ಸರ್ವಮಂಗಳಮಯವಾದ ಘನದ ಅನುವ ಹತ್ತು ವಚನದಲ್ಲಿ ಸಿದ್ಧಮಾಡುವ ಸಮರ್ಥ ಪ್ರಭು.

ಈ ಸ್ವಪ್ರಭುವಿನ ಹತ್ತು ವಚನಗಳ ತಾತ್ಪರ್ಯ ಅಜಗಣ್ಣನ ಐದು ವಚನಗಳೆ ಸಮವಾಗಿವೆ. ಅಜಗಣ್ಣ ಅಂದರೆ ಬ್ರಹ್ಮನ ಅಣ್ಣ,ಬ್ರಹ್ಮನೆಂದರೆ ಶಬ್ದ ಬ್ರಹ್ಮ, ಈ ಶಬ್ದ ಬ್ರಹ್ಮಕ್ಕಿಂತ ಪೂರ್ವದಲ್ಲಿದ್ದುದು ಆವುದೋ ಅದುವೆ ಅಜಗಣ್ಣ. ಅಜಗಣ್ಣನೆಂದರೆ ನಿಃಶಬ್ದ ಘನವೆ ತಾನಾದ ಜ್ಯೋತಿ. ತಾನೆ ತಾನಾದ ಜ್ಯೋತಿ ಕೇವಲ ಜ್ಞಾನ ಘನ.

ಆತ ಸ್ವಯಂಭು ಅಕಥನೀಯ. ಈತನು ಗುಪ್ತ ನಿಧಿಯಾದುದರಿಂದ ಈತನ ವಚನಗಳು ಉಪಲಬ್ಧವಿಲ್ಲ. ಇದು ನಮ್ಮಗಳ ದುರ್ಭಾಗ್ಯವೇ ಸರಿ. ಪ್ರಭುದೇವರ ಹತ್ತು ವಚನಗಳ ತಾತ್ಪರ್ಯ ನಿಃಶಬ್ದ ಘನ ನಿಲುವಿನ ನಿಲುವುಳ್ಳ ಅಜಗಣ್ಣನ ಐದು ವಚನಗಳಿಗೆ ಸಮವಾಗಿರುವವು. ಇಂಥ ಅಜಗಣ್ಣನ ಐದು ವಚನಕ್ಕೆ ಕೂಡಲ ಚೆನ್ನಸಂಗಯ್ಯನಲ್ಲಿ ಮಹಾದೇವಿಯಕ್ಕಂಗಳ ಒಂದು ವಚನ ನಿರ್ವಚನವೆಂದು ಚೆನ್ನಬಸವಣ್ಣನವರು ಸ್ತುತಿಸಿದ್ದಾರೆ.

**60**

**ಎನ್ನ ಭಕ್ತಿ ಶಕ್ತಿಯು ನೀನೆ, ಎನ್ನ ಮುಕ್ತಿಯು ಶಕ್ತಿಯು ನೀನೆ.**
**ಎನ್ನ ಯುಕ್ತಿ ಶಕ್ತಿಯು ನೀನೆ. ಎನ್ನ ಮಹಾಘನದ ನಿಲುವಿನ ಪ್ರಭೆಯನ್ನುಟ್ಟು**
**ತಳುವೆಳಗಾಗಿ ಸ್ವಯ ಜ್ಞಾನಿ ಕೂಡಲ ಸಂಗಯ್ಯನಲ್ಲಿ ಮಹಾದೇವಿಯಕ್ಕಗಳ**
**ನಿಲುವ ಮಡಿವಾಳನಿಂದರಿದು ಬದುಕಿದೆನಯ್ಯಾ ಪ್ರಭುವೆ.**

**ತಾತ್ಪರ್ಯ :** ಪಂಚಾಚಾರ ಪ್ರತಿಷ್ಠೆಯ ಪರಮ ಪೂಜ್ಯನೆ, ಷಟ್‌ಸ್ಥಲದ ಸ್ವಾನುಭವಿಗಳ ಸ್ವಾತ್ಮಾನಂದದ ಸಾಮ್ರಾಟರ ಸಾಮ್ರಾಟನೆ, ಕೃತಯುಗ, ತ್ರೇತಾಯುಗ, ದ್ವಾಪರ ಕಲಿಯುಗದ ಯುಗಂಗಳೆಂಬವುಗಳು ಭವರಾಟಾಳದಲ್ಲಿ ತಿರುಗುತ್ತಲಿರ್ಪಲ್ಲಿ ಅನಂತಕೋಟ್ಯಾನುಕೋಟಿ ಯುಗಂಗಳು ಮಡಿದು ಹೋದವು. ಅನಂತ ಕೋಟಿ ಬ್ರಹ್ಮಾಂಡಗಳು ಲಯವಾಗಿ ಹೋದವು.ಇದರೊಳ್ ಆವ ಲೋಕದಲ್ಲಿ ಆವ ಯುಗಂಗಳಲ್ಲಿ ಅಂಗವೆ ಲಿಂಗವೆಂದರಿತ ಮಹಾಲಿಂಗದ ಘನವ ನರುಹಿದವರಾರು ಹೇಳಾ, ಗಂಗೆ ಗೌರೀವಲ್ಲಭರು ಮೊದಲಾದ ಅನಂತ ಕೋಟಿ ರುದ್ರಾದಿಗಳೆಲ್ಲರು, ಮಹಾಲಿಂಗದ ಘನವ ನರಿಯದೆ, ಅಣಿಮಾದಿ ಫಲ ಪ್ರಾಪ್ತಕ್ಕೆ ಒಳಗಾದರು.

ಪಂಚಾಚಾರ ಪ್ರತಿಷ್ಠೆಯುಳ್ಳ ಸದಾಚಾರದ ಘನವರಿಯದೆ ಜಗವು ಕೆಟ್ಟಿಹುದೆಂದು ಭರಿತ ಭಾವವುಳ್ಳ ಭಾವಲಿಂಗವ ಕರುಣಿಸಲು ಮರ್ತ್ಯದಲ್ಲಿ ಅವತರಿಸಿದ ಅರುವು ನಾಸ್ತಿಯಾದುದೇ ಗುರು, ಕುರುಹು ನಾಸ್ತಿಯಾದುದೆ ಲಿಂಗ, ಕಾಯಗುಣ ನಾಸ್ತಿಯಾದುದೆ ವಿಭೂತಿ, ಕರಣ ಗುಣ ನಾಸ್ತಿಯಾದುದು ರುದ್ರಾಕ್ಷಿ, ಮರಹು ನಾಸ್ತಿಯಾದುದೆ ಮಂತ್ರ.ಇಂತೀ ಪಂಚಾಚಾರ ಪ್ರತಿಷ್ಠೆಯುಳ್ಳ ಸದಾಚಾರದ ಘನವ ಬೆಳಗಲು ಬಂದ ಬೆಳಗೆ ಷಟ್‌ಸ್ಥಲದಲ್ಲಿ ನಿಂದ ನಿಲುವಿನ ಪರಿಭಾವ ಪದವ ಪ್ರಕಾಶಿಸಿ, ಎನ್ನಭ್ರಾಂತಿ ಸೂತಕವ ಬಿಡಿಸಿ, ನುಡಿಗೆಡೆಗೊಡದ ಘನವ ನೆನಗೆ ತೋರಿದೆಯಾಗಿ ನಿನ್ನ

ಕರುಣೆಯಿಂದ ನಾನು ಸಂಗನ ಬಸವಣ್ಣನೆಂಬ ಹೆಸರು ಪಡೆದೆನು ಕೂಡಲ ಸಂಗಮದೇವರ ಸಾಕ್ಷಿಯಾಗಿ ಎನಗೆ ನೀನು ಪರಮಾರಾಧ್ಯ ಕಾಣಾ ಚೆನ್ನಬಸವಣ್ಣ. ಪರಮದೇವ ನೀನಾದುದರಿಂದ ಎನ್ನ ಭಕ್ತಿ ಶಕ್ತಿಯು ನೀನೆ, ಎನ್ನ ಮುಕ್ತಿ ಶಕ್ತಿಯು ನೀನೆ, ಎನ್ನ ಯುಕ್ತಿ ಶಕ್ತಿಯು ನೀನೆ, ಗುರು ಲಿಂಗ ಜಂಗಮ ಒಂದೆಂಬ ಖಂಡಿತವಿಲ್ಲದ ಅಖಂಡ ಭಕ್ತಿಯ ಶಕ್ತಿ ನಿನ್ನದು. ಅಂಗವೆ ಲಿಂಗ ಲಿಂಗವೆ ಅಂಗವೆಂದರಿತ ಮಹಾಲಿಂಗ, ಮಹಾಲಿಂಗದ ಭಾವ ರೂಪಿ ಎನ್ನ ಯುಕ್ತಿ ಶಕ್ತಿಯು ನೀನೆ, ಸಮರತಿ ಸಮ್ಯಜ್ಞಾನ ಸ್ವಾನುಭವ, ಸವೆಯದ ಸುಖರೂಪಿ ಮುಕ್ತಿ ಶಕ್ತಿಯು ನೀನೆ.ಈ ಸುಖರೂಪಿ ಸವೆಯದ ಸುಖದ ಘನವನೇನೆಂಬೆ? ನಾಮ ನಿರ್ನಾಮನಾಯಿತ್ತು , ರೂಪು ನಿರೂಪವಾಗಿ ಗಮ್ಯವು ಅಗಮ್ಯವಾಗಿ ಅಗಮ್ಯದಲ್ಲಿ ನಿಂದು ನಿರಾಳವಾಗಿ ಶಬ್ದ ಮುಗ್ಧನ ಮಾಡಿದ ನಿನ್ನ ಯುಕ್ತಿಯ ಘನವ ಅದನಾರಯ್ಯ ವರ್ಣಿಸುವರು?

ಇಂಥ ಅವರ್ಣೀಯ ಘನವೆ ಎನ್ನ ಮಹಾಘನದ ನಿಲುವಿನ ಪ್ರಭೆಯಾದುದರಿಂದ ಆ ಪ್ರಭೆಯ ತಾನುಟ್ಟು ತಾನೆ ತಾನಾಗಿ ಸ್ವಯ ಜ್ಞಾನಿಯಾಗಿಹಳು ನೋಡಾ. ಈ ಸ್ವಯಜ್ಞಾನಿಗೆ ಒಂದೆಂಬುದಿಲ್ಲ ಎರಡೆಂಬುದಿಲ್ಲ , ಒಂದೆಂಬುದು ತಾನೆ ಎರಡೆಂಬುದು ತಾನೆ, ಸಕಲವು ತಾನೆ ನಿಃಕಲವು ತಾನೆ. ತಾನೆ ತಾನಾದುದರಿಂದ ನಿಸ್ಸೀಮ ನಿಲವು ನಿರಾತಂಕ ನಿಲವು ನೆಲೆಯಿಲ್ಲದ ನಿಲವು. ಅಹುದೆನ್ನಲು ಇಂಬಿಲ್ಲದ ನಿಲವು, ಅಲ್ಲೆನ್ನಲು ಇಂಬಿಲ್ಲದ ನಿಲವು, ನಡೆಗಿಂಬಿಲ್ಲದ ನಿಲವು. ಅಲ್ಲಿ ಆವಾವ ಭಾವವಿಲ್ಲ ಅಭಾವವಿಲ್ಲ, ಅರಿತುದಿಲ್ಲ ಮರೆತುದಿಲ್ಲ ಇದು ತೆರಹಿಲ್ಲದ ಘನ, ತಾನೆ ತಾನಾದ ಘನವೆಂಬ ಪ್ರಭೆಯ ನುಟ್ಟುದರಿಂದ ಪರಮ ಜ್ಞಾನಿ ಪರಾತ್ಪರ ಜ್ಞಾನಿ ಸ್ವಯ ಜ್ಞಾನಿ ಕೂಡಲ ಸಂಗಮದೇವರಲ್ಲಿ ಮಹಾದೇವಿಯಕ್ಕಗಳ ನಿಲವು ಮಡಿವಾಳನಿಂದರಿದು ಬದುಕಿದೆನಯ್ಯ ಪ್ರಭುವೆ.

**61**

**ಕಾಮಿಯಾಗಿ ನಿಃಕಾಮಿಯಾದಳು, ಸೀಮೆಯಲ್ಲಿದ್ದು ನಿಸ್ಸೀಮೆಯಾದಳು.**
**ಭವಿಯ ಸಂಗವ ತೊರೆದು ಭವಬಾಧೆಯ ಹರಿದಳು. ಬಸವಣ್ಣಗತಿಯೆಂದು**
**ಬರಲು ನಾನು ಮಡಿಯ ಹಾಸಿ ನಡೆಸಿದೆ. ನಡೆವುದಕ್ಕೆ**
**ಹಾಸಿದ ಮಡಿಯ ಸರ್ವಾಂಗಕ್ಕೆ ಹೊದ್ದಳು. ಆ ಮಡಿಯ ಬೆಳಗಿನ ಬೆಳಗಿನೊಳಗೆ**
**ನಿರವಯಲಾದಳು. ಕಲಿದೇವರ ದೇವಯ್ಯ ಮಹಾದೇವಿಯಕ್ಕಗಳ**
**ನಿಲವ ಬಸವಣ್ಣನ ಕೃಪೆಯಿಂದಲರಿದೆನಯ್ಯಾ ಪ್ರಭುವೆ.**

**ತಾತ್ಪರ್ಯ :** ಪ್ರಭುವೆ ಅಕ್ಕ ಕಾಮಿಯಾಗಿ ನಿಃಕಾಮಿಯಾದಳು, ಸೀಮೆಯಲ್ಲಿದ್ದು ನಿಸ್ಸೀಮೆಯಾದಳು, ಅದಕ್ಕಾಗಿ ಅಕ್ಕನ ಕಾಮ ಲೋಕದವರಂಥ ಕಾಮವಲ್ಲ , ಹರನೇ ಗಂಡನಾಗಬೇಕೆಂಬ ಹರನ ಸಮರಸದ ಕಾಮಲಿಂಗ ಕಾಮ, ಲಿಂಗಾಂಗ ಸಮರಸದ ಕಾಮ, ಸಚ್ಚಿತ್ಸುಖದ ಕಾಮ, ಇದು ಸವೆಯದ ಸುಖದ ಕಾಮ. ಈ ಕಾಮಿಯಾಗಿ ನಿಃಕಾಮಿಯಾದಳು. ಸೀಮೆಯಲ್ಲಿದ್ದು ನಿಸ್ಸೀಮೆಯಾದಳು, ಸಾವಯವ ನಿರವಯ ಸಂಜ್ಞೆ ಸಂಕೇತ ನಡೆ ನುಡಿ ಭಾವ ಅಭಾವ ಮತಿಗತಿ ನೆನಹು ನಿರ್ಣಯ ಇವೆಲ್ಲವುಗಳು ಸೀಮೆಯಿಂದುಕ್ತವು. ದೇಹದಲ್ಲಿದ್ದು ದೇಹದ ದೇಹಿಯಾಗದೆ ವಿದೇಹಿಯಾದಳು. ರೂಪವುಳ್ಳಾಗಿ ರೂಪಾರೂಪಾವಾಗದೆ ನಿರೂಪಳಾದಳು, ಸತಿಪತಿ ಎಂಬ ಭಾವವುಳ್ಳವಳಾಗಿ ಭಾವಾತೀತಳಾದಳು. ಕಂದುವ ಕುಂದುವ ಶರೀರದಲ್ಲಿದ್ದು ಕಂದದ

ಹೃದಯದವಳಾದಳು. ಜಾತಳಾಗಿ ಅಜಾತಳಾದಳು, ನಾಮಿಯಾಗಿ ಅನಾಮಿಯಾದಳು, ನಡೆದು ನಡೆ ಗೆಟ್ಟಳು, ನುಡಿದು ನುಡಿಗೆಟ್ಟಳು, ಭಾವಿಸಿ ಭಾವಿಸದಾದಳು, ನೆನೆದು ನೆನೆಯದಾದಳು, ನಿರ್ಣಯವುಳ್ಳವಳಾಗಿ ನಿರ್ಣಯಕ್ಕೆ ನಿಲುಕದವಳಾದುದುರಿಂದ ಸೀಮೆಯಲ್ಲಿದ್ದು ನಿಸ್ಸೀಮಳಾದಳು.

ಕಾಮಾದಿಗಳ ಸಂಗವ ತೊರೆದು ಲಿಂಗಾಂಗ ಸಮರಸದ ಸಂಗವ ಮಾಡಿದಳು. ಫಲವ ತೊರೆದಳು ಫಲಪದವ ದಿಃಕರಿಸಿ ಭವಿಸಂಗವ ತೊರೆದು ಭವಬಾಧೆ ಹರಿದಳು. ಅಹಹ ಅಕ್ಕನ ವೈರಾಗ್ಯ ಭವಬಾಧೆ ಹರಿದ ಮಹಾವೈರಾಗ್ಯ. ಬೇಕು ಬೇಡೆಂಬುದಳಿದ ಮಹಾವೈರಾಗ್ಯ.ಇದು ಸುಜ್ಞಾನ ಕರಿಗೊಂಡ ವೈರಾಗ್ಯ, ಭವಬಾಧೆ ಹರಿದ ಸಂಕೇತ, ಮೋಹದ ಸಂಗವ ತೊರೆದು ಲಿಂಗಸಂಗದೊಳ್ ಅವಿರಳ ಸಂಗಿಯಾದ ಸಂಕೇತ. ಈ ಮಹಾವೈರಾಗ್ಯ ದೃಢವಾಗಿಪ್ಪುದರಿಂದ ಅಕ್ಕ ಭಕ್ತಿಯ ಭಾಗ್ಯದದೇವಿ, ಮುಕ್ತಿಯ ಮುಕ್ತಾಂಗನೆ, ಶಿವಭಾವ ಸಂಪತ್ತಿನ ಶಿವಯೋಗಿನಿ ಕಲ್ಯಾಣಕ್ಕೆ ಬರಲು ನಾನು ಮಡಿಯ ಹಾಸಿ ನಡೆಸಿದೆ. ನಾನು ಮಡಿಯ ಹಾಸಿದ ಮಡಿ ಇದು ಶುದ್ಧ ಮಡಿ,ವಿಶುದ್ಧ ಮಡಿ, ಅಕಲಂಕ ಮಡಿ ನಾನೆಂಬ ಅಹಮಿಲ್ಲದ ಮಡಿ, ದೇಹಭಾವಕ್ಕಿಂಬುಕೊಡದ ಮಡಿ ವಿಷಯ ವಾಸನೆಕ್ಕಿಂಬು ಕೊಡದ ಮಡಿ, ಕೆಡದ ಮಡಿ, ಸಹಜ ಮಡಿ, ಇದು ಪವಿತ್ರಾ ಪವಿತ್ರವಾಗದ ಮಡಿ, ವಿಶುದ್ಧ ಮಡಿ ನಿರಂತರ ಪವಿತ್ರವಾದುದರಿಂದ ನನ್ನ ಮಡಿ ಅಂದು ಇಂದು ಎಂದೆಂದು ಇದ್ದಕ್ಕಿದ್ದ ಅಕಳಂಕ ಮಡಿ. ಇದು ನಿಷ್ಕಳಂಕ ನಿರಾಳನ ಮಡಿಯ ಹಾಸಿ ನಡೆಸಿದೆ ನಾನು ನಡೆಯುವುದಕ್ಕೆ ಹಾಸಿದರೆ ಈ ಮಹಾತಾಯಿ ಮಡಿಯನ್ನೇ ಸರ್ವಾಂಗಕ್ಕೆ ಹೊದ್ದಳು. ಅಂದರೆ ನನ್ನ ಮಡಿಯ ಘನವ ಹೇಳಿಕೊಂಡರೆ ಅದು ನನಗೆ ಬೇಕೆಂದು ತನ್ನ ಸರ್ವಾಂಗವನ್ನೆಲ್ಲ ಮಡಿಯಲ್ಲಿಯೆ ಮುಚ್ಚಿದಳು. ಅಂದರೆ ಮಡಿಯಲ್ಲಿಯೆ ತನ್ಮಯವಾದಳು. ಆಗ ನಿಷ್ಕಳಂಕ ಶುದ್ಧ ಶಾಂತ ನಿರ್ಭಯ ಬೆಳಗಿನ ಮಹಾಬೆಳಗಿನೋಳ್ ಶಬ್ದ ಮುಗ್ಧಳಾಗಿ ಸ್ವಯ ಸುಖಿಯಾದಳು.

ಕಲಿದೇವಯ್ಯ ಮಹಾದೇವಿಯಕ್ಕಗಳ ನಿಲುವ ಬಸವಣ್ಣನ ಕೃಪೆಯಿಂದ ಅರಿದೆನಯ್ಯ ಪ್ರಭುವೆ ಅಂದರೆ ಕಲಿದೇವರ ದೇವಯ್ಯ ಮಹಾದೇವಿಯಕ್ಕಗಳ ಘನಕ್ಕೆ ಘನವಾದ ಅಗಮ್ಯ ನಿಲುವ ಅಪ್ರಮಾಣ ನಿಲುವ ಅಚಿಂತ್ಯ ನಿಲುವ ಶಬ್ದ ಮುಗ್ಧವಾದ ನಿಲುವ ಬಸವಣ್ಣನವರ ಕರುಣೆಯಿಂದ ಅರಿದೆನಯ್ಯ ಸ್ವತಃ ತಿಳಿದೆಹೆನೆಂದರೆ ಅಸಾಧ್ಯವೆಂದು ಮಡಿವಾಳ ಮಾಚಯ್ಯ ತಂದೆ ಪ್ರಶಂಶಿಸಿದ್ದಾನೆ. ಆ ಸಮಯದಲ್ಲಿ ಪ್ರಭುದೇವರ ವಚನ.

**62**

**ನುಡಿಗೆಡೆಗೊಡದ ಘನವ ಹಿಡಿದು ಒಡಬಂದಿಯಾದಳು.**
**ಎಡೆಯಿಲ್ಲದ ಪರಿಪೂರ್ಣದೊಳಗೆ ನಡೆನುಡಿಗೆಟ್ಟಳು. ತನ್ನ ನಿಲುಕಡೆಯ ನಿಜವ**
**ತಾನರಿಯದಂತೆ ಎನ್ನಿಂದ ಕೇಳಿ ಸ್ವಯವಾದಳು. ಗುಹೇಶ್ವರ ಸಾಕ್ಷಿಯಾಗಿ**
**ಮಹಾದೇವಿಯಕ್ಕನ ನಿಲುವ ಕೊಂಡಾಡುವುದಕ್ಕೆ ತೆರೆಹಿಲ್ಲ ಕಾಣಾ ಮಡಿವಾಳಯ್ಯ.**

**ತಾತ್ಪರ್ಯ :** ನಿರ್ಬೈಲು ಎಂಬುದು ಬಯಲೆಂಬ ಶಬ್ದದ ನುಡಿಗೆಡೆಗೊಡದ ಇರುವು. ಏಕೆಂದರೆ ನಿರ್ಬೈಲು ಎಂಬುದು ಬಯಲೆಂಬ ಪದವನ್ನು ನಿಷೇಧಿಸುವುದು. ಅಂದರೆ ಯಾವ ಬಯಲು ಆಗದ್ದು ಘಟಾಕಾಶ, ಮಠಾಕಾಶ, ಮೇಘಾಕಾಶವಾದದ್ದು,ಆವಾವ ಆಕಾಶವಾಗದ್ದು, ಆಕಾಶವತ್ ಆಕಾಶವು ಅನ್ನಲು ಹೇಗೆ ಬರುವುದಿಲ್ಲವೋ, ಹಾಗೆ ನುಡಿಗೆಡಗೊಡದ ಘನವೆಂಬುದು

ಸಕಲ ನುಡಿಗಳನ್ನು ನಿಷೇಧಿಸುವುದು. ಮಹಾಕಾವ್ಯ ಶೃತಿ ಸ್ಮೃತಿ ಸ್ವಾನುಭವ ಇವೆಲ್ಲವುಗಳು ಆವುದರಿಂದ ಸಿದ್ಧವಾಗುವವೋ ಮತ್ತು ಇವುಗಳೆಲ್ಲವು ಬೆಳಗಿಸಿಕೊಳ್ಳತಕ್ಕವುಗಳಾದುದರಿಂದ ಅದು ನುಡಿಗೆಡೆಗೊಡದ ಘನ, ಅಲುಪ್ತ ಘನವಾಗಿದೆ. ಆದ್ದರಿಂದ ಶೃತಿ ಸ್ಮೃತಿ ವೇದ ಪುರಾಣೇತಿಹಾಸ ಇವೆಲ್ಲವು ನುಡಿಯಿಂದುಕ್ತವು. ಅದಕ್ಕಾಗಿಯೆ ವೇದಂಗಳಿಗಬೇಧ್ಯನು ಶಾಸ್ತ್ರಕ್ಕಸಾಧ್ಯನು ಆಗಮಕ್ಕಗೋಚರನು ತರ್ಕಕ್ಕೆ ಅತರ್ಕ್ಯನು, ವಾಙ್ಮನೋತೀತವೆಂದು ಹೇಳುವುದೆ ನುಡಿಗೆಡೆಗೊಡದ ಘನ. ಆ ನುಡಿಗೆಡೆಗೊಡದ ಘನವ ಹಿಡಿದು ಒಡಬಂದಿಯಾದವಳಿಗೆ ಅಂಗವೆಂಬುದಿಲ್ಲ , ಅಂಗಸ್ಥವಿಲ್ಲ ಲಿಂಗಸ್ಥವಿಲ್ಲ ಗುರುಲಿಂಗ ಜಂಗಮ ಪಾದೋದಕ ಪ್ರಸಾದವಿಲ್ಲ ಮತ್ತು ಷಟ್‌ಸ್ಥಲಗಳಾದ ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗ ಶರಣ ಐಕ್ಯಸ್ಥಲವ ಮೀರಿರುವುದರಿಂದ ನಡೆಗೆಡೆಗೊಡದ ಘನವ ಹಿಡಿದು ಒಡಬಂದಿಯಾದಳು. ಏಕೆಂದರೆ ಪಂಚಾಚಾರವಾಗಲಿ ಷಟ್‌ಸ್ಥಲವಾಗಲಿ ನುಡಿ ನಡೆಗೊಳಪಟ್ಟವು, ನುಡಿ ಇದ್ದಲ್ಲಿ ಸಂಜ್ಞೆ, ಸಂಕೇತ ಉಂಟು, ಕಲ್ಪಿತನುಂಟು ಕಲ್ಪನೆ ಉಂಟು, ನೆನಹು ಉಂಟು ಭಾವವುಂಟು, ಜಪವುಂಟು ತಪವುಂಟು, ತ್ಯಾಗವುಂಟು ಭೋಗವುಂಟು, ಯೋಗವುಂಟು ಮೌನ ಮುದ್ರೆಗಳುಂಟು ಅರ್ಚನೆ ಅನುಷ್ಠಾನವುಂಟು.

ಇವೆಲ್ಲವು ಕಲ್ಪಿತನೊಳಗು, ತಾನಾರೆಂದರಿಯದ ಮರವಿನೊಳಗು. ನುಡಿಗೆಡೆಗೊಡದ ಘನವೆಂಬುದು ಎಲ್ಲಿಯವರೆಗೆ ತನ್ನಿಂದ ತಾನಾರೆಂದರಿಯುವುದಿಲ್ಲ ಅದು ತಾನಾಗುವುದಿಲ್ಲ. ಅದಕ್ಕಾಗಿ ಜೀವನು ಮರವಿನ ಸಂಬಂಧಿಯಾಗುತ್ತಾನೆ. ಇಲ್ಲವೆ ಅರುವೆ ತಾನೆಂಬ ಚಿದಹಂದ ಸಂಬಂಧಿ ಯಾಗುತ್ತಾನೆ. ಯಾವಾಗ ತನ್ನನ್ನು ತಾನು ಯತಾರ್ಥ ತಿಳಿಯತ್ತಾನೆ, ಆಗ ನುಡಿಗೆಡೆಗೊಡದ ಘನದ ಸಂಬಂಧಿಯಾಗುತ್ತಾನೆ.ಇದು ಸ್ವಯ ಸಂಬಂಧ, ಇದಾರ ಹಂಗಿಲ್ಲದ ಸಂಬಂಧ, ಸಕಲ ಹಂಗು ಹರಿದ ಸಂಬಂಧ, ನಿಜ ನಿರಾಲಂಬದ ನಿಲಯ. ಅದಕ್ಕಾಗಿ ಇದು ಘನಸಂಬಂಧ. ಈ ಸಂಬಂಧದ ಘನವೇನೆಂಬೆ ಇಲ್ಲಿ ವಿಷಯಂಗಳಿಲ್ಲ , ವ್ಯಸನವಿಲ್ಲ , ವಾಸನೆಯಿಲ್ಲ ಅಹುದಾದಿಲ್ಲ ಅಲ್ಲಾದುದಿಲ್ಲ , ಇಹವಿಲ್ಲ , ಪರವಿಲ್ಲ , ದೇಹ ಅಳಿದುದಿಲ್ಲ ಉಳಿದುದಿಲ್ಲ ಅಂದು ಇಂದು ಎಂದೆಂದೂ ಇದ್ದಕ್ಕಿದ್ದಂತಿರುವ ಘನವಾದುದರಿಂದ ಇಲ್ಲಿ ಕೋಹಂ ಸೋಹಂ ಚಿದಹಂ ಭ್ರಮವಿಲ್ಲ, ಬೋಧವಿಲ್ಲ ಅಬೋಧವಿಲ್ಲ ಎಂಬುದು ತಾನು ಅರಿತಿದ್ದರೂ ತನ್ನ ನಿಲುಕಡೆಯ ನಿಜವ ತಾನರಿಯದಂತೆ ಎನ್ನಿಂದ ಕೇಳಿ ಸ್ವಯವಾದಳು.

ಇದೆಂಥ ನಿರಾಡಂಬರ ನಿಲಯ, ನಿರಹಂ ಕೃತಿಯ ನಿಲಯ, ಸಮರಸದ ನಿಲಯ. ಇದು ಎಡೆಯಿಲ್ಲದ ಪರಿಪೂರ್ಣ, ಇದು ಆವ ನಡೆ ನುಡಿಯಾಗದ ಘನ ಎಂದರೆ ಹೊರಗೆ ನೋಡಿದರೆ, ಶಬ್ದ ಮುಗ್ಧವಾಗಿಲ್ಲ ನಿರ್ಗಮನಿಯಾಗಿಲ್ಲ. ಈ ಶಕ್ತಿ, ನಡೆದರೂ ತಾ ನಡೆಯಾಗದ ಘನ ನುಡಿದರೂ ತಾ ನುಡಿಯಾಗದ ಘನವಾದುದರಿಂದ ಇದು ಸಮಾತಾ ನಿಧಿ, ಈ ಮಹಾಶಕ್ತಿಗೆ ಅರಿತೆ ಅರಿಯನೆಂಬುದಷ್ಟೆ, ಸ್ಮೃತಿ ಅಷ್ಟೆ ವಿಸ್ಮೃತಿ ಅಷ್ಟೆ, ಬದ್ಧರಷ್ಟೆ ಬುದ್ಧರಷ್ಟೆ, ಬಂಧನವಷ್ಟೆ ಮೋಕ್ಷವಷ್ಟೆ. ಅಕ್ಕನ ನಿಲುವು ಇದು ನೆಲೆಯಿಲ್ಲದ ನಿಲವು ದಿಟಸಟೆಯ ಕೂಡದ ನಿಲವು, ತಾನೆ ತಾನಾದ ನಿರಾತಂಕ ನಿಸ್ಸೀಮ ನಿಲಯ, ತಾನೇ ತಾನಾದ ಘನವು ಆದರೂ ಅಕ್ಕ ತಾನರಿಯದಂತವಳಾಗಿ ಎನ್ನಿಂದ ಕೇಳಿ ಸ್ವಯವಾದಳು. ಗುಹೇಶ್ವರ ಸಾಕ್ಷಿಯಾಗಿ ಮಹಾದೇವಿಯಕ್ಕನ ನಿಲವು ಕೊಂಡಾಡುವುದಕ್ಕೆ ತೆರೆಹಿಲ್ಲ ಅಂದರೆ ಅಳತೆಗೆ ಬಾರದು ಎಂದು ಸ್ತುತಿಸಿರುವರು.

63

**ಎಲ್ಲಾ ಎಲ್ಲವನರಿದು ಫಲವೇನಯ್ಯ ? ತನ್ನ ತಾನರಿಯ ಬೇಕಲ್ಲದೆ**
**ತನ್ನಲ್ಲಿ ಅರಿವು ಸ್ವಯವಾಗಲು ಅನ್ಯರ ಕೇಳಲುಂಟೆ? ಚೆನ್ನಮಲ್ಲಿಕಾರ್ಜುನ**
**ನೀ ನರುವಾಗಿ ಮುಂದು ದೋರಿದ ಕಾರಣ ನಿಮ್ಮಿಂದ ನಿಮ್ಮನರಿದೆನಯ್ಯ ಪ್ರಭುವೆ.**

**ತಾತ್ಪರ್ಯ :** ಎಲ್ಲ ಎಲ್ಲವನರಿದು ಫಲವೇನಯ್ಯ : ಅಂದರೆ ಲೋಕ ಸಂಬಂಧವಾದ ಅರವತ್ತು ನಾಲ್ಕು ಕಲೆಗಳಿಂದುಕ್ತವಾದ ವಿದ್ಯೆಯ ಕಲಿತು, ಲೋಕದೋಳ್ ಬಹು ಚತುರನೆನಿಸಿಕೊಂಡರೇನು? ಪಂಡಿತನೆಂದೆನಿಸಿಕೊಂಡರೇನು? ಅದರಿಂದ ತನ್ನನ್ನೇನಾದರೂ ಅರಿತಂತಾಯಿತೆ?

**ಶ್ಲೋಕ: ''ವೇದಾಭ್ಯಾಸತ್ಪರಾ ತಾಪತ್ರಯ ಮಾತ್ರೇಣ ಶೋಕಿತಾ ಪಶ್ಚಾದಭ್ಯಾಸ ವಿಸ್ಮಾರ ಭಂಗ ಗರ್ವೈಶ್ಚ ಶೋಕಿತಾ''** ಎಂದಂತೆ ನಾರದ ಮಹರ್ಷಿಗಳು ವೇದಾಭ್ಯಾಸ ಮಾಡುವುದಕ್ಕಿಂತ ಮೊದಲು ಆಧ್ಯಾತ್ಮಿಕಾದಿ ತಾಪತ್ರಯದಿಂದ ಕೂಡಿದ್ದರು. ಇದನ್ನು ಕಳೆದುಕೊಳ್ಳಲು ವೇದ ವೇದಾಂತ ಅಪಾರ ನಾನಾ ವಿದ್ಯೆಗಳನ್ನು ಕಲಿತ ಮೇಲೆ ಅಭ್ಯಾಸದ ''ವಿಸ್ಮೃತಿದುಃಖ'' ವನ್ನು ಸಭೆಯಲ್ಲಿ ಸಕಾಲಕ್ಕೆ ಸರಿಯಾಗಿ ಹೇಳಲು ಬಾರದಿರುವಾಗ ''ಮಾನಭಂಗ ದುಃಖ'' ಸ್ಮೃತಿಯ ಮೂಲಕ ಉತ್ತರವನ್ನು ಕೊಡಲು ನನ್ನ ಸರಿ ವಿದ್ವಾಂಸನಿಲ್ಲೆಂದು ''ಗರ್ವ ದುಃಖ'' ಎಂಬ ಮೂರು ದುಃಖಗಳು ಹೆಚ್ಚಾದವು. ಏಕೆಂದರೆ ತಾನಾರೆಂದರಿಯದ ಕಾರಣದಿಂದ ದುಃಖ ಹೆಚ್ಚಾದವು. ಆಗ ಸನತ್ಕುಮಾರ ಮುನಿಗಳಿಗೆ ಶರಣಾಗತನಾಗಿ ವೇದಾದಿಗಳು ಪಠಿಸಿದರೂ ನನ್ನ ದುಃಖ ಹೋಗಲೊಲ್ಲದು, ಮತ್ತಷ್ಟು ದುಃಖ ಅಧಿಕವಾಗಿದೆ. ಇದರ ಕಾರಣವೇನೆಂದು ವಿಚಾರಿಸಲು, ಮಹರ್ಷಿಗಳು ನೀನು ವೇದ ವೇದಾದಿಗಳನ್ನು ಕಲಿತಿರುವುದು ನಿಜ, ಆದರೆ, ವೇದವನ್ನು ಕಲಿತವನು ಆರು? ಎಂದು ಅರಿತಿರುವೆಯಾ? ಕಲಿತವನನ್ನು ತಿಳಿಯದ್ದರಿಂದ ದುಃಖ ಹೆಚ್ಚಾಗಿದೆ ಎಂದು ನಾರದರಿಗೆ ಹೇಳಿದಾಗ ಮಿಕ್ಕವರ ಪಾಡೇನು.

ಅದಕ್ಕಾಗಿ ಮಾನವನು ನಾಲ್ಕು ವೇದಗಳನ್ನು ಇಪ್ಪತ್ತೆಂಟು ಆಗಮಗಳನ್ನು ಓದಿದರೂ ಧೈರ್ಯ ಕ್ಷಮೆ ಮೊದಲಾದ ಸದ್ಗುಣಗಳಿಂದ ಕೂಡಿದರೂ ಜಗತ್ತಿನ ಜನರಿಂದ ದೊಡ್ಡವನೆನಿಸಿಕೊಂಡರೂ ಫಲವೇನು ತಾನಾರೆಂದರಿತಿರುವುದಿಲ್ಲ, ಇದಲ್ಲದೆ ಮೋಸವಿಲ್ಲದೆ ಕೋಟ್ಯಾವಧಿ ಜಪವ ಜಪಿಸಿದರೇನು ಅದರಿಂದ ಉಗ್ರ ತಾಪಕಿಯಾಗಿ ವಾಕ್ ಸಿದ್ಧಪುರುಷನಾದರೇನು? ಅಣಿಮಾದಿ ಸಿದ್ಧಿಗಳಿಂದುಕ್ತನಾದರೇನು ಲೋಕದ ಜನಾಂಗವು ಮಹಾಮಹಿಮನೆಂದರೇನು ಪರಾವತಾರ ಎಂದರೇನು? ತನ್ನ ತಾನರಿಯದಿದ್ದರೆ ಎಲ್ಲ ಎಲ್ಲವನರಿದು ಫಲವೇನಯ್ಯಾ ತನ್ನ ತಾನರಿಯಲು ತನ್ನಲ್ಲಿ ಅಂದರೆ ತನ್ನ ಶರೀರದಲ್ಲಿ ಅರುವು ಸ್ವತಃ ಸಿದ್ಧವಾಗಲು ಅನ್ಯರ ಕೇಳುವುದಾದರೂ ಏತಕ್ಕೆ? ಅಂದರೆ ತನ್ನನ್ನರಿಯಲು ಅರುವೆ ಪ್ರಾಮುಖ್ಯವು. ಅರುವಿನಿಂದ ತನ್ನನರಿಯುವುದು ಅರುವಿನ ಘನತ್ವವಾಗಿದೆ. ತಾನಾರೆಂದರಿಯಲು ಲಿಂಗಾಂಗ ಸಾಮರಸ್ಯ ಜ್ಞಾನವೇ ಮುಖ್ಯ . ತತ್ವಮಸಿ ಮಹಾವಾಕ್ಯವೆ ಮುಖ್ಯ . ಈ ಮಹಾವಾಕ್ಯವರಿಯುವುದೆ ಬ್ರಹ್ಮಜ್ಞಾನ. ಬ್ರಹ್ಮವೆಂದರೆ ಅರುವು ಈ ಅರುವಿನ ಜ್ಞಾನವೇ ಪ್ರಾಧಾನ್ಯ . ಅರುವಿನ ಸ್ವರೂಪವೇನು ಅರುವು ಎಂದು ಏತಕ್ಕನ್ನುವರು? ಅಂಗವೆ ಲಿಂಗ, ಲಿಂಗವೆ ಅಂಗವೆಂದು ಏತಕ್ಕನ್ನುವರು, ಷಟ್‌ಸ್ಥಲ ಚಕ್ರವರ್ತಿ ಚೆನ್ನಬಸವ ದೇವರು ಅವರು ''ಅರಿಯ ಹೇಳಿ ಸದ್ಗುರುನಾಥ ಕುರುಹು ಕೈಯಲ್ಲಿ ಕೊಟ್ಟನಲ್ಲದೆ ತನ್ನರುವನೆ ಮರೆದು ಕುರುಹನೆ ಪೂಜಿಸುವ ನರ ಕುರಿಗಳ ನೋಡಾ ಕೂಡಲ ಚೆನ್ನಸಂಗಮದೇವಾ'' ಎಂದು ಪ್ರಸಾದ ವಾಣಿ ಬಿತ್ತರಿಸಿದರೂ ಅಂಗ ಲಿಂಗ ಅರು ಸ್ವರೂಪ, ಅಂಗವೆಂದರೂ ಅರುವೆ, ಲಿಂಗವೆಂದರೂ ಅರುವೆ,

ಎಂದು ಮಹಾತ್ಮರು ಲಿಂಗಾಂಗ ಸಮರಸದ ಘನತ್ವ ಹೇಳಿದರೂ ಮಾನವ ತನ್ನನ್ನು ಇದ್ದಕ್ಕಿದ್ದ ಹಾಗೆ ತಿಳಿಯಲ್ಲಿಲ್ಲ. ಯಾವಾಗ ತನ್ನನ್ನು ಯತಾರ್ಥ ತಿಳಿವನು ಆಗ ತಾನು ಉಪಮಾತೀತ ಅವಾಙ್ಮನ ಅಗೋಚರ ತಾನೆ. ಹೀಗೆ ತನ್ನ ಸ್ವರೂಪವರಿಯಲು ಶಾಸ್ತ್ರಕ್ಕಸಾಧ್ಯ ತಾನೆ. ತರ್ಕಕ್ಕೂ ಅತರ್ಕಕ್ಕೂ ತಾನೆ, ತಾನೆಂಬುದು ಅವರ್ಣೀಯ ಘನ. ಆದರೂ ಬೋಧ ಆಗಲಿ, ಉಪನಿಷತ್ ಆಗಲಿ, ಆಗಮವಾಗಲಿ, ನೀನು ಅರುವು, ಚಿನ್ಮಯ ಚಿನ್ನಿಧಿ, ಮಹಾಲಿಂಗ ಘನಲಿಂಗ ಸ್ವಯಂ ಜ್ಯೋತಿ ಚಿಜ್ಯೋತಿ. ಪರಬ್ರಹ್ಮ ಪರಮಾತ್ಮ, ಸತ್ ಚಿತ್ ಆನಂದ ನಿತ್ಯ ಪೂರ್ಣ ಸ್ವಯಂ ಪ್ರಕಾಶ ಅದುವೆ, ವಿಶ್ವಕ್ಕಾಧಾರ ಅದುವೆ. ಕಾರ್ಯ ಅದುವೆ ಕಾರಣ ಅದುವೆ, ವಿದ್ಯಾ ಅದುವೆ ದೈವ ಅದುವೆ ಗುರು ಅದುವೆ ಗಗನದಂತಿರುವ ಜ್ಞಾನಾಮೃತ. ಅದಕ್ಕಾಗಿ ಅರುವು ನಿಸ್ಸೀಮವಾದುದರಿಂದ ಅಲ್ಲಿ ಕಾಣಿಸಿಕೊಳ್ಳುವ ಪ್ರಮೇಯವಿಲ್ಲ ಕಾಣುವ ಪ್ರಮಾಣವಿಲ್ಲ. ಇವುಗಳ ಅಭಿಮಾನಿಯಾದ ಪ್ರಮಾತೃವಿಲ್ಲ ಮಾಯಾತೀತವಾದ ಅರು ಸ್ವರೂಪದೋಳ್ ತ್ರಿಪುಟಿಗಿಂಬಿಲ್ಲವಾದುದರಿಂದ ನಿರ್ವಿಕಾರವು ನಿರ್ಮಾಯವು ನಿರವಧಿಯು ನಿಸ್ಸೀಮವು. ಈ ಅಖಂಡದೋಳ್ ನಾಮವಾವುದು ಅನಾಮವಾವುದು ರೂಪವಾವುದು ಅರೂಪವಾವುದು ಭೇದ ಅಭೇದವಾವುದು ಬದ್ಧರಾರು? ಬುದ್ಧರಾರು? ನುಡಿಗೆಡೆಗೊಡದ ಘನ ಅಲ್ಲಿ ವಿಭಾಗಕ್ಕಿಂಬುಂಟೆ?

ಅರುವೆಂಬುದು ಅದ್ವಿತೀಯವು ಪರಾತ್ಪರವು ಇರುವಲ್ಲಿ ಅಲ್ಲಿ ತನ್ನನ್ನು ಮುಕ್ತನೆಂದು ಭಾವಿಸಲಿಂಬುಂಟೆ, ಇಂಬಿಲ್ಲವಾದಲ್ಲಿ ಬದ್ಧನೆಂದೆನ್ನುವುದಕ್ಕಾದರೂ ಇಂಬುಂಟೆ? ಇಂಬಿಲ್ಲದುದರೋಳ್ ವಿಸ್ಮೃತಿ ಸ್ಮೃತಿ, ಬಂಧ ಮೋಕ್ಷ, ಜ್ಞಾನ ಅಜ್ಞಾನ, ಸಾಕಾರ ನಿರಾಕಾರ ದ್ವೈತ ಅದ್ವೈತವೆಂದು ಮಾಯೆ ರಚಿಸಿದುದು ಆಶ್ಚರ್ಯ ನೋಡಾ. ಏಕೆಂದರೆ ನಿರ್ಭಾವದೋಳ್ ಭಾವವೆಂಬುದು ಪುಸಿ ದೃಷ್ಟಿ ನಿರಂತರವಾಗಿರುವ ಸರ್ವಮಂಗಳಮಯ ತತ್ವ ಒಂದೇ ಸತ್ಯ ಇರುವಲ್ಲಿ ನೀನು ಮುಕ್ತನೆಂದು ಭಾವಿಸಿದರೂ ಅದುವೆ ಬದ್ಧನೆಂದು ಭಾವಿಸಿದರೂ ಅದುವೆ. ಇದ್ದುದೊಂದೆ ನಿರಂತರವಾಗಿರುವ ಮಂಗಳಮಯ ಇದುವೆ ನುಡಿಗೆಡೆಗೊಡದ ಘನ. ತಾನೆ ತಾನಾದ ಘನವ ತಿಳಿಯದೆ ಏನನ್ನಾದರೂ ತಿಳಿದರೂ ಫಲವೇನು? ಕಾರಣ ತಾನಾರೆಂಬುದು ಮುಖ್ಯವಾಗಿ ಅರಿಯುವುದು ಅರಿಯಲು ತಾನೆ ತನ್ನ ಹೊರ್ತು ಅನ್ಯವಾವುದು ಇಲ್ಲವೆಂಬುದು ತನ್ನಿಂದಲೆ ಸಿದ್ಧವಾಗುವುದು. ತಾನೆಂದರೆ ಸ್ವತಃ ಸಿದ್ಧವಾದ ಜ್ಞಾನಸ್ವರೂಪ ಅದುವೆ, ಶ್ರೀ ಗುರುಸ್ವರೂಪ ಅದುವೆ, ಆ ಜ್ಞಾನಘನವೆ ಚೆನ್ನಮಲ್ಲಿಕಾರ್ಜುನ ರೂಪಾಗಿ ಅರುವಾಗಿ ಬಂದು ಮುಂದೋರಿದ ಕಾರಣ ನಿಮ್ಮ ಜ್ಞಾನದಿಂದ ನಿಮ್ಮ ನರಿದೆನು ಎಂದು ಹೇಳಿದ್ದಾಳೆ. ಮತ್ತಂ ಅಕ್ಕಗಳು ಶರಣ ಸಂಗದಿಂದ ನಿಮ್ಮ ನಿಜದ ವಿರಳ ಸುಖವಾಯಿತ್ತೆಂದು ಬಿನ್ನೈಸುವ ಪ್ರಸ್ತಾವದ ವಚನ.

**64**

**ಸಂಗದಿಂದಲ್ಲದೆ ಅಗ್ನಿ ಹುಟ್ಟದು. ಸಂಗದಿಂದಲ್ಲದೆ ಬೀಜ ಮೊಳೆದೋರದು.**
**ಸಂಗದಿಂದಲ್ಲದೆ ದೇಹವಾಗದು. ಸಂಗದಿಂದಲ್ಲದೆ ಸರ್ವಸುಖ ತೋರದು,**
**ಚೆನ್ನಮಲ್ಲಿಕಾರ್ಜುನ ದೇವಯ್ಯ ನಿಮ್ಮ ಶರಣರ ಅನುಭಾವ ಸಂಗದಿಂದಾನು**
**ಪರಮ ಸುಖಿಯಾಗಿ ಬದುಕಿದೆನಯ್ಯಾ.**

**ತಾತ್ಪರ್ಯ :** ಅಕ್ಕನು ಸಂಗದ ಮಹತ್ವವನ್ನು ವರ್ಣಿಸಿರುವಳು. ಏಕೆಂದರೆ ಸಂಗವಿಲ್ಲದೆ ಆವ

ಸುಖವು ದೊರೆಯದು. ಪ್ರಪಂಚದಲ್ಲಿಯ ಸುಖವಾದರೂ ಸಂಗದಿಂದ ತೋರುವದು. ಪರಮಾರ್ಥ ಸುಖವಾದರೂ ಸಂಗದಿಂದ ತೋರುವದು. ಪಿಂಡಾಂಡ ಬ್ರಹ್ಮಾಂಡವಾದುದು ಸಂಗದಿಂದ, ಪಿಂಡಾಂಡ ಬ್ರಹ್ಮಾಂಡಗಳಲ್ಲಿರುವ ಮಹಾಲಿಂಗದ ಸುಖ ದೊರೆಯುವುದಾದರೂ ಸಂಗದಿಂದ . ಅದಕ್ಕಾಗಿ ಸಂಗವು ಬಹು ಪ್ರಾಮುಖ್ಯವು, ಸಂಗದಿಂದಲೆ ಅಗ್ನಿ ಹುಟ್ಟುವುದು. ಬೇಸಿಗೆಯಲ್ಲಿ ಬಿದಿರು ಬಿದಿರಿಗೆ ಘರ್ಷಣೆಯಾಗಿ ಬಿದಿರಿನ ಮಲೆ ಸುಡುವುದು ಸಂಗದಿಂದಲ್ಲವೆ, ನೀರು ನೀರು ಘರ್ಷಣಾ ಸಂಗದಿಂದ ವಿದ್ಯುತ್‌ರೂಪ ಅಗ್ನಿ ಉದಯವಾಗಿ ಜಗವೆಲ್ಲ ಬೆಳಕಿನಿಂದ ಬೆಳಗುವುದು. ಮಾತಿಗೆ ಮಾತು ಮರ್ಥನವಾಗಿ ಶರೀರವೇ ಬಿಸಿಯಾಗುವುದು ಮತ್ತು ಸಂಗದಿಂದಲೆ ಬೀಜ ಮೊಳೆ ದೋರುವದು, ಬೀಜವು ಭೂಮಿಯ ಸಂಗ ಮಾಡಿಯೆ ಮೊಳಕೆಯೊಡೆಯುವುದು. ಅದಕ್ಕಾಗಿ ಸಂಗದ ಮಹತ್ವವು ಬಹು ಶ್ರೇಷ್ಠವಾದುದು.

'' ಅನಾದಿಯ ಮಗನು ಆದಿ, ಆದಿಯ ಮಗನು ಅತೀತ, ಅತೀತನ ಮಗ ಆಕಾಶ, ಆಕಾಶನ ಮಗ ವಾಯು, ವಾಯುನ ಮಗ ಅಗ್ನಿ, ಅಗ್ನಿಯ ಮಗ ಅಪ್ಪು, ಅಪ್ಪುವಿನ ಮಗ ಪೃಥ್ವಿ, ಪೃಥ್ವಿಯಿಂದ ಸಕಲ ಜೀವರೆಲ್ಲರ ಉಧ್ಭವ ನೋಡಾ ಗುಹೇಶ್ವರಾ'' ಎಂದತೆ. ಭೂಮಿ ಹುಟ್ಟಿದುದು ನೀರಿನಿಂದ ನೀರು ಹುಟ್ಟಿದುದು ಅಗ್ನಿಯಿಂದ ಅಗ್ನಿ ಹುಟ್ಟಿದುದು ವಾಯುವಿನಿಂದ, ವಾಯು ಹುಟ್ಟಿದುದು ಆಕಾಶದಿಂದ, ಆಕಾಶ ಹುಟ್ಟಿದುದು ಅತೀತನಿಂದ, ಅತೀತ ಹುಟ್ಟಿದುದು ಆದಿಯಿಂದ, ಆದಿ ಹುಟ್ಟಿದುದು ಅನಾದಿಯಿಂದ ಅಂದರೆ ಉತ್ಪತ್ತಿ ಕ್ರಮವನ್ನು ಹೇಳಿದ್ದಾರೆ. ಆಕಾಶ ಹುಟ್ಟಿದುದು ಯಾರಿಂದ ಗೊತ್ತೆ ? ವಿವೇಕ ಶಕ್ತಿಯಿಂದ ಅಂದರೆ ಅಂಗನಿಂದ ಹುಟ್ಟಿದುದು, ಅಂಗನು ಲಿಂಗದಿಂದ ಹುಟ್ಟಿದನೆಂದು, ಅಕಲ್ಪಿತ ಗುಹೇಶ್ವರ ಲಿಂಗದಿಂದ ಇವೆಲ್ಲ ಕಲ್ಪಿತವೆಂದು ಹೇಳಿದ್ದಾರೆ. ಹೀಗೆಯೆ ದೇಹದ ಉತ್ಪತ್ತಿಯಾದರೂ ಭೂಮಿಯಿಂದ ಅನೇಕ ವಿಧವಾದ ಸಸ್ಯಾದಿಗಳು ಉತ್ಪತ್ತಿಯಾಗುತ್ತವೆ. ಅವುಗಳಿಂದ ಅನ್ನ ಆ ಅನ್ನವನ್ನು ತಂದೆ ತಾಯಿಗಳು ಊಟ ಮಾಡುತ್ತಾರೆ. ಅದು ಜಠರಾಗ್ನಿಯಿಂದ ಪಾಕವಾಗಿ ಅವರ ಶರೀರಗಳಲ್ಲಿ ಅದು ಸಪ್ತಧಾತುರೂಪ ಪರಿಣಾಮವನ್ನು ಹೊಂದುತ್ತದೆ.

ಮೊದಲು ಅನ್ನದಿಂದ ರಸ, ರಸದಿಂದ ರಕ್ತ, ರಕ್ತದಿಂದ ಮಾಂಸ ಮಾಂಸವೆ ಒಂದು ತರಹದ ಶಕ್ತಿಯಿಂದ ಕೂಡಿ ಮೇದಸ್ಸು ಎಂದೆನಿಸುವದು. ಅದರಿಂದ ನರವು ನರಗಳಿಂದ ಎಲುಬು ಎಲುಬುಗಳಿಂದ ಮಜ್ಜೆ ಮಜ್ಜೆಯಿಂದ ರೇತಸ್ಸು ಇದು ಎಲ್ಲಾ ಅನ್ನ ಸಂಗದ ಪ್ರಭಾವವು, ಈ ಹೊತ್ತು ಊಟ ಮಾಡಿದ ಅನ್ನವು ಏಳು ದಿವಸಗಳಲ್ಲಿ ಪುರುಷ ಶರೀರದಲ್ಲಿ ವೀರ್ಯವಾಗುತ್ತದೆ. ಸ್ತ್ರೀಯಳ ಶರೀರದಲ್ಲಿ ಅದೆ ಅನ್ನವು ರಕ್ತವಾಗುತ್ತದೆ. ಇದಕ್ಕೆ ಕಾರಣವೇನೆಂದರೆ ಅನ್ನವು ಊಟ ಮಾಡಿದ ಮೇಲೆ ಪುರುಷರ ಬಲಭಾಗಕ್ಕೆ ಬೀಳುತ್ತದೆ. ಅಲ್ಲಿ ಸೂರ್ಯನು ಅಭಿಮಾನಿಯಾಗಿರುವುದರಿಂದ ಅಲ್ಲಿ ಶುಭ್ರವಾದ ಶುಕ್ಲವಾಗುತ್ತದೆ. ಸ್ತ್ರೀಯರಲ್ಲಿ ಎಡಭಾಗಕ್ಕೆ ಬೀಳುತ್ತದೆ. ಅಲ್ಲಿ ಚಂದ್ರನು ಅಭಿಮಾನಿಯಗಿರುವುದರಿಂದ ಶುಭ್ರವಾಗದೆ ಕೆಂಪು ಬಣ್ಣದ ಶೋಣಿತವಾಗುತ್ತದೆ. ಬಳಿಕ ತಂದೆ ತಾಯಿಗಳು ಒಂದುಗೂಡುವುದರಿಂದ ರೇತೊ ರಕ್ತ ಒಂದಾಗಲು ಈ ತೋರುವ ಸ್ಥೂಲ ಶರೀರವು ಜೀವನಿಂದ ಸಹಿತವಾಗಿ ಉತ್ಪನ್ನವಾಗುವುದು. ಆದರೆ ಜೀವನು ಕರ್ಮಾನುಗುಣದಿಂದ ಗರ್ಭಕ್ಕೆ ಪ್ರವೇಶವಾಗುವನು. ಸ್ತ್ರೀಯಳ ರುಧಿರವು ಅಧಿಕವಾದರೆ ಹೆಣ್ಣು ಹುಟ್ಟುವದು, ಪುರುಷ ವೀರ್ಯವು ಅಧಿಕವಾದರೆ ಗಂಡು ಹುಟ್ಟುವದು.

ಹಾಲಿನಲ್ಲಿ ಕುಂಕುಮವನ್ನು ಬೆರೆಸಲು ಯಾವ ರೂಪವಾಗುವದೋ ಆ ಪ್ರಕಾರ ಮೊದಲ ದಿವಸದಲ್ಲಿ ರೇತೋ ರಕ್ತಗಳಿಂದ ಕೂಡಿ ಕಲಲ ಭಾವವನ್ನು ಹೊಂದುತ್ತದೆ. ಐದು ದಿನಗಳಲ್ಲಿ ಬುರುಗಿನ

ರೂಪ ಹೊಂದುವುದು. ಏಳು ದಿನಗಳಲ್ಲಿ ಬುರುಗಿನಕ್ಕಿಂತ ಘಟ್ಟಿಯಾಗಿ ಆಕಾರವನ್ನು ಹೊಂದುತ್ತದೆ. ಹತ್ತು ದಿನಗಳಲ್ಲಿ ಅನ್ನದ ಉಂಡಿಯ ಆಕಾರವ ತಾಳುವುದು, 15 ದಿನಗಳಲ್ಲಿ ದುಂಡಾಕಾರವಾಗುವುದು. ಒಂದು ತಿಂಗಳಿಗೆ ಶಿರವು, ಎರಡು ತಿಂಗಳಿಗೆ ಎರಡು ಭುಜಗಳು, ಮೂರು ತಿಂಗಳಿಗೆ ಹೊಟ್ಟೆಯು, ನಾಲ್ಕು ತಿಂಗಳಿಗೆ ಪಾದ ಹಸ್ತ, ಮೊದಲಾದ ಸಕಲ ಅವಯವಂಗಳು ಉತ್ಪನ್ನವಾಗುತ್ತವೆ. ಐದನೆ ತಿಂಗಳಲ್ಲಿ ಕೂದಲುಗಳು ಹುಟ್ಟುತ್ತವೆ, ಆರು ತಿಂಗಳಲ್ಲಿ ದೇಹದಲ್ಲಿ ಎಲುಬುಗಳು, ಏಳು ತಿಂಗಳಲ್ಲಿ ಪ್ರಾಣಾದಿಗಳಲ್ಲಿ ಚಲನತ್ವ ಬರುತ್ತದೆ. ಎರಡನೆ ತಿಂಗಳಲ್ಲಿ ಆ ಕೂಸು ಗರ್ಭದಲ್ಲಿದ್ದುಕೊಂಡು ನಾನು ಈ ಸ್ಥಳದಲ್ಲಿ ವಾಸವಾಗಿರುವುದು ಏನು ಆಶ್ಚರ್ಯವು ಇನ್ನು ಇಲ್ಲಿಂದ ಬೇಗನೆ ಹೊರಟು ಹೋಗಬೇಕಾದರೆ ನನಗೆ ಮಾರ್ಗವು ಎಲ್ಲಿಯದು? ಹೀಗೆ ಆಲೋಚಿಸುತ್ತ ಭ್ರಾಂತಿಯಿಂದ ತನ್ನಲ್ಲಿ ತಾನೆ ಶೋಕ ಮಾಡುತ್ತಿರುವದು. ಒಂಬತ್ತು ತಿಂಗಳು ಪೂರ್ತಿ ಆಗಲು ಆ ಜೀವನಿಗೆ ಹಿಂದಿನ ಮುಂದಿನ ಈಗಿನ ಸಂಬಂಧವಾದ ಸಕಲ ವಿಷಯಗಳಲ್ಲಿ ಜ್ಞಾನವು ಸಂಭವಿಸುವುದು ಅವುಗಳನ್ನು ಸ್ಮರಿಸಿ ಸ್ಮರಿಸಿ ಇವುಗಳು ದಃಖಗಳು ಎಂದು ತಿಳಿದು ತನ್ನೊಳಗೆ ತಾನೆ ಮರಗುತ್ತಾನೆ.

ಜೀವನು ಗರ್ಭದಲ್ಲಿ ತಾನು ಹಿಂದಕ್ಕೆ ಅನೇಕ ಜನ್ಮಂಗಳಲ್ಲಿ ಹೆಂಡರು ಮಕ್ಕಳನ್ನು ಧನಾದಿಗಳನ್ನು ಬಿಟ್ಟು ಬಂದಿರುವುದನ್ನು ನೆನಿಸಿ ದುಃಖಿಸುತ್ತಿರುವ. ಇಷ್ಟಲ್ಲದೆ ಇನ್ನು ಮುಂದೆ ನಾನು ಈ ಗರ್ಭವನ್ನು ಬಿಟ್ಟು ಹೋದರೆ ಅನೇಕ ದುಃಖಗಳು ಕಾಯ್ದುಕೊಂಡು ಕೂತಿರುವವು. ಅದಕ್ಕಾಗಿ ಇಲ್ಲಿಂದ ಹೋಗಬಾರದೆಂದು ನಿಶ್ವೆಸಿ ಒಳಗೆ ಆಲೋಚಿಸುತ್ತ ಈ ದುಃಖವು ನನಗೆ ಸುಮ್ಮನೆ ಎಲ್ಲಿಂದ ಬಂದಿರುವದು ಎಂದು ಚಿಂತಿಸುತ್ತಿರಲು ಅದೃಷ್ಟವಶಾತ್ ಬೇರೊಂದು ಅವಸ್ಥೆಯೆ ತೋರಿದಂತೆ ವೈಷ್ಣವ ನಾಮಕವಾದ ಮಾಯೆ ತಕ್ಷಣದಲ್ಲಿಯೆ ಮುಟ್ಟಿ ಬಿಡುವದು. ನಂತರ ಪ್ರಸೂತ ವಾಯು ಆ ಕೂಸನ್ನು ಕೆಳಮುಖವಾಗುವಂತೆ ಚೆನ್ನಾಗಿ ಹೊಡೆಯುವರು. ಯಾವಾಗ ಕೆಳಮುಖವಾಯಿತೋ ಆಗ್ಗೆ ಜರಾಯುಜವೆಂಬ ಚೀಲವು ಹರಿದು ಹೋಗುವದು. ಯೋನಿ ಮಾರ್ಗದಿಂದ ರಕ್ತ ಪ್ರವಾಹವು ಆರಂಭವಾಗುವದು. ಅದರೊಡನೆ ಕೂಸು ಜಾರಿ ಹೊರಗೆ ಬರುವದು. ಬಂದನಂತರ ಆ ದೇಹವು ಅನ್ನ ನೀರುಗಳಿಂದ ಬೆಳೆದು ದೊಡ್ಡದಾಗುವುದು. ಆಗ ಆ ದೇಹವೆ ತಾನೆಂದು ಜೀವನು ತಿಳಿಯುತ್ತ ಹೋಗುತ್ತಾನೆ.

ಆ ಮೇಲೆ ಈ ದೇಹದಲ್ಲಿ ಗುಣಕರ್ಮ ಸಂಗದಿಂದ ಸರ್ವದುಃಖಗಳು ತೋರುವವು. ಅಂದರೆ ನರದೇಹವೆಂಬುದು ಜ್ಞಾನವಾನ ಜನ್ಮ, ಈ ಜನ್ಮದಲ್ಲಿ ಪುರುಷಾರ್ಥ ಜ್ಞಾನ ಸಿದ್ಧಿಸಲೇಬೇಕು. ಯಾವನು ಪರಮ ಪುರುಷಾರ್ಥದ ಲಾಭ ಮಾಡಿಕೊಂಡಿದ್ದಾನೆ, ಅದುವೆ ಧನಾತ್ಮ ಶರೀರ, ಅಂಥ ಶರೀರದಿಂದಲೆ ಪರಮಾರ್ಥ ತತ್ವ ಇದ್ದಕ್ಕಿದ್ದಂತೆ ಪ್ರಕಟವಾಗುವದು. ಅಲ್ಲಿಯೆ ನಿಸ್ಪೃಹ, ನಿರಾಶೆ, ನಿಜಜ್ಞಾನ, ನಿಜಾನಂದದ ವಾಸವಾಗಿರುವುದರಿಂದ ಅಂಥ ಮಹಾತ್ಮರುಗಳಿಂದ ಬಂದ ಬೋಧೆಯು ಮಾಯಿಕಜ್ಞಾನಕ್ಕೆ ಇಂಬು ಕೊಡದ್ದರಿಂದ ನಿಸ್ಸೀಮ ಭಾವ ನಿಜಜ್ಞಾನ ಸದ್ಭಕ್ತರಿಗೆ ಸಹಜ ಲಭ್ಯವಾಗುವುದರಿಂದ ತಾವು ಸದಾಚಾರ ಸದ್ಭಕ್ತಿಯಿಂದ ಶ್ರೀಗುರು ಸೇವೆ ಮಹಾಂತರ ಸೇವೆ ಸದ್ಭಕ್ತ ವೃಂದವು ಆಚರಿಸುವುದರಿಂದ ಮಹಾತ್ಮರ ಹೃದಯದಲ್ಲಿದ್ದ ಜ್ಞಾನಾಮೃತವು ಕರುಣಾರಸದ ಮೇರೆಗೆ ವೈಖರಿ ವಾಣಿಯ ಮೇರೆಗೆ ತಮ್ಮ ಸ್ವಾನುಭವದ ಸುಧೆಯೇ ಉಣಬಡಿಸುವುದರಿಂದ ಸರ್ವಸುಖ ತೋರುವದು ಎಂದು ವರ್ಣಿಸಿದ್ದಾಳೆ. ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣರ ಅನುಭಾವಸಂಗದಿಂದ ಆನು ಪರಮಸುಖಿಯಾಗಿ ಬದುಕಿದೆನಯ್ಯಾ ಪ್ರಭುವೆ ಅಂದರೆ ನಿಮ್ಮ ಶರಣರೆಂದರೆ ನೀವೆ ನಿಮ್ಮ ಸ್ವರೂಪ, ಅದು ಲಿಂಗ ಘನ, ಅಖಂಡೈಕರಸ ಅವರ ಅನುಭಾವವೆಂದರೆ ಅಖಂಡ ಸುಖ ಅಲ್ಲಿಯೆ

ಅಖಂಡ ಭಕ್ತಿ ಅಖಂಡಭಾವ ಅಖಂಡ ಜ್ಞಾನ ಸಂಗದಿಂದ ಆನು ಪರಮಸುಖಿಯಾಗಿ ಬದುಕಿದೆನಯ್ಯಾ ಎಂದು ಹರ್ಷಿಸಿದ್ದಾಳೆ.

65

**ಅಯ್ಯಾ ನಿಮ್ಮ ಅನುಭಾವಿಗಳ ಸಂಗದಿಂದ ಎನ್ನ ತನು ಶುದ್ಧವಾಯಿತ್ತು .**
**ಅಯ್ಯಾ ನಿಮ್ಮ ಅನುಭಾವಿಗಳು ಒರೆದೊರೆದು ಕಡಿ ಕಡಿದು ಅರೆದರದು ಅನುಮಾಡಿದ**
**ಕಾರಣ ಎನ್ನಮನ ಶುದ್ಧವಾಯಿತ್ತು. ಎನ್ನ ಸರ್ವ ಭೋಗಾದಿ ಭೋಗಂಗಳೆಲ್ಲ**
**ನಿಮ್ಮ ಶರಣರಿಗರ್ಪಿತವಾಗಿ ಎನ್ನ ಪ್ರಾಣ ಶುದ್ಧವಾಯಿತ್ತು .**
**ಎನ್ನ ಸರ್ವೇಂದ್ರಿಯಗಳೆಲ್ಲವು ನಿಮ್ಮ ಶರಣರ ಪ್ರಸಾದಕೊಂಡ ಕಾರಣ**
**ಎನ್ನ ಸರ್ವಾಂಗ ಶುದ್ಧ ವಾಯಿತ್ತು . ನಿಮ್ಮ ಶರಣರಿಂತು ಎನ್ನ ನಾಗು ಮಾಡಿದ**
**ಕಾರಣ ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣರಿಗೆ ತೊಡುಗೆಯಾದೆನಯ್ಯ ಪ್ರಭುವೆ.**

**ತಾತ್ಪರ್ಯ** : ಅಯ್ಯಾ ನಿಮ್ಮ ಅನುಭಾವಿಗಳೆಂದರೆ ಚಿತ್‌ಸ್ವರೂಪರು, ನಿರ್ಭಾವಿಗಳು ಚಿನ್ಮಯಾನಂದರು ಆದುದರಿಂದ ಗಗನ ಸದೃಶರು. ಖಂಡಿತವಿಲ್ಲದ ಅಖಂಡರು ಜ್ಞಾನಾಮೃತರು.ಅಲ್ಲಿ ಇದು ಅಂಗ ಇದು ಲಿಂಗವೆಂಬ ವಿಭಾಗಕ್ಕಿಂಬಿಲ್ಲ ಸಂಶಯ ಸಂಕಲ್ಪವೆಂಬುದು ಮುನ್ನಿಲ್ಲ. ಆರು ಪ್ರಮಾದವಂತರು,ಅಪ್ರಮಾದವಂತರು ಅವರ ಅಂಗವೆ ಶ್ರೀಗುರು ಮಂತ್ರವಾದುದರಿಂದ ಕಂಗಳ ನೋಟ ಹಸ್ತ ಅಭಯ ಹಸ್ತ, ನಿರ್ಭಾವದ ನೆಲೆಯಿಲ್ಲದ ನಿಲುವು, ಮನವೆಂಬುದು ಮಹಾಲಿಂಗ ಏಕೆಂದರೆ ಅತೀತವಾದ ನಿಷ್ಕಳಂಕವಾದ ನಿಜಾನಂದದಲ್ಲಿಪ್ಪಗಮ್ಯರು ; ಅವರ ಸಂಗವೆಂಬುದು ಘನ ಲಿಂಗದ ಸಂಗ. ಚೆನ್ನಮಲ್ಲಿಕಾರ್ಜುನನ ಸಂಗ, ಅವನ ನಿಜ ನಿವಾಸವೆ ಅವರಾದುದರಿಂದ ಅಪ್ರಮಾಣರು ಅಚಿಂತ್ಯರು ಅವರಾದುದರಿಂದ ಅವರ ಭಾವ, ಭಾವಾಭಾವದಿಂದುಕ್ತವಾದುದಲ್ಲ ಕೂಡಿದುದಲ್ಲ ಅಗಲಿದುದಲ್ಲ ಕಲ್ಪಿತನೆಂಬುದಿಲ್ಲ ಕಲ್ಪನೆಯಿಲ್ಲ ಕುರುಹು ಇಲ್ಲ ಕೂನವು ಇಲ್ಲ ಪ್ರಿಯವಾದುದಿಲ್ಲ ಅಪ್ರಿಯವಾದುದಿಲ್ಲ ಶೋಕ ಮೋಹ ಮುನ್ನಿಲ್ಲ ಗಗನದಂತಿರುವ ಜ್ಞಾನಾಮೃತದ ಪರಮಾನುಭವಿಗಳ ಸಂಗದಿಂದ ಎನ್ನ ತನು ಶುದ್ಧವಾಯಿತ್ತು .

ಎಲ್ಲಿ ಅಜ್ಞಾನವಿದೆ ಅಲ್ಲಯೆ ಅಹಂ ಇದೆ. ಇದಂ ರೂಪ ಜಗವು ಇದೆ. ಅಲ್ಲಿಯೆ ಅಭಾಸನ ತ್ರಿಪುಟ ರೂಪ ಜಗವು ಸತ್ಯವಾಗಿದೆ. ಎಲ್ಲಿ ಜಗದ ಸತ್ಯತ್ವ ಭಾವನೆ ಇದೆ ಅಲ್ಲಿ ಬೇಧ ಜ್ಞಾನವೂ ಇದೆ ಅದಕ್ಕಾಗಿ ಆವರಣವುಂಟು. ನಿರಾವರಣ ಸ್ವರೂಪನಿಗೆ ಕುರುಹಾವುದು ಕೂನವಾವುದು ; ಅಲ್ಲಿ ನಡೆಗಿಂಬಿಲ್ಲ ನುಡಿಗಿಂಬಿಲ್ಲ. ಪ್ರಮಾಣವೆಂಬುದು ಮುನ್ನಿಲ್ಲ , ಚಿನ್ಮಯ ರೂಪಿ ಶರಣರು ಒರೆದೊರೆದು ಕಡಿ ಕಡಿದು ಅರೆದರೆದು ನೋಡಿ ತಮ್ಮಂತೆ ಯನ್ನನ್ನು ಮಾಡಿದ ಕಾರಣ ಎನ್ನ ಮನ ಶ್ಧುವಾಯಿತ್ತು .

ಎನ್ನ ಮನ ಶುದ್ಧವಾದ ಘನವನೇನೆಂಬೆ ? ನನಗೆ ಆದಿಯೆಂಬುದಿಲ್ಲ , ಅನಾದಿಯೆಂಬುದಿಲ್ಲ, ಆಧಾರವೆಂಬುದಿಲ್ಲ, ಹಮ್ಮು ಬಿಮ್ಮು ಇಲ್ಲ, ಸಾಕಾರ ನಿರಾಕಾರವೆಂಬುದಿಲ್ಲ, ಅರಿತೆನೆಂಬುದಿಲ್ಲ ಅರಿಯನೆಂಬುದಿಲ್ಲ, ಲಕ್ಷ್ಯವೆಂಬುದಿಲ್ಲ ಪದ ಸಂದಿ ವಿಚಾರವಿಲ್ಲ, ಕಂಡೆನೆಂಬುದಿಲ್ಲ,ಕಾಣೆನೆಂಬುದಿಲ್ಲ ನಿರಂತರವಾಗಿರುವ ಮಂಗಳಮಯವೆ ನನ್ನ ಘನಾಂಗವಾದುದರಿಂದ ಈ ನನ್ನ ಶರೀರ ರೂಪಿ ಸರ್ವ ಭೋದಾದಿಭೋದಗಳೆಲ್ಲ ನಿಮ್ಮ

ಶರಣರಿಗರ್ಪಿತವಾಗಿ ಎನ್ನ ಪ್ರಾಣ ಶುದ್ಧವಾಯಿತ್ತು, ಎನ್ನ ಪ್ರಾಣ ಲಿಂಗವಾಯಿತ್ತು, ಎನ್ನ ಸರ್ವೇಂದ್ರಿಯಗಳೆಲ್ಲವು ನಿಮ್ಮ ಶರಣರ ಶುದ್ಧಪ್ರಸಾದ ಸಿದ್ಧ ಪ್ರಸಾದ ಪ್ರಸಿದ್ಧ ಪ್ರಸಾದ ಮಹಾ ಪ್ರಸಾದವ ಕೊಂಡುದುದರಿಂದ ಎನ್ನ ಸರ್ವಾಂಗ ಶುದ್ಧವಾಯಿತ್ತು. ಸಮಸ್ವರೂಪವಾಗಿರುವ ಪರಮಸತ್ಯದರಿವೆ ಶುದ್ಧ ಪ್ರಸಾದ.

ಅಂದರೆ ತಾನು ಅರು ಸ್ವರೂಪ. ಜಗವು ಅರು ಸ್ವರೂಪ, ದೇವತಾ ದೈತ್ಯರು ಅರು ಸ್ವರೂಪ ಬ್ರಹ್ಮಾದಿಗಳು ಅರು ಸ್ವರೂಪ ವೇದ ವೇದಾಂಗಗಳು ಅರು ಸ್ವರೂಪ. ಅಚ್ಯುತವು ಒಳ ಹೊರಗೆನ್ನದೆ ತುಂಬಿದುದು ಅಪಾರವು, ಅಂದು ಇಂದು ಎಂದೆಂದೂ ಇದ್ದಂತಿರುವ ನಿರ್ವಿಕಾರವು ನಿರಂತರವಾಗಿ ಬೆಳಗುವ ಸ್ವಯಂ ಜ್ಯೋತಿಯೆಂಬುದೇ ಸಿದ್ಧ ಪ್ರಸಾದ ಪ್ರಸಿದ್ಧ ಪ್ರಸಾದವು. ಇದು ಚಿದಾಕಾಶವು ಚಿದ್ಘನವು. ಇಲ್ಲಿ ಅಂಗ ಲಿಂಗ ಕೂಡಿದುದಲ್ಲ ಬೇರಾದುದಲ್ಲ ಒಂದೆರಡೆಂಬ ಗಜಿಬಿಜಿಯಲ್ಲಿ ಇದು ಪೂರ್ಣ ಪ್ರಸಾದವಾದುದರಿಂದ ಪ್ರಸಿದ್ಧ ಪ್ರಸಾದ ಮಹಾ ಪ್ರಸಾದವೆಂಬುದು ಅನಾಮ, ಅಚಿಂತ್ಯ ಅಪಾರ ಅದ್ವಿತೀಯ ಘನವಾದುದರಿಂದ ಇಲ್ಲಿ ನಡೆಗೆಡೆಯಿಲ್ಲ ಭಾವಕ್ಕಿಂಬಿಲ್ಲ ಇದರ ಯತಾರ್ಥ ಇರುವೆ ಮಹಾಪ್ರಸಾದ ಘನ ಪ್ರಸಾದ ಕೊಂಡುದುದರಿಂದ ಎನ್ನ ಸರ್ವಾಂಗ ಶುದ್ಧವಾಯಿತ್ತು ನಿಮ್ಮ ಶರಣರು ನನ್ನನ್ನು ಹಾಗೆ ಮಾಡಿದ ಕಾರಣ ಚೆನ್ನಮಲ್ಲಿಕಾರ್ಜುನ ನಿಮ್ಮ ಶರಣರಿಗೆ ಆಭರಣವಾದೆನಯ್ಯಾ.

**66**

**ಕರ್ಮವೆಂಬ ಕದಳಿ ಎನಗೆ, ಕಾಯವೆಂಬ ಕದಳಿ ನಿಮಗೆ, ಮಾಟವೆಂಬ**
**ಕದಳಿ ಬಸವಣ್ಣಂಗೆ, ಭಾವವೆಂಬ ಕದಳಿ ಚೆನ್ನಬಸವಣ್ಣಂಗೆ, ಬಂದ ಭಾವ**
**ಸಲೆ ಸಂದಿತ್ತು ಎನ್ನಂಗದವಸಾನವ ಹೇಳಾ ಚೆನ್ನಮಲ್ಲಿಕಾರ್ಜುನ.**

**ತಾತ್ಪರ್ಯ :** ಅಕ್ಕನ ಕರ್ಮವೆಂಬ ಕದಳಿಯ ನೋಡಿರೆ? ಇದು ನಿರ್ವಾಸನದ ಕದಳಿ. ಅಂದರೆ ದೇಹವಾಸನೆ, ಲೋಕವಾಸನೆ, ಶಾಸ್ತ್ರವಾಸನೆಗಿಂಬು ಕೊಡದ ಕದಳಿ. ಇದು ನಿರ್ವಿಷಯದ ಕದಳಿ, ತಾನಾರೆಂದು ಯತಾರ್ಥವರಿತ ಅರುವಿನ ಕದಳಿ. ಇದು ಸತಿ ಪತಿ ಎಂಬ ಲಿಂಗಾಂಗ ಸಮರಸ ಕೂಟದ ಕದಳಿ. ಬಸವಣ್ಣನ ಮನೆಯ ಮಗಳಾಗಿ ಬದುಕಿದುದು ಕರ್ಮವೆಂಬ ಕದಳಿ. ಅಲ್ಲದೆ ತನ್ನ ಕರುಣೆಯ ಭಕ್ತಿ ಪ್ರಸಾದ ನೀಡಿದುದು ಕರ್ಮವೆಂಬ ಕದಳಿ, ಚೆನ್ನಬಸವಣ್ಣನ ತೊತ್ತಿನ ಮಗಳಾದುದು ಕೂಡ ಕರ್ಮವೆಂಬ ಕದಳಿ ಅಲ್ಲವೆ? ಪ್ರಭುದೇವರ ತೊತ್ತಿನ ಮಗಳಾದುದು ಕರ್ಮವೆಂಬ ಕದಳಿ ಅಲ್ಲವೆ? ಸಿದ್ಧರಾಮ ಶಿವಯೋಗಿಯ ಶಿಶುವಾದುದು ಕೂಡ ಕರ್ಮವೆಂಬ ಕದಳಿಯು, ಇದು ಪ್ರಾಣ ಪ್ರಸಾದವ ಸಾಧಿಸಿಕೊಟ್ಟುದು ಕೂಡ ಕರ್ಮವೆಂಬ ಕದಳಿ, ಇಂತೀ ಅಸಂಖ್ಯಾತರೆಲ್ಲರೂ ತಮ್ಮ ಕರುಣದ ಕಂದನೆಂದು ತಲೆದಡಹಿ ರಕ್ಷಿಸುವುದರಿಂದ ಚೆನ್ನಮಲ್ಲಿಕಾರ್ಜುನನ ಪಾದಕ್ಕೆ ಯೋಗ್ಯಳಾದುದು ಇದು ನಿಮ್ಮದಯ್ಯಾ ಇದುವೆ ಕರ್ಮವೆಂಬ ಕದಳಿ ಎನಗೆ.

**ಪ್ರಭುವೆ ಕಾಯವೆಂಬ ಕದಳಿ ನಿಮಗೆ :** ಪ್ರಭುವಿನ ಕಾಯ ಕೈವಲ್ಯ ಕಾಯ,ಕಾಯ ಬೇರಲ್ಲ, ಕೈವಲ್ಯ ಬೇರಲ್ಲ, ಸಚ್ಚಿದಾನಂದ ಬೇರಲ್ಲ, ಕಾಯ ಬೇರಲ್ಲ ಅರುವು ಬೇರಲ್ಲ,ಕಾಯು ಬೇರಲ್ಲ ನಿಃಶಬ್ದ ಬೇರಲ್ಲ, ಕಾಯ ಬೇರಲ್ಲ. ನುಡಿಗೆಡೆಗೊಡದೆ ಘನವೆ ತಾನಾದುದರಿಂದ ಕಾಯವೆಂಬ ಕದಳಿ ನಿಮಗೆಂದು ಅಕ್ಕ ಹೇಳಿದುದು. ಮಾಟವೆಂಬ ಕದಳಿ ಬಸವಣ್ಣಂಗೆ ಬಸವಣ್ಣನ ಮಾಟ ಅಖಂಡ

ಮಾಟ ಮರವರವು ಒಂದೆ ಮಾಡಿದ ಮಾಟ, ಬೆಳಕು ಕತ್ತಲೆಯ ನೊಂದು ಮಾಡಿದ ಮಾಟ, ಶಿವ ಶಕ್ತಿಯನೊಂದು ಮಾಡಿದ ಮಾಟ, ರೂಪಾರೂಪವನೊಂದು ಮಾಡಿದ ಮಾಟ, ಬಂಧ ಮೋಕ್ಷಕ್ಕಿಂಬು ಕೊಡದ ಮಾಟ, ಸಮಸ್ತ ಕತ್ತಲೆಯ ಮಸಕ ಕಳೆದಿಪ್ಪ ಅಕಲಂಕ ಮಾಟ, ಈ ಅಕಲಂಕ ಮಾಟವೆ ನನ್ನ ಖಂಡ ದೃಷ್ಟಿ ಕೆಡಿಸಿದ ಘನ ನೋಡಾ. ಇದು ಕಾಂಡತ್ರಯ ಕಾಣದ ಮಾಟ, ಉಪಮಾತೀತ ಮಾಟ, ಇದು ಅರುವಿನ ಮಾಟ, ಅರುವು ಜ್ಞಾನಾಮೃತ ಜ್ಞಾನಾನಂದ ಅರಿಯದರುವು ಕೂಡದ ಕೂಟ ಮಾಡದ ಮಾಟ ಅಗಲಲಿಲ್ಲದ ಘನ ಮಾಟವೆಂಬ ಕದಳಿ ಬಸವರಸನದು ನೋಡಾ.

**ಭಾವವೆಂಬ ಕದಳಿ ಚೆನ್ನಬಸವಣ್ಣಂಗೆ :** ಚೆನ್ನಬಸವರಾಜ ದೇವರ ಭಾವವೆಂಬ ಕದಳಿ ಇದು ಸಕಲಕ್ಕೂ ಸಮಸ್ವರೂಪವಾದ ಕದಳಿ, ಇದು ತುಂಬಿ ತುಳುಕದ ಕದಳಿ, ನಿರಂತರ ಪರಿಪೂರ್ಣ ಪರಾತ್ಪರ ಭಾವದ ಕದಳಿ, ತನಗಿಂತನ್ಯವೆ ಕಾಣದ ಕದಳಿ, ಸತ್ಯಾಸತ್ಯ ವಿಭಾಗ ಮಾಡದ ಕದಳಿ, ಕಾರ್ಯ ಕಾರಣಂಗಳ ಕಾಣದ ಕದಳಿ, ನಿಸ್ಸೀಮ ಭಾವದ ಕದಳಿ, ದ್ವಿಪದ ಕಾಣದ ಕದಳಿ, ಸಂಗ ನಿಸ್ಸಂಗ ಸಮವಾದ ಕದಳಿ, ಮೋಹ ನಿರ್ಮೋಹ ಸಮವಾದ ಕದಳಿ, ಉದಯಾಸ್ತ ಕಾಣದ ಕದಳಿ, ಗುರುಲಿಂಗ ಜಂಗಮ ಒಂದಾದ ಕದಳಿ, ನಿಜದಿರುವಿನ ಕದಳಿ, ಇದು ಚೆನ್ನಬಸವಣ್ಣಂಗೆ ತಮ್ಮ ತಮ್ಮಗಳ ಭಾವವಿದ್ದದೆ ಅದುವೆ ಹೊರಬಂದಿದೆ ಕೊನೆಗೆ ಸಕಲರ ಭಾವ ಒಂದಾಗಿದೆ, ಸಮರಸವಾಗಿದೆ, ಸಾಕ್ಷಾತ್ಕಾರವಾಗಿದೆ. ಘನತ್ವದಿಂದ ಪ್ರಕಾಶಮಾನವಾಗಿ ಪ್ರಕಾಶಿಸುತ್ತಿದೆ. ಅಂದರೆ ತಾನೆ ತಾನಾಗಿ ಬೆಳಗುತ್ತಿದೆ ಆದರೂ ಈ ಶರೀರದ ಅವಸಾನ ಸ್ಥಾನವಾವುದು ಹೇಳು ಪ್ರಭುವೆ ಎಂದು ಅಕ್ಕ ಪ್ರಾರ್ಥಿಸಿದ್ದಾಳೆ.

**67**

**ಕಾಯವುಳ್ಳನ್ನಕ್ಕ ಶರಣರ ಸಂಗದಿಂದ ಅರಿಯಬೇಕು.**
**ಜೀವವುಳ್ಳನ್ನಕ್ಕ ಅರುವಿನ ಮುಖದಿಂದ ಹರಿಯಬೇಕು.**
**ಅರುವನ್ನ ಬರ ಗುಹೇಶ್ವರ ನೆಂಬ ಕುರುಹಾಯಿತ್ತು .**

**ತಾತ್ಪರ್ಯ :** ಕಾಯವುಳ್ಳವರೆಂದು ಅನಿಸಿದಲ್ಲಿ ಈ ಕಾಯದ ಘನತ್ವ ಶರಣರ ಸಂಗದಿಂದ ಅರಿಯಬೇಕು. ಈ ಕಾಯ ಘನ ಕಾಯ, ಚಿತ್ಕಾಯ, ಇದು ಘನಾಂಗ, ಲಿಂಗಾಂಗ, ಇದು ಸಚ್ಚಿದಾನಂದಕಾಯ, ಅನಾಮವಾಗಿರುವ ನಿರ್ವಾಣ ಕಾಯ, ಕೈವಲ್ಯದ ಕಾಯ. ಲೋಕ ನೋಡುವ ದೃಷ್ಟಿಯಿಂದ ನೋಡಿದರೆ ಈ ಕಾಯದ ಘನತ್ವ ಗೊತ್ತಾಗದು. ಇದರ ಘನತ್ವ ಚರ್ಮದೃಷ್ಟಿಗೆ ನಿಲುಕದು, ಆತ್ಮಾನಾತ್ಮಾ ವಿಭಾಗರೂಪ ವಿಚಾರವಂತರಿಗೂ ಗೊತ್ತಾಗದು. ಈ ನಿರ್ವಾಣ ಕಾಯದ ಮಹತ್ವ ಗೊತ್ತಾಗಬೇಕಾದರೆ ನಿರ್ವಾಣನಿಲಯದ ನಿಜಾನಂದರಿಂದ, ಶ್ರೀಗುರುವಿನಿಂದ, ಶಿವಯೋಗಿಗಳಿಂದ, ನಿರಾಭಾರಿ ಚಿನ್ಮಯ ರೂಪಿ ಜಂಗಮದೇವನಿಂದ, ತಿಳಿಯುವದು. ಏಕೆಂದರೆ ನಾಮ ರೂಪಂಗಳ ಸತ್ಯತ್ವ ಭ್ರಾಂತಿಯುಕ್ತ ಜ್ಞಾನದಿಂದಲೂ ತಿಳಿಯದು.ಜಗತ್ತು ಬೇರೆ ಜೀವ ಬೇರೆಂಬ ಬೇಧವಾದಿಗಳಿಂದಲೂ ತಿಳಿಯದು.ಬ್ರಹ್ಮಸತ್ಯ ಜಗತ್ತು ಮಿಥ್ಯೆವೆಂಬ ವಿಭಾಗ ದೃಷ್ಟಿಯುಳ್ಳ ಜ್ಞಾನಿಗಳಿಗೂ ತಿಳಿಯದು.ಈ ಕಾಯ ತಿಳಿಯಲು ಬೇಕಾಗಿರುವದು ಶರಣರ ಸಂಗದಿಂದ. ಶರಣರ ಸಂಗವೆಂದರೆ ಲಿಂಗಾಂಗಸಮರಸಜ್ಞಾನ,ಅಖಂಡ ಜ್ಞಾನ, ಈ ಸಂಗವೆ ಶರಣರ ಸಂಗ. ನಿಸ್ಸೀಮವು ಸೀಮೆಯುಳ್ಳದ್ದಾಗುವದೆ. ಇರುವುದೊಂದೆ ಚಿನ್ಮಯವಿರುವಲ್ಲಿ ಅಲ್ಲಿ ಭೇದವಾವುದು? ಅಭೇದವಾವುದು? ಕ್ಷರವಾವುದು ಅಕ್ಷರವಾವುದು? ಇದ್ದುದು ಇದ್ದಕ್ಕಿದ್ದಂತಿರುವದರಿಂದ ಅದು

ಏಕಮೇವಾದ್ವಿತೀಯವಾದ ಪರಮಸತ್ಯ ನೋಡಾ. ಜೀವತ್ವವುಳ್ಳವ ನಾದಲ್ಲಿ ಅರುವಿನ ಘನತ್ವ ತಿಳಿದು ಅದನ್ನು ಪರಿಹರಿಸಿಕೊಳ್ಳಬೇಕು. ಏಕೆಂದರೆ ಇಲ್ಲದ ಜೀವ ಭಾವ ಉಂಟಾದಲ್ಲಿ ಅರುವಿನ ಮುಖದಿಂದ ನೋಡು. ಅಂದರೆ ತಾನೆ ಅರುಸ್ವರೂಪನೆಂದು ಅರುಸ್ವರೂಪನಾಗಿ ತನ್ನೊಳ ಈ ಜೀವ ರೂಪ ಚೇತನ. ಇದು ಇದ್ದುದೊ ಇಲ್ಲದುದೊ? ಭಾವರೂಪವೊ ಅಭಾವರೂಪವೊ? ಅಥವಾ ಭಾವಾತೀತವೊ ಜ್ಞಾನಯುಕ್ತವೊ ಜ್ಞಾನಾತೀತವೊ? ಜಡವೊ ಅಜಡವೊ? ಎಂಬುದು ಅರುವಿನ ಮುಖದಿಂದ ಸರಿಯಾಗಿ ತಿಳಿದರೆ ಅದರ ಸಂದು ಸಂಶಯ ಹರಿವುದು.

ಇದ್ದುದೊಂದ! ಆಕಾಶದೊಳ್ ಘಟಾಕಾಶ ಮಠಾಕಾಶ ಮೇಘಾಕಾಶ ಕಾಣಲುಂಟೆ? ಇರುವುದೊಂದೆ ಅಖಂಡಾತ್ಮನೊಳ್ ಜೀವಾತ್ಮ ಅಂತರಾತ್ಮ, ಪರಮಾತ್ಮನೆಂದರಸಲುಂಟೆ? ಇರುವುದೊಂದೆ ನಿಃಕಲ ಲಿಂಗದಲ್ಲಿ ಮಹಾಲಿಂಗ,ಪ್ರಾಣಲಿಂಗ, ಇಷ್ಟಲಿಂಗ, ಅಂಗವೆಂದು ವಿಭಾಗ ಮಾಡಿ ಅರಸುಲುಂಟೆ ಇದ್ದ ನಿರಂತರವಾಗಿರುವ ಸರ್ವಮಂಗಳಮಯ ತತ್ವ ಇದ್ದಂತಿರುವಾಗ ಗುಣಯುಕ್ತ ಆಭಾಸರ ಕಲ್ಪಿಸಬಹುದೆ? ಅಲ್ಲಿ ಅಂಗವಾವುದು ಲಿಂಗವಾವುದು ಅಖಂಡವು ಖಂಡವಾಗುವುದೆ? ಇದ್ದುದು ಇದ್ದಕ್ಕಿದ್ದಂತಿರುವ ನಿಷ್ಕಳಂಕ ಲಿಂಗ ; ಈ ಘನಲಿಂಗವ ಖಂಡ ಖಂಡವಾಗಿ ಕಾಣುವುದೆ ತನ್ನಯ ಮರವು ; ಒಂದಾಗಿ ಕಾಣುವುದೆ ತನ್ಮಯ ಅರಿವು.ತಾನೆಂಬುದೆ ಅರಿಯದರವು.

ಅಲ್ಲಿ ಅನೇಕವೆಂಬುವದಕ್ಕಿಂಬಿಲ್ಲ ಏಕವೆಂಬುವದಕ್ಕಿಂಬಿಲ್ಲ , ಸಂಗವಿಲ್ಲ ನಿಸಂಗವಿಲ್ಲ, ಇದ್ದಂತಿರುವ ಅಖಂಡಾತ್ಮನೊಳ್ ಕಾಣಿಸುವ ಜಗವು ಮಿಥ್ಯೆ ಕಾಣುವ ಆತ್ಮ ಸತ್ಯವೆಂದು ವಿಭಾಗಿಸುವುದೆ ತನ್ನಯ ಮರವು. ಸತ್ಯಮಿಥ್ಯೆಗಳ ಕಾಣದೆ ತನ್ನನ್ನೆ ಕಾಣುವದೆ ಯತಾರ್ಥ ಅರಿವು. ಈ ಅರುವಿನ ಅರುವಾದಲ್ಲಿ ಅಲ್ಲಿ ವಿಭಾಗಕ್ಕೆಡೆಯಿಲ್ಲ, ಮರೆತುದಿಲ್ಲ, ಅರಿತುದಿಲ್ಲ, ತಾನೊಂದೆ ಪರಮ ಸತ್ಯಸ್ವರೂಪ ವೆಂಬುದು ತನ್ನಿಂದ ತನಗದು ತಿಳಿವುಡೆ ಜೀವ ಭಾವದ ಭಂಗ ಸ್ವಭಾವತಃ ಹರಿವುದು. ಎಲ್ಲಿಯವರೆಗೆ ಅರುವಿನ ಅಹಂತ್ವವುಳ್ಳವನಾಗಿರುವನು.ಅಲ್ಲಿಯವರೆಗೆ ಮಹಾತ್ಮರ ಬೋಧ ಒಂದು ಸಂಕೇತವಾಗಿದೆ. ಶ್ರೀಗುರುವಿನ ಕರುಣೆಯೂ ಒಂದು ಸಂಕೇತವಾಗಿದೆ ಸೀಮೆಯುಳ್ಳದ್ದಾಗಿದೆ.ಯಾವಾಗ ಅರುವಿನ ಅಹಂತ್ವ ತನ್ನೊಳ್ ಇಲ್ಲವಾಯಿತೊ. ಆಗ ವಾಙ್ಮನೋತೀತ ತಾನೆ ಶೃತಿಗಗೋಚರ ತಾನೆ, ಅದುವೆ ಮಹಾತ್ಮರ ಇರವು, ಅದುವೆ ಅವರ ಕರುಣಾಂಬುಧಿ. ಇದರ ಸಾಕ್ಷಾತ್ಕಾರವಾದಾಗ ಗುಹೇಶ್ವರನೆಂಬ ಲಿಂಗವು ಕುರುಹು ಅಲ್ಲ , ಅದು ಅಚಿಂತ್ಯ ಘನ. ಅದನ್ನು ಯಾವ ಭಾಷೆಯಿಂದಲೂ ಹೇಳಲು ಬರದು. ಕಾರಣ ಇದ್ದಂತಿರುವ ನಿಲವು, ನಿರ್ವಾಣದ ನಿಲವು ಘನಕ್ಕೆ ಘನವಾದುದರಿಂದ ಅಪ್ರಮಾಣವು ತಾಯೆ ಇದಕ್ಕೆ ಅಕ್ಕಗಳ ಬಿನ್ನಹ.

**68**

**ಲಿಂಗಸುಖ ಸಂಗದಲ್ಲಿ ಮನವೇದ್ಯವಾಯಿತ್ತು ಇನ್ನೆಲ್ಲಿಯಯ್ಯಾ ?**
**ಎನಗೆ ನಿಮ್ಮಲ್ಲಿ ನಿರವಯವು ಇನ್ನೆಲ್ಲಿಯಯ್ಯಾ?**
**ನಿಮ್ಮಲ್ಲಿ ಕೂಡುವದು ಪರಮನ ಸುಖ ಪರಿಣಾಮ,**
**ಮನ ಮೇರೆದಪ್ಪಿ ನಾನು ನಿಜ ನೈದುವ ಠಾವ ಹೇಳಾ ಚೆನ್ನಮಲ್ಲಿಕಾರ್ಜುನ.**

**ತಾತ್ಪರ್ಯ** : ತಿಳಿಯಲು ಯೋಗ್ಯವಾದುದು ಲಿಂಗಸುಖ ವಲ್ಲವೆ? ಈ ಸುಖದಸಂಗ ಅದಾವ ಮನಸ್ಸಿಗೆ ಪ್ರಾಪ್ತವಾಗುವದೋ ಆ ಮನ,ಲಿಂಗಮನ, ಲಿಂಗಸುಖದ ಸಂಗ ಮನ, ಅಂಥ

ಘನಸುಖ ಪಡೆಯದ್ದರಿಂದ ಮನವು ಆವುದಾದರೊಂದು ಕಾರ್ಯದಲ್ಲಿ ಪ್ರವೃತ್ತಿ ಪರವಾಗಿರುತ್ತದೆ. ಅದು ಪ್ರವೃತ್ತಿ ಮಾರ್ಗದಲ್ಲಿಯಾದರೂ ಪ್ರವೃತ್ತಿವುಳ್ಳದ್ದಾಗಿರುವದು.ಇಲ್ಲವೆ ನಿವೃತ್ತಿ ಮಾರ್ಗದಲ್ಲಿಯಾದರೂ ಪ್ರವೃತ್ತವಾಗಿರುತ್ತದೆ . ಆದರೂ ಮನಸ್ಸಿನ ಪ್ರವೃತ್ತಿ ಫಲದಾಯಕವಾದ ಲಿಂಗಸುಖದ ಸಂಗ ಅದಕ್ಕೆ ದೊರೆಯದ್ದರಿಂದ ಅದರ ಹಲುಬಾಟ ಕಡಿಮೆಯಾಗಲಿಲ್ಲ. ಏಕೆಂದರೆ ತಿಳಿಯಬೇಕಾದದ್ದು ತಿಳಿಯಲಿಲ್ಲ,ಪಡೆಯಬೇಕಾದದ್ದು ಪಡೆಯಲಿಲ್ಲ,ಅಸಾಧ್ಯವ ಸಾಧಿಸಲಿಲ್ಲ.ಅದಕ್ಕಾಗಿ ಲಿಂಗಸುಖ ಸಂಗದ ಘನತ್ವ ಮನಸ್ಸಿಗೆ ವೇದ್ಯವಾಗಲಿಲ್ಲ.ಯಾವಾಗ ಮನವು ತಿಳಿಯಬೇಕಾದ ಲಿಂಗತತ್ವವನ್ನು ತಿಳಿಯುವುದೋ ಆಗ ಲಿಂಗಸುಖ ಮನಸ್ಸಿಗೆ ವೇದ್ಯವಾಗುವುದು. ಈ ಸುಖ ಸವೆಯದ ಸುಖ, ಸಾಕೆನಿಸದ ಸುಖ, ಬೇಸರವಾಗದ ಸುಖ, ಕೆಡದ ಸುಖ, ಅಖಂಡ ಸುಖ, ಅಕ್ಷಯ ಸುಖ, ಇದು ತನ್ನದೆಂಬುದು ಮರೆತವರ ಸುಖ. ತನು ನಷ್ಟ, ಮನ ನಷ್ಟ, ನೆನಹು ನಷ್ಟ, ಭಾವ ನಷ್ಟ, ಜ್ಞಾನ ನಷ್ಟವಾದ ಸುಖ. ಇದುವೆ ತಿಳಿಯಬಹುದಾದ ಲಿಂಗ ಸುಖ ಸಂಗದಲ್ಲಿ ಮನ ವೇದ್ಯವಾಯಿತ್ತು . ಇಂಥ ಪರಮಾನಂದವೆ ನನಗೆ ಕರಗತವಾಗದಿದ್ದ ಮೇಲೆ ಇನ್ನೆಲ್ಲಿಯಯ್ಯ ಎನಗೆ ನಿಮ್ಮಲ್ಲಿ ನಿರವಯವು. ಎನಗೆ ಮೇರೆದಪ್ಪಿದ ಘನವು ಇದರ ಸಾಕ್ಷಾತ್ಕಾರ ಹೇಗೆ ಹೇಳಾ ಚೆನ್ನಮಲ್ಲಿಕಾರ್ಜುನ ಎಂದು ಪ್ರಭುದೇವರನ್ನು ಸ್ತುತಿಸಿದ್ದಾಳೆ.

**69**

**ನೀನಾನೆಂಬುಭಯ ಸಂಗವಳಿದು ತಾನು ತಾನಾದ**<br>**ಮಹಾಗಿರಿಯ ತುಟ್ಟತುದಿಯ ಮೆಟ್ಟಿನೋಡಲು,**<br>**ಬಟ್ಟಬಯಲು ಕಾಣಬಹುದು ನೋಡಾ.**<br>**ಆ ಬಯಲ ಬೆರಸುವರೆ ತ್ರಿಕೂಟಗಿರಿಯೊಳಗೊಂದು**<br>**ಕಾಣಬಾರದ ಕದಳಿಯುಂಟು ನೋಡಾ.**<br>**ಕದಳಿಯ ಕಳೆದಲ್ಲಿ ಒಳಹೊಕ್ಕು ನೋಡಲು**<br>**ತೊಳಗಿ ಬೆಳಗುವ ಜ್ಯೋತಿಯ ಕೇಳಾ, ನಡೆಯಲ್ಲಿಗೆ ತಾಯೆ.**

**ತಾತ್ಪರ್ಯ :** ಅಕ್ಕ ಲಿಂಗೈಕ್ಯ ನಿಲುವ ಕೇಳಲು ಪ್ರಭು ಈ ಅಂಗದಲ್ಲಿಯೆ ಲಿಂಗದ ನಿಜನಿಲುವ ತೋರಿಸುತ್ತಾನೆ. ಪ್ರಭು ಎಂದರೆ ಸಾಮಾನ್ಯನೆ? ಅವಯವ ನಿರವಯ ಮಾಡುವ ಪ್ರಭು, ಕಲ್ಪಿತನನ್ನೆ ಅಕಲ್ಪಿತ ಮಾಡುವ ಅನುವ ನೋಡಿರೆ? ಬಗೆಯ ನೋಡಿರೆ? ಲಿಂಗೈಕ್ಯದ ನಿಲುವ ನೋಡಾ ತಾಯೆ, ಪದ್ಮಾಸನ ಇಲ್ಲವೆ ಸಿದ್ಧಾಸನ ಹಾಕು. ಚರ್ಮ ಚಕ್ಷುಗಳ ಮುಚ್ಚು . ಅದರ ಜೊತೆಯಲ್ಲಿ ನೀನಾನೆಂಬುಭಯ ಸಂಗ ವಾಸನೆ ತಿರಸ್ಕರಿಸು.ಆಗ ತಾನಾಗಿಯೆ ಲೋಕದೃಷ್ಟಿ ದೂರಾಗುವದು. ಎಲ್ಲಿ ಅಹಂ ಇದಮಾಕಾಶ ದೃಷ್ಟಿ ಇಲ್ಲ, ಅಲ್ಲಿ ಲೌಕಿಕ ಭಾವನೆ ಇಲ್ಲ. ಆಗ ತಾನೆ ತಾನಾದ ಅಜ್ಞಾನ ರೂಪ ಅಭಾವವೆಂಬ ಮಹಾಗಿರಿಯ ಕಾಣುವದು. ಆ ಅಭಾವ ರೂಪ ಮಹಾಗಿರಿಗೆ ಮಹತ್ವ ಕೊಡದೆ ಅಲ್ಲಿಯೆ ಭ್ರುಕುಟವೆಂಬ ತ್ರಿಕೂಟದಲ್ಲಿ ಏಕಾಗ್ರದಿಂದ ದೃಷ್ಟಿನಟ್ಟು ನೋಡು.ಆಗ ಪ್ರಕಾಶರೂಪ ಬಟ್ಟಬಯಲು ಕಾಣುವದು. ಆಗ ಪ್ರಕಾಶದೊಳ್ ಮನಮಗ್ನವಾಗಲು ಅಲ್ಲಿಯೆ ದಶವಿಧ ನಾದವುಳ್ಳ ಕದಳಿ ಉಂಟು. ಆ ದಶವಿಧ ನಾದಕ್ಕೆ ಮಹತ್ವ ಕೊಡದೆ ಮುಂದಕ್ಕೆ ನಡೆ. ಅಂದರೆ ಅದು ನಿನ್ನ ಸ್ವಯ ಪದವೆಂದು ತಿಳಿಯಬೇಡ. ಏಕೆಂದರೆ ಅದು ಪರಮಾಯಿಕ ಪ್ರಕಾಶ, ಉತ್ಪತ್ತಿ ಪ್ರಕಾಶ, ಕೆಡುವ ಪ್ರಕಾಶ,

ಅದು ನಿನ್ನಿಂದ ಜನ್ಯವಾದ ಪ್ರಕಾಶ ವಾದುದರಿಂದ ಅದು ನೀನು ಆಗಲಾರೆ. ದಶವಿಧ ನಾದಗಳಾದರು ನಿನ್ನ ಸ್ವರೂಪವಲ್ಲ. ಏಕೆಂದರೆ ಅವುಗಳು ತನ್ನಿಂದ ತಿಳಿಸಿಕೊಳ್ಳುವದರಿಂದ ತನ್ನ ಸ್ವರೂಪವಲ್ಲ, ಅವುಗಳು ತನ್ನ ಸ್ವಯ ಪದವಲ್ಲ. ಇವೆಲ್ಲವುಗಳು ಆವ ಸ್ವಯಂ ಜ್ಯೋತಿಯಿಂದ ಸಿದ್ಧವಾಗುವವೋ ಅದುವೆ ತೊಳಗಿ ಬೆಳಗುವ ಜ್ಯೋತಿ, ಬೆಳಗಿನ ಬೆಳಗು, ಸ್ವಯಂ ಬೆಳಗು, ನಡೆ ತಾಯಿ ಅಲ್ಲಿಗೆ ಇದುವೆ ಗುಹೇಶ್ವರ ಲಿಂಗದಲ್ಲಿ ನಿನಗೆ ಸ್ವಯಪದವು.

ಸ್ವಯಪದವೆಂಬುದು ಅಖಂಡ ಜ್ಯೋತಿ, ಅದುವೆ ತೊಳಗಿ ಬೆಳಗುವ ಜ್ಯೋತಿ. ಇದು ಕಂದದ ಜ್ಯೋತಿ, ಕುಂದದ ಜ್ಯೋತಿ, ಮನ ಮೇರೆದಪ್ಪಿದ ಜ್ಯೋತಿ, ನಿರಂತರವಾಗಿರುವ ಮಂಗಳಮಯ ಜ್ಯೋತಿ. ಇದು ಸ್ವಯ ಜ್ಯೋತಿ.ಅಲ್ಲಿಗೆ ನೀನು ಹೋಗಬೇಕಾದರೆ ನೀನಾನೆಂಬುಭಯ ಮಾಯಿಕ ಸಂಗ ದೋಷ ಇದ್ದರೆ ಹೋಗಲಾರೆ.ಏಕಂದರೆ ನೀನಾನೆಂಬುಭಯ ಸಂಗ ಮರವಿನಿಂದುಕ್ತವಾದುದು. ಇಲ್ಲಿಯೆ ನಾಮ ರೂಪಂಗಳೆಂಬ ಜಗದ ವಿಸ್ತಾರ, ಮಾಯಿಕ ವಿಸ್ತಾರ, ಅವಿದ್ಯೆ , ಮಾಯೆ, ಇವೆರಡು ಒಂದೆ ಇದ್ದರೂ ಮುಖ ಎರಡಾದುದರಿಂದ ನೀನಾನೆಂಬುಭಯ ಸಂಗವಾಗಿ ತೋರುವುದು.ಇಲ್ಲಿಯೆ ಜಗತ್ ಸೃಷ್ಟಿ ಇರುವುದು. ಇದುವೆ ಭ್ರಾಂತಿ ದೃಷ್ಟಿ . ಈ ದೃಷ್ಟಿ ಯನ್ನು ತಿರಸ್ಕರಿಸು ಆಗ ನಿನ್ನ ಮುಂದೆ ಕಾಣುವದೆ ಮಹಾಗಿರಿ ನಿಲಯ. ಇಲ್ಲಿ ಅಹಮಾಕಾಶವಿಲ್ಲ , ಇದಮಾಕಾಶವಿಲ್ಲ , ಇತ್ತ ಲಿಂಗಾಂಗ ಸಾಮಾರಸ್ಯದಿಂದುಕ್ತವಾದ ಪೂರ್ಣಭಾವವಿಲ್ಲ, ಅಂದರೆ ಆವಾವ ಭಾವ ವಿಲ್ಲದ ಅವಿಚಾರನಿಲಯ ಅಭಾವ ನಿಲಯ. ಇದು ತನ್ನ ತಿಳಿದುದು ಅಲ್ಲ, ಅನ್ಯವನ್ನು ತಿಳಿದುದು ಅಲ್ಲ. ಇದು ಕಾರಣ ಮಹಾಗಿರಿ ರೂಪವಾಗಿದೆ. ಈ ಅಭಾವ ರೂಪ ಮಹಾಗಿರಿಯನ್ನು ಲಿಂಗಾಂಗ ಸಾಮಾರಸ್ಯ ವಿಚಾರದಿಂದ ತಿರಸ್ಕರಿಸುವುದೆ ಅರುಸ್ವರೂಪ ಲಿಂಗವು ಅರುಸ್ವರೂಪ ಅಂಗ ಲಿಂಗವೆಂಬುದು ಅಖಂಡ ಅರುವು. ಈ ಅರುವಿನ ಅಖಂಡ ಭಾವನೆ ಬಟ್ಟ ಬಯಲು. ಈ ಭಾವದೊಳಗೆ ಕಾಣಬಾರದು ಇದರಿಂದ ಹೃದಯ ಪರಿಶುದ್ಧವಾಗಿ ಇದ್ದಕ್ಕಿದ್ದಂತೆ ಜ್ಞಾನೋದಯವಾಗಲು ಈ ಭಾವವಾದರೂ ನನ್ನೊಳಗೆ ಇಲ್ಲ. ನನ್ನದು ಅತೀತ ಸ್ವರೂಪ, ಸಮಸ್ವರೂಪ, ನಿರಂತರವಾಗಿರುವ ಮಂಗಳಮಯ ಜ್ಯೋತಿ. ಇದು ಆವಾವ ಭಾವಕ್ಕಿಂಬುಕೊಡದ ಸ್ವರೂಪ ಇದ್ದಂತಿದ್ದ ಸ್ವಯಂ ಜ್ಯೋತಿ. ಅಲ್ಲಿ ನುಡಿಗಿಂಬಿಲ್ಲ, ನಡೆಗಿಂಬಿಲ್ಲ , ನುಡಿಗೆಡೆಗೊಡದ ಘನವೆಂಬುದೆ ಕಾಣಬಾರದ ಕದಳಿಯಾಗಿದೆ.

ಈ ಕದಳಿಯ ಕಳೆದಲ್ಲಿ ಅಂದರೆ, ನನ್ನದು ಸಮ ಸ್ವರೂಪ, ಅತೀತ ಸ್ವರೂಪ, ಆವಾವ ಭಾವಕ್ಕಿಂಬು ಕೊಡದ ಸ್ವರೂಪ. ನುಡಿಗೆಡೆಗೊಡದ ಘನವೆಂಬುದಾದರೂ ತನ್ನ ಸ್ವರೂಪದಲ್ಲಿ ಇದೆಯೆ? ಎಂದು ತನ್ನಿಂದ ತಾನೆ ನೋಡಲು ಆಗ ವಾಙ್ಮನೋತೀತ ತಾನೆ, ಶೃತಿಗಗೋಚರ ತಾನೆ ಎಂಬುದು ತನ್ನಿಂದ ತನಗೆ ತಿಳಿದು ಶಬ್ದ ಮುಗ್ದವಾದುದು ಕದಳಿಯ ಕಳೆದಂತೆ.ಒಳಹೊಕ್ಕಂತೆ . ತೊಳಗಿ ಬೆಳಗುವ ಜ್ಯೋತಿ ತಾನಾದ. ಅಂದರೆ ಅರಿಯದರವು ತಾನೆ ತಾನಾದ ಇರವು ; ನಡೆ ಅಲ್ಲಿಗೆ ತಾಯೆ ಗುಹೇಶ್ವರ ಲಿಂಗದಲ್ಲಿ ಪರಮಪದವಿ ನಿನಗೆ ಅದು ಸ್ವತಃ ಸಿದ್ದವಹುದು ಎಂದು ಹೇಳಿದ್ದಾನೆ.

**70**

**ಮಾಟ ಕೂಟ ವಾಯಿತ್ತಯ್ಯ ಬಸವಣ್ಣಂಗೆ ,**
**ನೋಟ ಕೂಟ ವಾಯಿತ್ತಯ್ಯ ಅಲ್ಲಮ ಪ್ರಭುದೇವರಿಗೆ ,**
**ಭಾವ ಕೂಟ ವಾಯಿತ್ತಯ್ಯ ಅಜಗಣ್ಣಂಗೆ ,**

**ಸ್ನೇಹ ಕೂಟ ವಾಯಿತ್ತಯ್ಯ ಸೊಡ್ಡಳ ಬಾಚರಸಂಗೆ**
**ಇವರೆಲ್ಲರ ಕೂಟ ವಾಯಿತ್ತಯ್ಯ ಚೆನ್ನಬಸವಣ್ಣಂಗೆ,**
**ಎನಗೆ ನಿಮ್ಮಲ್ಲಿ ಅವಿರಳ ಕೂಟ ವಾಯಿತ್ತಯ್ಯ ಚೆನ್ನಮಲ್ಲಿಕಾರ್ಜುನ.**

**ತಾತ್ಪರ್ಯ :** ಬಸವಣ್ಣನ ಮಾಟ ಕೂಟದ ಮಹಿಮೆಯ ನೋಡಿರೆ? ಇದೆಂಥ ಮಾಟ ಕೂಟ, ಲಿಂಗ ಮಾಟ ಕೂಟ, ಇದು ಲಿಂಗಾಂಗ ಮಾಟ ಕೂಟ, ಶಿವ ಶಕ್ತಿಯರೊಂದು ಮಾಡಿದ ಮಾಟದ ಕೂಟ. ಜ್ಞಾನಜ್ಞಾನವ ನೊಂದು ಮಾಡಿದ ಮಾಟದ ಕೂಟ. ಮರವರವು ಒಂದು ಮಾಡಿದ ಮಾಟದ ಕೂಟ. ಈ ಮಾಟ ಕೂಟ, ಲಿಂಗಾಂಗ ಸಮರಸ ಮಾಡಿದ ಮಾಟದ ಕೂಟ. ಇದು ಸಕಲರ ಭವ ಕೆಡಿಸಿ ಸ್ವಮತ್ವ ಸಿದ್ದ ಮಾಡಿಕೊಡಲು ಬಂದ ಮಾಟದ ಕೂಟ. ಮಾಯದ ಮಾಟವ ಕೆಡಿಸಿ ನಿರ್ಮಾಯ ಘನವ ಸಕಲರ ಹೃದಯದೊಳ ಬೆಳಗುವ ಲಿಂಗ ಮಾಟಕೂಟ ತೋರಿಸಲು ಬಂದ ಬಸವಣ್ಣ. ಅದಕ್ಕಾಗಿ ಮಾಟ ಕೂಟವೆಂಬುದು ಸ್ವಯ ಕೂಟ ವಾಯಿತ್ತು. ಘನ ಲಿಂಗ ವಾಯಿತ್ತು. ನೋಟ ಕೂಟವಾಯಿತ್ತು. ಘನಾಂಗ ವಾಯಿತ್ತು. ಅಲ್ಲಮ ಪ್ರಭುವಿಗೆ. ಅಲ್ಲಮ ಪ್ರಭುವಿನ ನೋಟ ನೋಡದ ನೋಟ, ಅನಿಮಿಷನ ನೋಟ, ಶ್ರೀಗುರುವಿನ ನೋಟ, ಅಪ್ರಮಾಣ ನೋಟ, ಅಚಿಂತ್ಯನ ನೋಟ, ಅಕಲಂಕ ನೋಟವಾದುದರಿಂದ ನೋಟ ಕೂಟವಾಯಿತ್ತು ನೋಡಾ.

ಈ ನೋಟದ ಕೂಟ ಅಹಹ ಇದೆಂಥ ಸ್ವಮಹಿಮವು. ಇದು ಶ್ರೀಗುರುವಿನ ಕೂಟದ ನೋಟ, ಏನೊಂದಾಗದ ಕೂಟದ ನೋಟ, ನಿರ್ವಿಕಾರ ನೋಟ, ವ್ಯಾಪ್ತವ್ಯಾಪಕವೆಂಬ ವಿಭಾಗ ಕ್ಕಿಂಬು ಕೊಡದ ನೋಟದ ಕೂಟ, ನಿರಾಲಂಬ ನೋಟ, ಚಿದಾಕಾಶ ನೋಟ, ಅನಾಮನ ನೋಟ, ಈ ನೋಟವೆ ಪ್ರಭುವಿನ ನೋಟ ವಾದುದರಿಂದ ಸುಖದ ಸುಖ ನೋಟವಾಯಿತ್ತು. ಎಲ್ಲಿ ನೋಡಿದಡಲ್ಲಿ ತನ್ನನ್ನೆ ಕಂಡಿತ್ತು, ತನ್ನನ್ನೆ ಕೂಡಿತ್ತು. ತಾನೆ ತಾನಾಗಿ ಪ್ರಕಾಶಿಸುವ ಘನವೆ ಅದನಾರಯ್ಯ ವರ್ಣಿಸುವರು.

**ಭಾವ ಕೂಟ ವಾಯಿತ್ತಯ್ಯ ಅಜಗಣ್ಣಂಗೆ :** ಭಾವ ಕೂಟವಾದುದನೇನೆಂಬೆ ಅಯ್ಯ ಈ ಘನ ಮಹಿಮಂಗೆ ಭಾವಕೂಟ ಕೂಟ ಭಾವ ಏಕ ಮಾಡ್ಡಿದ ಘನಕ್ಕೆ ಘನವಂತನೋಡಾ.ಸ್ಥಾವರಜಂಗಮಕ್ಕೆ ಭಾವ ಲಿಂಗ ಮಾಡಿದನಲ್ಲ, ಸ್ಥಾವರ ಲಿಂಗವೆ ಜಂಗಮ ಲಿಂಗವೆ, ಸ್ಥಾವರ ಜಂಗಮವೆಂಬುದು ಒಂದೆ. ಇದು ಅಖಂಡ ಲಿಂಗವು ಕಾಣಿಸುವ ದೃಶ್ಯ ಕಾಣುವ ದೃಕ್ ಎಂಬುದು ಲಿಂಗವಲ್ಲವೆ, ಅನ್ಯವಲ್ಲವೆಂಬ ಭಾವ ಲಿಂಗ. ಇದು ಸದ್ಭಾವ ಲಿಂಗ ಭರಿತ ಭಾವ ಲಿಂಗ. ಇದು ತುಂಬಿ ತುಳುಕದ ಲಿಂಗದ ಕೂಟವಾದುದರಿಂದ ಸಾವಯವ, ನಿರವಯ ನೊಂದು ಮಾಡಿದ ಭಾವ ಸಂಪನ್ನ. ಮಹಾಲಿಂಗ ಸಂಪನ್ನ, ಭಾವ ಭರಿತ ಸಂಪನ್ನ, ಇದು ತುಂಬಿದ ಭಾವ, ತುಳಕದ ಭಾವ, ಒಲಿದ ಭಾವ, ಓಸರಿಸದ ಭಾವ, ಕೊನೆ ಮೊದಲಿಲ್ಲದ ಅಚ್ಯುತ ಭಾವ ಸಂಪನ್ನ. ಅದಕ್ಕಾಗಿ ಭಾವ ಕೂಟ ಅಜಗಣ್ಣಂಗೆ.

**ಸ್ನೇಹಕೂಟ ವಾಯಿತ್ತಯ್ಯ ಸೊಡ್ಡಳ ಬಾಚರಸರಿಗೆ :** ಅಹಹ ಇದೆಂಥ ಸ್ನೇಹಕೂಟ, ಒಂದೆಂಬೆನೆ ಸ್ನೇಹಸಂಬಂಧದಿಂದ ಎರಡಾಗಿ ತೋರುತ್ತದೆ. ಎರಡೆಂಬೆನೆ. ಸ್ನೇಹಸಂಬಂಧವೆ ಸ್ನೇಹಕೂಟ ಒಂದಾಗಿದೆ. ಇದೆಂಥ ಅಗಾಧ ಸ್ನೇಹಕೂಟ ಒಂದೆರೆಡು ಸಂದೇಹವಿಲ್ಲದ ಸ್ನೇಹಕೂಟ, ಅಗಲಲಿಲ್ಲದ ಸ್ನೇಹಕೂಟ, ಬಿಚ್ಚಿದ್ದರೂ ಬೇರಾಗದ ಸ್ನೇಹ ಕೂಟ. ಇದು ಶ್ರೀ ಗುರುವಿನ ಕರುಣೆಯ ಘನ ಧನುವಿನ ಕೂಟ. ವಿದೇಹ ಕೂಟ, ಸ್ವಸುಖದ ಕೂಟ, ಸೊಡ್ಡಳ ಬಾಚರಸರಿಗೆ ನೋಡಾ.

**ಇವರೆಲ್ಲರ ಕೂಟ ವಾಯಿತ್ತಯ್ಯ ಚೆನ್ನಬಸವಣ್ಣಂಗೆ :** ಅಂದರೆ ಸಮರಸ ಕೂಟ. ಚೆನ್ನಬಸವಣ್ಣಂಗೆ ; ಚೆನ್ನಬಸವರಾಜ ದೇವರು ಸಮರಸ ಸಂಪನ್ನ ರಾದುದರಿಂದ ನಿಸ್ಸೀಮವಂತ.

ಅದಕ್ಕಾಗಿ ಮಾಟ ಕೂಟ ಸಂಪನ್ನನು ಅಹುದು, ನೋಟ ಕೂಟ ಸಂಪನ್ನನು ಅಹುದು, ಭಾವ ಕೂಟ ಸಂಪನ್ನನು ಅಹುದು, ಸ್ನೇಹಕೂಟ ಸಂಪನ್ನನು ಅಹುದು. ಇವರೆಲ್ಲರ ಕೂಟದ ಸಂಪನ್ನನಾದುದರಿಂದ ಸಮರಸ ಸಂಪನ್ನನು ನೋಡಾ. ಪರಿಪೂರ್ಣ ಸಂಪನ್ನ, ನಿರಾತಂಕ ನಿಲುವುಳ್ಳ ನಿಜಘನ, ನಿಜಾನಂದ, ಶಾಂತಸಮುದ್ರ ನೋಡಾ. ಶಾಂತಿಧಾಮ, ಸುಖಧಾಮ, ಕೈವಲ್ಯಧಾಮವೆ ಆತನ ಕೂಟ ನೋಡಾ. ಎನಗೆ ನಿಮ್ಮಲ್ಲಿ ಅವಿರಳ ಕೂಟ ವಾಯಿತ್ತೆಂದರೆ ಆನು ಬಸವಣ್ಣನವರ ಮಾಟ ಕೂಟದ ಶಿಶು. ಅಲ್ಲಮ ಪ್ರಭುವಿನ ನೋಟ ಕೂಟದ ಶಿಶು ಚೆನ್ನಬಸವಣ್ಣನ ಸಮರಸ ಕೂಟದ ಶಿಶು. ಹೀಗೆ ಸಕಲ ಶರಣರ ಕೂಟದ ಕರುಣೆಯ ಶಿಶು ಆನು ಆದ ಕಾರಣ ಸ್ವಯ ಕೂಟ ಎನಗಾಯಿತ್ತು ನೋಡಾ ಪ್ರಭುವೆ.ಈ ಸ್ವಯ ಕೂಟವೆ ಎನಗೆ ನಿಮ್ಮಲ್ಲಿ ಅವಿರಳ ಕೂಟ ವಾಯಿತ್ತಯ್ಯ ಪ್ರಭುವೆ ಎಂದು ಸ್ತುತಿಸಿದ್ದಾಳೆ.

**71**

**ಮಾಟ ಕೂಟ ವೆಂಬುದಿಲ್ಲ ಬಸವಣ್ಣಂಗೆ .**
**ನೋಟ ಕೂಟ ವೆಂಬುದಿಲ್ಲ ಅಲ್ಲಮ ಪ್ರಭುವಿಗೆ .**
**ಭಾವ ಕೂಟವೆಂಬುದಿಲ್ಲ ಅಜಗಣ್ಣಂಗೆ.**
**ಸ್ನೇಹಕೂಟವೆಂಬುದಿಲ್ಲ ಬಾಚಿರಾಜಂಗೆ.**
**ಇವರೆಲ್ಲರ ಕೂಟ ವೆಂಬುದಿಲ್ಲ ಬಸವಣ್ಣಂಗೆ.**
**ಎನಗೆ ನಿಮ್ಮ ಕೂಟ ವೆಂಬುದಿಲ್ಲ ಚೆನ್ನಮಲ್ಲಿಕಾರ್ಜುನ.**

**ತಾತ್ಪರ್ಯ :** ಬಸವಣ್ಣಂಗೆ ಮಾಟ ಕೂಟವೆಂಬುದಿಲ್ಲ, ಅದೆಂತೆಂದೊಡೆ ಬಸವರಸ ಸಂಗ ಸಮರಸಕಾಣದ ಘನ, ಅತೀತ ಘನ, ಅಪ್ರಮಾಣ ಘನ ವಾದುದರಿಂದ ಬಸವಣ್ಣ ನಿಃಕಲ ಲಿಂಗ. ಅಲ್ಲಿ ಪಿಂಡಾಂಡ ವಾದುದಿಲ್ಲ, ಬ್ರಹ್ಮಾಂಡವಾದುದಿಲ್ಲ, ಅಂಗವಾದುದಿಲ್ಲ, ಅನಂಗವಾದುದಿಲ್ಲ , ಹೋದುದಿಲ್ಲ ಬಂದುದಿಲ್ಲ, ಅಂದು ಇಂದು ಎಂದೆಂದೂ ಇದ್ದಂತಿರುವ ಚಿನ್ಮಯ ಲಿಂಗ. ಚಿನ್ಮಯ ದೇವನ ದೃಷ್ಟಿಯಲ್ಲಿ ಅಂಗ ಲಿಂಗ ಒಂದೆ ಎಂದು ಮಾಡುವ ಮಾಟವು ಇಲ್ಲ, ಕೂಡಿಸುವ ಕಲೆಯು ಇಲ್ಲ, ಶಿವನು ಇಲ್ಲ ಶಕ್ತಿಯು ಇಲ್ಲ.ಶಿವಶಕ್ತಿಯರೆ ಇಲ್ಲದಿರುವಾಗ ಮಾಟವೆಂಬುದಿಲ್ಲ, ಕೂಟವೆಂಬುದಿಲ್ಲ ಏಕೆಂದರೆ ಎರಡಿದ್ದಲ್ಲಿ ಮಾಟವುಂಟು ಕೂಟವುಂಟು.ಅಂಗವೆಂಬುದುಂಟು, ಲಿಂಗವೆಂಬುದುಂಟು.ಏನೊಂದುಸುರಲು ಎಡೆಗೊಡದ ಘನ ಅಣ್ಣ ಬಸವಣ್ಣನಿರುವಾಗ ಆ ಮಹಾಂತನ ದಿವ್ಯ ದೃಷ್ಟಿಯಲ್ಲಿ ಮರವು ಎಂಬುದಿಲ್ಲ , ಇಲ್ಲದಿರುವಲ್ಲಿ ಇಲ್ಲದ ಮರವು ಒಂದು ಮಾಡಿದ ಮಾಟವು ಇಲ್ಲ , ಇಲ್ಲವಾದುದರಿಂದ ಮಾಟ ಕೂಟವೆಂಬುದಿಲ್ಲ ಬಸವಣ್ಣಂಗೆ ಎಂದು ಹೇಳಿದ್ದಾಳೆ.

ನೋಟ ಕೂಟವೆಂಬುದಿಲ್ಲ ಅಲ್ಲಮ ಪ್ರಭುವಿಗೆ. ಅಲ್ಲಮ ಪ್ರಭು ಅಜನು ಅಜನೆ ಇರುವುದರಿಂದ ಬಾಚಿರಾಜಂಗೆ ಸ್ನೇಹ ಕೂಟವೆಂಬುದಿಲ್ಲವೆಂದು ಅಕ್ಕ ಹೇಳಿದುದು ಸರಿಯೆ!

ಇವರೆಲ್ಲರ ಕೂಟವೆಂಬುದಿಲ್ಲ ಚೆನ್ನಬಸವಣ್ಣಂಗೆ ಏಕೆಂದರೆ ಚೆನ್ನಬಸವಣ್ಣ ಅಗಮ್ಯ ಅವರ್ಣನೀಯನು ಅವಾಙ್ಮನಗೋಚರ ಆವಾವ ಭಾವನೆಗಿಂಬು ಕೊಡದವ ನಾದುದರಿಂದ ಭಾವಾತೀತ ನೆಂಬುದಕ್ಕೂ ಮೀರಿದವ ನಾದುದರಿಂದ ಅಜಗಣ್ಣನ ಭಾವಕೂಟವೆಂಬುದಿಲ್ಲ. ಶೃತಿಗೆ ಮೀರಿದ ಘನ ನಾಗಿರುವದರಿಂದ ಸ್ನೇಹ ಕೂಟವೆಂಬುದಿಲ್ಲ. ಅಂದರೆ ಅಚಿಂತ್ಯನೆಂಬುದಿಲ್ಲ ,

ಅಜನೆಂಬುದಿಲ್ಲ, ಸತ್ಯಜ್ಞಾನಾನಂದನೆಂಬುದಿಲ್ಲ. ಆವಾವ ಕಥನಕ್ಕೂ ನಿಲುಕದವನಾದುದರಿಂದ ಸ್ನೇಹ ಕೂಟವೆಂಬುದಿಲ್ಲ. ನಿರ್ಣಯಕ್ಕೆ ಮೀರಿದ ನಿರಾಲಂಬನಾದುದರಿಂದ ನೋಟ ಕೂಟವೆಂಬುದಿಲ್ಲ, ಸಂಜ್ಞೆ ಇಲ್ಲ ಸಂಕೇತವಿಲ್ಲ, ರೂಪವಿಲ್ಲ ಅರೂಪವಿಲ್ಲ, ಮಾಯೆಯಿಲ್ಲ ಅಮಾಯೆಯಿಲ್ಲ, ಏನೇನೂ ಇಲ್ಲವಾದಲ್ಲಿ ನೋಟವೆಲ್ಲಿ ಕೂಟವೆಲ್ಲಿ? ಅದಕ್ಕಾಗಿ ಇವರ ಕೂಟವೆಂಬುದಿಲ್ಲ ಚೆನ್ನಬಸವಣ್ಣಂಗೆ ಎಂದು ಹೇಳಿದ್ದಾಳೆ. ಅಕ್ಕ ಎನಗೆ ನಿಮ್ಮ ಕೂಟವೆಂಬುದಿಲ್ಲ ಚೆನ್ನಮಲ್ಲಿಕಾರ್ಜುನ ಎಂದು ಹೇಳಿರುವಾಗ ಅಕ್ಕನ ಘನತ್ವ ಉಪಮಿಸಲೆಡೆಯಿಲ್ಲ ನೋಡಾ. ಏಕೆಂದರೆ ಅಕ್ಕ ಶಬ್ದ ಮುಗ್ಧವಾದ ಘನ ನೋಡಾ, ಅಲ್ಲಿ ಏನೇನೂ ಉಸರಲಿಕ್ಕಿಂಬಿಲ್ಲ ನೋಡಾ. ಅದಕ್ಕಾಗಿ ನಿಮ್ಮ ಕೂಟವೆಂಬುದಿಲ್ಲವೆಂದು ಹೇಳಿದ್ದಾಳೆ. ಅಕ್ಕಗಳು ತಮ್ಮ ಲಿಂಗೈಕ್ಯವ ನಿಶ್ಚಯಿಸಿ ತಮ್ಮ ಘಟಸ್ಥಲ ನಿಷ್ಪತ್ತಿಯ ನಿರೂಪಿಸುವ ವಚನ.

**72**

**ಭಕ್ತೆಯಾನಪ್ಪೆನಯ್ಯ ಕರ್ತೃತ್ವ ಭೃತ್ಯತ್ವವನರಿಯೆ. ಮಹೇಶ್ವರಿಯಾನಪ್ಪೆನಯ್ಯ,**
**ವ್ರತನಿಯಮ ಫಲವನರಿಯೆ. ಪ್ರಸಾದಿಯಾನಪ್ಪೆನಯ್ಯ,**
**ಅರ್ಪಿತ ಅನರ್ಪಿತನರಿಯೆ. ಪ್ರಾಣಲಿಂಗಿಯಾನಪ್ಪೆನಯ್ಯ,**
**ಅನುಭಾವದ ಗಮನವನರಿಯೆ. ಶರಣ ಆನಪ್ಪೆನಯ್ಯ,**
**ಸತಿಪತಿಯೆಂಬ ಭಿನ್ನವನರಿಯೆ, ಐಕ್ಯಳಾನೆಪ್ಪನಯ್ಯ ಬೆರೆಸಿ ಬೇಧವನರಿಯೆ.**
**ಚೆನ್ನಮಲ್ಲಿಕಾರ್ಜುನಯ್ಯ ಷಟಸ್ಥಲದಲ್ಲಿ ನಿಸ್ಥಲದ ವರ್ತನೆಯ ಪರಿಜ್ಞಾನಿಯಾನಪ್ಪೆನಯ್ಯ.**

**ತಾತ್ಪರ್ಯ :** ಅಕ್ಕನ ವಾಣಿ ಪರಾವಾಣಿ, ದೇವ ದೇವ ಮಹಾಪ್ರಸಾದವಾಣಿ, ಷಟಸ್ಥಲ ಹಂಗು ಹರಿದು ಘನ ಗಂಭೀರ ತಾನೆ ಆದ ಪರಾತ್ಪರ ವಾಣಿಯಾದುದರಿಂದ ಷಟಸ್ಥಲದಲ್ಲಿ ನಿಸ್ಥಲದ ವರ್ತನೆಯ, ಪರಿಜ್ಞಾನಿ ಎಂದು ಹೇಳುವಲ್ಲಿ ಷಟಸ್ಥಲವೆಂಬುವುದು ಸೀಮಿತ. ಷಟಸ್ಥಲದಲ್ಲಿಯ ನಿಸ್ಥಲದ ವರ್ತನೆಯು ನಿಸ್ಸೀಮವೆಂದು ಸಿದ್ಧವಾಗುತ್ತದೆ. ಅದಕ್ಕಾಗಿ ಸೀಮಾತೀತ ಪರಿಜ್ಞಾನಿಯಾಗಿರುವುದರಿಂದ ಭಕ್ತೆಯು ನಾನು ಎಂದು ಒಪ್ಪೆನು. ಭಕ್ತಳಾಗಿದ್ದರೆ ಕರ್ತೃತ್ವ ಭೃತ್ಯತ್ವನರಿಯುತ್ತಿದ್ದೆ. ಅಖಂಡೈಕರಸವಾದ ಘನದಲ್ಲಿ ನನಗೆ ಕರ್ತೃವಾರು, ಭೃತ್ಯರಾರು ತಿಳಿಯದು. ಏಕೆಂದರೆ ಲಿಂಗಕ್ಕೆ ಕಡೆಯಿಲ್ಲ, ಲಿಂಗಕ್ಕೆ ಎಡೆಯಿಲ್ಲ, ಲಿಂಗವೆಂಬುದು ಅಖಂಡ. ಒಳಹೊರಗೆನ್ನದೆ ಭರಿತವಾದ ಚಿನ್ಮಯ. ಅಲ್ಲಿ ಅನ್ಯವಾವುದು ಇರಲಿಂಬೆಲ್ಲಿಯದು, ಇಂಬಿಲ್ಲವೆಂದಲ್ಲಿ ಸರ್ವಶಕ್ತಿಯುಕ್ತನಾದ ಧ್ಯೇಯಮೂರ್ತಿಯಾವುದು? ಅಲ್ಪ ಶಕ್ತಿಯುಕ್ತನಾದ ಧ್ಯಾತನಾರು, ಇದ್ದುದು ಇದ್ದಂತೆ ಇರುವಾಗ ಅಲ್ಲಿ ವಿಭಾಗ ಮಾಡುವ ತತ್ವಕ್ಕಿಂಬಿಲ್ಲ. ದಿಟವೂ ಇಲ್ಲ, ಸಟೆಯೂ ಇಲ್ಲ, ದೆಶೆಯೂ ಇಲ್ಲ, ದಿಶೆಯೂ ಇಲ್ಲ, ಭಾದೆಯೂ ಇಲ್ಲ; ಗೊತ್ತೆ ? ಮೊದಲೆ ಅಲ್ಲಮ, ಅಂದರೆ ಯಾವುದು ಆಗದವನು. ಪ್ರಭು ಎಂದರೆ, ಸಕಲ ಹೃದಯದೊಳು ಬೆಳಗುವ ಅಚಿಂತ್ಯ ಘನ. ಈ ಘನ ಮಹಿಮ ಕಾಯನಲ್ಲ ಅಕಾಯನಲ್ಲ ಈ ಮಹಾಂತಂಗೆ ಸಾವಯವನೆಂಬುದಿಲ್ಲ, ನಿರವಯನೆಂಬುದಿಲ್ಲ. ಕಾಯ ಅಳಿದುದಲ್ಲ, ಉಳಿದುದಲ್ಲ ಸಕಲನಾಗಿ ಕಂಡರೂ ಸಾಕಾರನಲ್ಲ. ನಿಃಕಲನಾಗಿ ನಿರಾಕಾರಿಯಲ್ಲ. ಸಗುಣ ನಿರ್ಗುಣವೆಂಬ ವಿಭಾಗ ದೃಷ್ಟಿ ಮುನ್ನಿಲ್ಲ. ಅರಿತವರಂತವನಲ್ಲ, ಮರೆತವರಂತವನಲ್ಲ, ಶ್ರೀಗುರು ಪ್ರಭೆಯ ಸೋಂಕಿ ಸ್ವಯಂ ಪ್ರಕಾಶ ತಾನಾದ

ಸ್ವಮಹಿಮ ನೋಡಾ. ನಡೆದು ನಡೆಯದ ಘನ, ನುಡಿದು ನಡಿಯದ ಘನ, ಕಡೆ ಮೊದಲಿಲ್ಲದ ನಿರಾಳ ನಿಜ ಘನ. ನಿಜ ಘನನೆಂಬುದು ಅರಿಯದರವು. ಕೇವಲ ಅರುವು ಆದುದರಿಂದ ನೋಟವಿಲ್ಲ, ಕೂಟವಿಲ್ಲ, ಅದಕ್ಕಾಗಿ ಅಕ್ಕ ಪ್ರಭುವಿಗೆ ನೋಟ ಕೂಟವಿಲ್ಲವೆಂದು ಹೇಳಿದ್ದಾಳೆ.

**ಭಾವ ಕೂಟವೆಂಬುದಿಲ್ಲ ಅಜಗಣ್ಣಂಗೆ :** ಅಜಗಣ್ಣ ನಿರ್ಭಾವ ಘನ. ಈ ಮಹಾಂತ ಭಾವಕ್ಕಿಂಬು ಕೊಡದ ಮಹಾಂತ ತಾನೆ ತಾನಾದ ಮಹಾಂತ. ಈ ಮಹಾಂತನ ದಿವ್ಯದೃಷ್ಟಿಯಲ್ಲಿ ಬಂಧನವಾವುದು, ಮೋಕ್ಷವಾವುದು, ಸ್ಮೃತಿ ಆವುದು, ವಿಸ್ಮೃತಿ ಆವುದು? ಪರಮಸತ್ಯವಾದುದೊಂದೆ ಅಖಂಡೈಕರಸ, ಈತ ಭಾವಾದಿಗಳಿಂದ ನಿರ್ಮುಕ್ತವಾದ ಘನ. ಅಲ್ಲಿ ಭಾವಾಭಾವಂಗಳ ಮಾಟವಿಲ್ಲ. ಇವೆರಡು ಒಂದೆ ಮಾಡುವ ಮಾಟವೂ ಇಲ್ಲ. ಮಾಟವಿಲ್ಲವೆಂದಲ್ಲಿ, ಕೂಟವೆಲ್ಲಿಯದು! ಏಕೆಂದರೆ ವ್ಯಾಪ್ತನೆಂಬುದಿಲ್ಲ ವ್ಯಾಪಕನೆಂಬುದಿಲ್ಲ. ಇಚ್ಛಾನಿಚ್ಛೆಯಿಂದ ವಿವರ್ಜಿತವಾಗದು.ಈ ಘನ ದ್ವೈತವಾಗದು ಅದ್ವೈತವಾಗದು, ಉಪಮಿಸಲಾಗದ ಘನ ವಾದುದರಿಂದ ಭಾವ ಕೂಟವೆಂಬುದಿಲ್ಲ ಅಲ್ಲಿ ಆವಾವ ಭಾವಂಗಳಿಗಿಂಬಿಲ್ಲ ವಾದುದರಿಂದ ಎಲ್ಲಿ ನೋಡಿದಡಲ್ಲಿ ಭಾವತೀತ ಘನ ತಾನೆಯಾಯಿತ್ತು . ಇದು ಕಾರಣ ಈ ಅನುಪಮಂಗೆ ಬದ್ದನೆಂದರೂ ಅಕಲಂಕ ಘನ, ಬುದ್ದನೆಂದರೂ ಅಕಲಂಕ ಘನ . ಈ ಘನ ಮಹಿಮಂಗೆ ನಿರವಯವೆಂಬ ಭೇದವಿಲ್ಲ. ಏಕೆಂದರೆ ತನ್ನಂಗವೆ ಶ್ರೀಗುರು ಘನಾಂಗ ಮಾಡಿ ತೋರಿದುದರಿಂದ ಅಜಗಣ್ಣಂಗೆ ಭಾವ ಕೂಟವಿಲ್ಲವೆಂದು ಅಕ್ಕ ಹೇಳಿದ್ದಾಳೆ.

**ಸ್ನೇಹಕೂಟವೆಂಬುದಿಲ್ಲ ಬಾಚಿರಾಜಂಗೆ :** ಅಂದರೆ ಅಮೃತಕ್ಕೆ ಅದಾವ ರುಚಿ ಸಂಬಂಧವಾಗಿ ಮತ್ತಷ್ಟು ರುಚಿಯಾಗಬೇಕು? ಜಲಕ್ಕೆ ಅದಾವ ಶೀತಲದ ಸಂಬಂಧವಾಗಿ ಶೀತಲವಾಗಬೇಕು, ಅಚಿಂತ್ಯಘನವಂತನಿಗೆ ಅದಾವ ಚಿಂತಾರಹಿತ ಸಂಬಂಧವಾಗಿ ಅಧಿಕ ನಿಶ್ಚಿಂತನಾಗಬೇಕು. ತೃಪ್ತಾತ್ಮನಿಗೆ ಅದಾವ ಊಟದ ತೃಪ್ತಿ ಮಾಡಿಸಿ ಅಧಿಕ ತೃಪ್ತನನ್ನಾಗಿ ಮಾಡಬೇಕು. ಏಕೆಂದರೆ ಸ್ವತಃ ಸಿದ್ಧ ತೃಪ್ತಾತ್ಮನಿಗೆ ಹಸಿವು ಇಲ್ಲದುದರಿಂದ ತೃಪ್ತಿ ಮಾಡುವ ಅನ್ನದ ಸ್ನೇಹವಿಲ್ಲ , ವಿಷಯದ ಸ್ನೇಹವಿಲ್ಲ ಭಾವದ ಸ್ನೇಹವಿಲ್ಲ , ಬಾಚಿರಾಜಂಗೆ ಆವಾವ ಸ್ನೇಹಕೂಟವಿಲ್ಲ. ಏಕೆಂದರೆ ಜ್ಞಾನಾಮೃತನು ಜ್ಞಾನಾನಂದಮಯನು ಇರುವದರಿಂದ ಆತನಿಗೆ ಆವಾವ ಸ್ನೇಹಕೂಟವಿಲ್ಲ . ತಾನೆ ಅಚಿಂತ್ಯನಾಗಿರುವಾಗ ಆತನಿಗಾವ ಚಿಂತೆ, ಚಿಂತನವೆ ಇಲ್ಲವೆಂದಲ್ಲಿ ಅವುಗಳ ಸಂಬಂಧವೆಲ್ಲಿ ಸ್ನೇಹವೆಲ್ಲಿ? ಅಜನು ಅದಾವ ಸ್ನೇಹ ಸಂಬಂಧ ಮಾಡಿ ಅಜನಾಗ ಬೇಕಾಗಿದೆ. ಇಲ್ಲಿ ಭೇದವೂ ಇಲ್ಲ ಅಭೇದವೂ ಇಲ್ಲ; ಇಲ್ಲವಾದುದರಿಂದ ಭಕ್ತೆಯಾನಪ್ಪೆನಯ್ಯಾ . ಅದಕ್ಕಾಗಿ ಕರ್ತೃವಾರು ಭೃತ್ಯರಾರು ನಾನರಿಯೆ. ಮಹೇಶ್ವರ ನಾನು ಎಂದು ಒಪ್ಪೆನು. ಮಹೇಶ್ವರಿಯಾಗಿದ್ದರೆ ವ್ರತನಿಯಮಗಳ ಛಲದವಳಾಗುತ್ತಿದ್ದೆ. ನಾನು ವ್ರತಗೇಡಿ ಅನಿಯಮದವಳು. ಮಹೇಶ್ವರನೆಂಬುದು ಆದಿ ಅನಾದಿಯಿಂದತ್ತತ್ತಲಾದ ಮುನ್ನ ಮಹಾಘನವು. ಅದಕ್ಕೆ ಆದಿ ಮಧ್ಯ ಅಂತ್ಯವೆಂಬುದಿಲ್ಲ, ಅದು ಅಪಾರವು ಪರಾತ್ಪರವಾದ ಚಿನ್ಮಯವು. ಅಲ್ಲಿ ಚಿಚ್ಛಕ್ತಿ ಆವುದು, ಚಿದಾಭಾಸ ಆವುದು, ಅಲ್ಲಿ ಅನ್ಯವಿರಲಿಂಬುಂಟೆ? ಇಲ್ಲದುದರಿಂದ ಮಹೇಶ್ವರನು ತೋರಿ ಅಡಗುವ ಮಾಯಿಕನಲ್ಲ. ಆ ಮಹೇಶ್ವರನನ್ನು ಒಲಿಸುವ ನಾನು ಮಹೇಶ್ವರಿಯಲ್ಲ, ಅಲ್ಲಿ ಮಾಯಿಕತತ್ವಕ್ಕಿಂಬಿಲ್ಲದಿರುವಾಗ ತೋರಿ ಅಡಗುವ ಮಹೇಶ್ವರ ಇದ್ದವನಲ್ಲ. ನಾನು ಅವನ ವ್ರತವುಳ್ಳ ನಿಯಮವುಳ್ಳ ಮಹೇಶ್ವರಿ ಆದವಳಲ್ಲ . ಅದಕ್ಕಾಗಿ ಷಟ್‌ಸ್ಥಲದ ಪರಿಜ್ಞಾನಿಯಾಗಿರುವದರಿಂದ ನಾನು ಮಹೇಶ್ವರಿಯಲ್ಲ.

ಪ್ರಸಾದಿಯಾನಪ್ಪೆನಯ್ಯ : ಪ್ರಸಾದಿ ನಾನು ಆಗಿದ್ದರೆ ಅರ್ಪಿತ ಅನರ್ಪಿತ ಭಾವವಿರುತ್ತಿತ್ತು . ನಾನು ಪ್ರಸಾದಿಯಲ್ಲ. ಏಕೆಂದರೆ ಷಟ್‌ಸ್ಥಲದಲ್ಲಿಯ ನಿಸ್ಥಲದ ಪರಿಜ್ಞಾನಿಯಾಗಿರುವುದರಿಂದ ಅಗ್ನಿ

ಮುಟ್ಟಲು ತೃಣವಗ್ನಿಯಪ್ಪುದು ತಪ್ಪದಯ್ಯ. ಶ್ರೀಗುರು ಪ್ರಸಾದ ಅಂಗಕ್ಕೆ ಸೋಂಕಿದಲ್ಲಿ ಸರ್ವಾಂಗ ಗುರುವಪ್ಪದು ತಪ್ಪದಯ್ಯ . ಲಿಂಗ ಪ್ರಸಾದ ಮನ ಸೋಂಕಿದಲ್ಲಿ ಮನ ಲಿಂಗವಪ್ಪದು ತಪ್ಪದಯ್ಯ . ಜಂಗಮ ಪ್ರಸಾದ ಅರಿವು ಸೋಂಕಿದಲ್ಲಿ ಅಖಂಡಿತ ಪ್ರಸನ್ನ ಪ್ರಸಾದವಪ್ಪದು ತಪ್ಪದಯ್ಯ . ಅಖಂಡ ಪ್ರಸಾದ ಸೋಂಕಿದಲ್ಲಿ ಗುರು ಅಖಂಡ, ಲಿಂಗ ಅಖಂಡ, ಜಂಗಮ ಅಖಂಡವಾಗಿ ಪ್ರಸಾದವೆಂಬುದು ವಾಙ್ಮನೋತೀತವಾಯಿತಲ್ಲ. ಉಪಮೆ ಅನುಪಮವಾದ ಘನವ ಅದನಾರಯ್ಯ ಹೀಗೆಂದು ವರ್ಣಿಸುವುದು. ಅಂದಾಗ ಅರ್ಪಿಸುವ ಭಕ್ತನೆಲ್ಲಿ, ಅರ್ಪಿಸಿಕೊಳ್ಳುವ ದೇವನೆಲ್ಲಿ, ಅರ್ಪಿತ ಮಾಡುವ ಭಕ್ತನೆಲ್ಲಿ, ಅನರ್ಪಿತ ಭವಿ ಎಲ್ಲಿ? ಮನವೆ ಘನಲಿಂಗವಾದಲ್ಲಿ ಪ್ರಾಣಲಿಂಗ ನಾನಲ್ಲ. ಏಕೆಂದರೆ ನನ್ನ ಅನುಭಾವ ಬರಹೋಗುವ ಅನುಭವವಲ್ಲ. ಅಖಂಡ ಸುಖರೂಪವೆ ನಾನಾಗಿರುವಾಗ ಲಿಂಗಪತಿ ಶರಣಸತಿ ಎಂಬ ಭಿನ್ನಭಾವವನರಿಯೆ ಪರಾತ್ಪರ ಪರಮಾಮೃತ ವಾಙ್ಮನೋತೀತ ನಿಸ್ಥಲದವಳಾದುದರಿಂದ ಐಕ್ಯಳಾನಪ್ಪೆನಯ್ಯ . ಏಕೆಂದರೆ ನಿಃಸ್ಥಲದ ವರ್ತನೆ ತಾನಾರೆಂದರಿತ ವರ್ತನೆ ಅರಿಯದ ಮುನ್ನ, ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗ ಶರಣ ಐಕ್ಯವೆಂಬ ಸ್ಥಲವುಂಟು, ಮರವಿಂಗೆ ಸ್ಥಲವುಂಟು, ಅರುವಿಂಗೆ ಸ್ಥಲವಿಲ್ಲ. ಅದು ನಿಃಸ್ಥಲದ ವರ್ತನೆ ಯಾದುದರಿಂದ ಷಟ್‌ಸ್ಥಲಕ್ಕಿಂಬಿಲ್ಲ. ಪಂಚಾಚಾರಕ್ಕಿಂಬಿಲ್ಲ. ಇಲ್ಲಿ ಆದುದಿಲ್ಲ ಹೋದುದಿಲ್ಲ, ನಿಃಶಬ್ದ ಘನದ ಸ್ವಯಸುಖ ನೋಡಾ. ಅದುವೆ ತಾನರಿತ ನಿಲಯ. ಸ್ವಯನಿಲಯ, ಹಮ್ಮು ಬಿಮ್ಮು, ಇಲ್ಲದ ನಿಲಯವಾದುದರಿಂದ ನಿಃಸ್ಥಲದ ಪರಿಜ್ಞಾನಿ ನೋಡಾ ಎಂದು ಹೇಳಿದ್ದಾಳೆ.

ಹೀಗೆಂದು ಮಹಾದೇವಿಯಕ್ಕಗಳು ಆ ಪ್ರಭುದೇವರು ಮುಖ್ಯವಾದ ಎಲ್ಲಾ ಪುರಾತನರು ಬೀಳ್ಕೊಂಡ ಪ್ರಸಾವದ ವಚನ.

**73**

**ಒಡಲಿಲ್ಲದ ನುಡಿಯಿಲ್ಲದ ಕಡೆಯಿಲ್ಲದ**
**ನಲ್ಲನ ಒಡಗೂಡಿ ಸುಖಿಯಾದೆ ಕೇಳಿರಯ್ಯಾ .**
**ಭಾಷೆ ಪೈಸರವಿಲ್ಲ ಓಸರಿಸೆನನ್ಯಕ್ಕೆ ಆಶೆ ಮಾಡೆನು. ಮತ್ತೆ ಭಿನ್ನ ಸುಖಕ್ಕೆ**
**ಆರಳಿದು ಮೂರಾಗಿ, ಮೂರಳಿದು ಎರಡಾಗಿ ಎರಡಳಿದು ಒಂದಾಗಿ ನಿಂದೆನಯ್ಯಾ.**
**ಬಸವಣ್ಣ ಮೊದಲಾದ ಶರಣರಿಗೆ ಶರಣಾರ್ಥಿ.**
**ಪ್ರಭುವಿಂದ ಕೃತ ಕೃತ್ಯಳಾದೆನು ನಾನು .**
**ಮರೆಯಲಾಗದು, ನಾನು ನಿಮ್ಮ ಶಿಶುವೆಂದು ಎನ್ನನು,**
**ಚೆನ್ನಮಲ್ಲಿಕಾರ್ಜುನನ ಬೆರಸೆಂದು ಹರಸುತ್ತಿಹುದು.**

**ತಾತ್ಪರ್ಯ :** ಕರಣಂಗಳಿಲ್ಲದ ಕೈವಲ್ಯ ಘನ, ನೆನಹೂ ನಿರ್ಣಯಕ್ಕೂ ಮೀರಿದ ಅಚಿಂತ್ಯಘನ, ಶೃತಿಗೂ ಶಾಸ್ತ್ರಕ್ಕೂ ಅಸಾಧ್ಯನಾದುದರಿಂದ ನಿಃಶಬ್ದ ಘನ ಭಾವಕ್ಕಿಂಬುಕೊಡದ ಘನ. ನುಡಿನಡೆಗಿಂಬು ಗೊಡದ ಘನ, ಘನಕ್ಕೆ ಘನವಾದವಂಗೆ ಆದಿಯಿಲ್ಲ ಅಂತ್ಯವಿಲ್ಲ ,ಅಲ್ಲಿ ಏನೊಂದುಸುರಲು ಬಾರದ ನಲ್ಲನ ಕೂಡಿ ಸುಖಿಯಾದೆನಯ್ಯ. ಆ ಸವೆಯದ ಸುಖ ಬ್ರಹ್ಮಾನಂದದ ಬುದ್ಬದ ಬುಗ್ಗಿಯು, ಅದನಾರಯ್ಯ ಹೀಗೆ ಎಂದು ವರ್ಣಿಸುವುದು. ಅಲ್ಲಿ ನಾನೆಂಬುದಿಲ್ಲ ಅನ್ಯವೆಂಬುದಿಲ್ಲ, ಹೇಗೆ ಸುಷುಪ್ತಿ ಸುಖದಲ್ಲಿ ಆವುದು ತೋರುವುದಿಲ್ಲವೆಂಬುದು ಸಕಲರ ಅನುಭವಕ್ಕೆ ವೇದ್ಯವು ಹೇಗೊ

ಹಾಗೆ ಏನೊಂದುಸುರಲು ಎಡೆಗೊಡದ ಘನವೆಂಬ ನಲ್ಲನ ಒಡಗೂಡಿದ ಸುಖ ; ಅದು ಹಾಗೆ ಹೀಗೆ ಎಂದು ಹೇಳಲು ಬರುವದಲ್ಲ, ಅಲ್ಲಿ ಅರಿತೆ ಅರೆಯೆನೆಂಬುದಿಲ್ಲ, ತಿಳಿಯುವುದಿಲ್ಲ ತಿಳಿಸಿಕೊಳ್ಳುವದಿಲ್ಲ. ಪರೋಕ್ಷ ಅಪರೋಕ್ಷಗಳಂತೆ ಉಂಟೆಂದು ಹೇಳಲು ಬರದು. ಈಗ ತಿಳಿದ ಕಾಲಕ್ಕೆ ಏನೊಂದುಸುರಲು ಬಾರದ ಘನವಲ್ಲ, ತಿಳಿಯುವದಕ್ಕಿಂತ ಮುನ್ನವೂ ಹೀಗೆಯೆ ಇದೆ. ಅಂದು ಇಂದು ಎಂದೆಂದೂ ನಿರಂತರ ಇದ್ದಕ್ಕಿದ್ದಂತೆ ಇದೆ. ಇದರ ಸಮಾನವಾದ ಇನ್ನೊಂದು ವಸ್ತುವಿಲ್ಲ. ಇದಕ್ಕಿಂತ ಹೆಚ್ಚಿನದಿಲ್ಲ. ಇಲ್ಲಿ ಪ್ರಕೃತಿ ಪುರುಷನೆಂಬ ವಿಭಾಗ ದೃಷ್ಟಿಗಾಸ್ಪದವಿಲ್ಲ. ಗುಣಗುಣಿ ಎಂಬ ವಿಭಾಗಕ್ಕಿಂಬಿಲ್ಲ. ಇಲ್ಲಿ ಸಾವಯವ ನಿರವಯವಾವುದೊ ನಾನಾರಿಯೆ ? ನಿದ್ರೆಯಲ್ಲಿ ಸುಖವನ್ನು ಸವಿಯುವ ನಿದ್ರಿತನಿಗೆ ಆ ಸುಖದ ಕಥನ ಮಾಡಲು ಬರದು. ಎಚ್ಚರವಾದ ಮೇಲೆ ಆ ಸುಖವ ವರ್ಣಿಸಲು ಹೇಗೆ ಬರದೋ ಹಾಗೆ ಏನೊಂದುಸುರಲು ಬಾರದ ನಲ್ಲನೊಡಗೂಡಿ ಸುಖ ಸವಿಯುವಾಗಾದರೂ ಆ ಸುಖವ ಆವಾವ ಭಾಷೆಯಿಂದ ಹೇಳಲು ಬರದು ; ಬಹಿರ್ಮುಖವಾದಾಗಲೂ ಆ ಸುಖವ ವರ್ಣಿಸಲಾಗದು. ಅದು ಅಕ್ಷಯ ಸುಖ, ಸ್ವಯ ಸುಖವಾದುದರಿಂದ ಆವಾವ ಸುಖಕ್ಕೂ ಆಶೆ ಮಾಡೆನು. ಈ ಸುಖದಾಶೆಯ ಬಿಟ್ಟು ಅನ್ಯ ಆವಾವ ಆಶೆ ಮಾಡೆನು. ಇಂಥ ಸುಖಕ್ಕಾಗಿ ಆರಳಿದು ಅಂದರೆ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಚರಲಿಂಗ, ಭಾವಲಿಂಗ, ಜ್ಞಾನಲಿಂಗ, ಇವು ಹೊರಗೆ ತೋರುವ ಲಿಂಗವೆಂದು ತೋರಿಸಿ ಇಷ್ಟಲಿಂಗ, ಪ್ರಾಣಲಿಂಗ, ಭಾವ ಲಿಂಗ ಮಾಡಿದಿರಿ. ನಾನು ಈ ಮೂರನು ಪ್ರೀತಿಯಿಂದ ಅರ್ಚಿಸಿ ಮೂರಾದೆ. ಈ ಮೂರಳಿದು ಎರಡಾದೆ . ಅಂದರೆ ಇಷ್ಟ ಪ್ರಾಣ ಭಾವವೆಂದು ವಿಭಾಗಿಸುವದು ಬಿಟ್ಟು ಶರಣಸತಿ, ಲಿಂಗಪತಿ ಎಂಬ ಈ ದ್ವಿತೀಯ ಭಾವವುಳ್ಳವಳಾದೆ. ಪುನಃ ಎರಡು ಭಾವವ ಮೀರಿ ಒಂದಾದೆ. ಅಂದರೆ ಎರಡಳಿದು ಒಂದಾದೆ. ಅಂದರೆ ಅಂಗವೆ ಲಿಂಗ ಲಿಂಗವೆ ಅಂಗವೆಂದರಿತಲ್ಲಿಯೆ ಅಲ್ಲಿಯೆ ಕಾಣಿರೊ ಕೂಡಲ ಚನ್ನಬಸವಣ್ಣ.

ಲಿಂಗ ನಿರಂತರ ಅಲ್ಲಿಯೆ ಕಾಣಿರೊ ಎಂದಂತೆ ಲಿಂಗ ಅಂಗ, ಅಂಗ ಲಿಂಗವೆಂದು ಲಿಂಗವೆಂಬುದೊಂದೆ ಆಗಿ ನಿಂದನೆಯ್ಯ; ಬಸವಣ್ಣ ಮೊದಲಾದ ಶರಣರಿಗೆ ಶರಣು ಶರಣಾರ್ಥಿ. ಬಸವಣ್ಣನಿಂದ ಹಿಡಿದು ಚನ್ನಬಸವಣ್ಣ, ಹಡಪದಪ್ಪಣ್ಣ , ಕಿನ್ನರ ಬೊಮ್ಮಯ್ಯ , ಮಡಿವಾಳ ಮಾಚಿ ತಂದೆ, ಸಿದ್ದರಾಮ ಶಿವಯೋಗಿ ತಂದೆ, ಬಾಚಿರಾಜ ತಂದೆ, ಇವರೆಲ್ಲರಿಗೂ ಶರಣು ಶರಣಾರ್ಥಿ. ನೀವೆಲ್ಲರೂ ಲಿಂಗಸ್ವರೂಪರು, ಲಿಂಗೈಕ್ಯರು, ಲಿಂಗಾಂಗ ಸುಖದೊಳಿಪ್ಪಗಮ್ಯರು, ಅಪ್ರಮಾಣರು, ಅಚಿಂತ್ಯರು, ಪ್ರಭುದೇವರಿಂದ ಕೃತ ಕೃತಳಾದೆ.

ಅಯ್ಯ ಪ್ರಭುದೇವರಿಂದ ತಿಳಿಯಬೇಕಾದದ್ದು ತಿಳಿದಂತಾಯಿತ್ತು . ಪಡೆಯಬೇಕಾದದ್ದು ಪಡೆದದ್ದಾಯಿತು. ಒಲಿಯಬೇಕಾದದ್ದು ಒಲಿಯಿತು. ತಿಳಿಯುವದು ತಿಳಿದಲ್ಲಿ, ಪಡೆಯುವದು ಪಡೆದಲ್ಲಿ, ಒಲಿಯುವದು ಒಲಿದಲ್ಲಿ, ಇನ್ನು ನನ್ನ ಕರ್ತವ್ಯವೆ ಇತಿ ಆದುದರಿಂದ ಕೃತಕೃತ್ಯಳಾದೆಳೆಂದು ಹೇಳಿದ್ದಾಳೆ. ಆದರೆ ನಾನು ನಿಮ್ಮ ಶಿಶು ಎಂಬುದು ಮರೆಯಲಾಗದು ಎಂದು ಹೇಳಿದುದು. ಇದು ಅಹಮಿಲ್ಲದ ಭಾವ, ನಿರಾಡಂಬರ ನಿರಾಲಂಬ ನೊಡಗೂಡಿದ ತೇಜ. ತುಂಬಿ ತುಳಕದ ಭಾವ, ಮನಮೇರೆದಪ್ಪಿದ ಘನ ಸುಖವ ಕಂಡರೂ ಇನ್ನು ಎನ್ನನು ಚೆನ್ನಮಲ್ಲಿಕಾರ್ಜುನಾ ಅಪ್ಪು ಆಲಂಗಿಸು. ನಿನ್ನ ಒಡಲಿಲ್ಲದ ಕಡೆ ಮೊದಲಿಲ್ಲದ ಪರಿಪೂರ್ಣದೊಳ್ ಪರಮಸುಖಿಯಾಗಿರು ಎಂದು ಹರಸುತ್ತಿದ್ದಳು.

**ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ , ಬೆಳೆದೆನು ಅಸಂಖ್ಯಾತರ**
**ಕರುಣದೊಳಗೆ ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ,**
**ಪರಮಾರ್ಥವೆಂಬ ಸಕ್ಕರೆಯ ನಿಕ್ಕಿದರು ನೋಡಾ.**
**ಇಂತಪ್ಪತ್ರಿವಿಧಾಮೃತವ ದಣಿಯಲೆರೆದು ಸಲುಹಿದರೆನ್ನ.**
**ವಿವಾಹವ ಮಾಡಿದಿರಿ, ಸಯವಪ್ಪ ಗಂಡಂಗೆ ಕೊಟ್ಟಿರಿ.**
**ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರು**
**ನೆರೆದು ಬಂದಿರಿ. ಬಸವಣ್ಣ ಮೆಚ್ಚಲೊಗೆತನವ ಮಾಡುವೆ.**
**ಚೆನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ತಲೆಗೆ ಹೂವು ತರುವೆನಲ್ಲದೆ ಹುಲ್ಲ ತಾರೆನವಧರಿಸಿ**
**ನಿಮ್ಮಡಿಗಳೆಲ್ಲರೂ ಮರಳಿ ಬಿಜಯಂಗೈದರು ಶರಣು ಶರಣಾರ್ಥಿ.**

**ತಾತ್ಪರ್ಯ :** ಶ್ರೀಗುರು ಹಸ್ತದಲ್ಲಿ ಹುಟ್ಟಿದುದು ನನ್ನದೆಂಥ ಪುಣ್ಯ , ನನ್ನದೆಂಥ ಭಾಗ್ಯ . ಇದು ಒಂದು ಜನ್ಮಂಗಳಲ್ಲಿ ಮಾಡಿದ ನಿಷ್ಕಾಮ ಪುಣ್ಯವಲ್ಲ. ಅನಂತ ಜನ್ಮಂಗಳ ನಿಷ್ಕಾಮನಾ ಪುಣ್ಯದ ಫಲದ್ರೂಪವೆ ಶ್ರೀಗುರುವಿನ ಹಸ್ತದಲ್ಲಿ ಹುಟ್ಟಿದುದು ಎಂದೆನಿಸುತ್ತದೆ. ಇದು ಸರಿಯಾಗದು, ಶ್ರೀಗುರುವೆ ತನ್ನಂತೆ ಮಾಡಿಕೊಳ್ಳಲು ಭರ್ಗೋಸಾಕ್ಷಾತ್ ನರಾಕೃತಿ ಎಂಬಂತೆ ಚಿನ್ಮಯ ದೇವನೆ ಕರುಣೆಯಿಂದ ತಾನಾಗಿಯೆ ಇದು ತನ್ನ ಕರುಣೆಯ ಶಿಶುವಾಗಬೇಕೆಂದು ಇಚ್ಛಿಸಿದಾಗ ಶ್ರೀ ಗುರುವಿನ ಹಸ್ತ ಹುಟ್ಟಿದುದು ಸಾಧ್ಯ. ಅದಕ್ಕಾಗಿ ಶ್ರೀಗುರು ಚಿನ್ಮಯಾನಂದ ಜ್ಞಾನಮೂರ್ತಿ, ಅರು ಸ್ವರೂಪ. ಈತನ ಹಸ್ತವೆಂದರೆ ಸ್ವಯಂ ಪ್ರಕಾಶದ ಹಸ್ತ. ಇದು ಅನನ್ಯ ಭಕ್ತ ವೃಂದಕ್ಕೆ ಜ್ಞಾನಾಮೃತ ಹಸ್ತ, ನಿರಂಕುಶ ತೃಪ್ತರೂಪ ತೃಪ್ತಿಯ ಹಸ್ತ, ಅಭಯ ಹಸ್ತ, ಇದರ ಘನವ ಅದಾರು ಬಲ್ಲರು!

ಜ್ಞಾನಿ ಭಕ್ತರಾದ ಜನಕ ಮಹಾರಾಜನು ಲೋಕದೃಷ್ಟಿಗೆ ರಾಜನಾಗಿ ರಾಜ್ಯವಾಳಿದರೂ ವಿದೇಹಿಯಾಗಿದ್ದನು. ಇದು ಶ್ರೀ ಗುರುವಾದ ಅಷ್ಟಾವಕ್ರ ಮುನಿಯ ಹಸ್ತದಲ್ಲಿ ಹುಟ್ಟಿದ ಘನವಲ್ಲವೆ? ನಿರ್ಭಯ ನಿಶ್ಚಿಂತರಾಗಬೇಕೆಂದಲ್ಲಿ ಶ್ರೀಗುರುವಿನ ಹಸ್ತದಲ್ಲಿ ಹುಟ್ಟಲೇಬೇಕು. ಚನ್ನಬಸವಣ್ಣ ಷಟ್‌ಸ್ಥಲ ಚಕ್ರವರ್ತಿಯಾದುದು ಶ್ರೀಗುರುವಿನ ಹಸ್ತದಲ್ಲಿ ಹುಟ್ಟಿದ ಘನವೆ ಆಗಿದೆ. ಅಲ್ಲಮಪ್ರಭು ಮಾಯಾ ಕೋಲಾಹಲ ಮಾಡಿ ಸಕಲ ಶರಣರಿಂದಲೂ ಪ್ರಭುವೆನಿಸಿಕೊಂಡ ಘನತ್ವ ಶ್ರೀಗುರುವಿನ ಹಸ್ತದಲ್ಲಿ ಹುಟ್ಟಿದ ಘನವೆ ಆಗಿದೆ. ಗುರುಲಿಂಗ ಉದಯವಾದವರ ಉದಯವ ನೋಡಿರೆ ! ಹಿಂದೆ ಕತ್ತಲು ಮುಂದೆ ಬೆಳಗಾಯಿತ್ತು . ಬೆಳಗು ಬೆಳದಿಂಗಳಾಯಿತ್ತು . ಕೂಡಲ ಚೆನ್ನಸಂಗಯ್ಯನಲ್ಲಿ ಏಕಾರ್ಥವಾಯಿತ್ತು. ಶ್ರೀಗುರುವಿನ ಹಸ್ತದಲ್ಲಿ ಉದಯವಾದ ಚನ್ನಬಸವದೇವರು ; ಹಸ್ತದಲ್ಲಿ ಉದಯವಾದ ಘನವ ವರ್ಣಿಸಿರುವರು. ಶ್ರೀಗುರುವಿನ ಹಸ್ತವೆಂದರೆ ಪ್ರಕಾಶಿತ ಪ್ರಕಾಶವಾಗಿ ಬೆಳಗುವ ಹಸ್ತವಲ್ಲ . ನಿರಂತರ ಸ್ವಯಂ ಜ್ಯೋತಿ. ತಾನೆ ತಾನಾಗಿ ಬೆಳಗುವ ಬೆಳಗು, ನಿರ್ವಿಕಾರ ಬೆಳಗು, ಪರಾತ್ಪರ ಬೆಳಗು, ನಿಸ್ಸೀಮ ಬೆಳಗು. ಇಲ್ಲಿ ಜ್ಞಾನ, ಅಜ್ಞಾನವದುವೆ, ಬಂಧ ಮೋಕ್ಷವದುವೆ ದ್ವೈತ ಅದುವೆ ಅದ್ವೈತ ಅದುವೆ ಇದು ಖಂಡಿತವಿಲ್ಲದ ಅಖಂಡಿತ ನಿಲಯ, ಸುಖದ ಸುಖಾಲಯ, ಅಚಿಂತ್ಯಾಲಯ, ಮನ ಮೇರೆದಪ್ಪಿದ ಪರಿಪೂರ್ಣಾಮೃತವಾದುದರಿಂದ ಬೆಳಗು ಬೆಳದಿಂಗಳಾಯಿತ್ತು.

ಕೂಡಲ ಚೆನ್ನ ಸಂಗಯ್ಯನಲ್ಲಿ ಏಕಾರ್ಥ ನಿಲಯವಾದುದರಿಂದ ಏಕಾರ್ಥವಾಯಿತ್ತು . ಈ ಏಕಾರ್ಥನಿಲಯವೆ ಶ್ರೀಗುರು ಹಸ್ತದಲ್ಲಿ ಹುಟ್ಟಿದ ಘನವೆ ಆಗಿದೆ. ಬೆಳೆದೆನು ಅಸಂಖ್ಯಾತರ

ಕರುಣದೊಳಗೆ, ಹುಟ್ಟಿದುದು ಗುರುಹಸ್ತದಲ್ಲಿ, ಬೆಳೆದೆನು ಅಸಂಖ್ಯಾತರ ಕರುಣದೊಳಗೆ, ಇದೆಂಥ ವಿಶೇಷ ಪುಣ್ಯ! ಅಸಂಖ್ಯಾತರೆಂದರೆ ಗುಣಾತೀತರು, ಭಾವಾತೀತರು, ಜ್ಞಾನಾತೀತರು. ಅತೀತರು ಅಂದರೆ ಏನೊಂದಾಗದ ಘನವಂತರು, ಅಪ್ರಮಾಣರು. ಈ ಘನಮಹಿಮರ ಕರುಣೆಯಲ್ಲಿ ಬೆಳೆಯುವುದೆಂದರೆ ಸಾಮಾನ್ಯವೆ! ಈ ಕರುಣ ಸಾಮಾನ್ಯವೆ!  ಅದನಾರು ಬಲ್ಲರು ಭಾವರೂಪ ಹಾಲು, ಸುಜ್ಞಾನರೂಪ ತುಪ್ಪ, ಪರಮಾರ್ಥರೂಪ ಸಕ್ಕರೆಯನಿಕ್ಕಿ ತ್ರಿವಿಧಾಮೃತ ಮಾಡಿ ಮನದಣಿಯುವಂತೆ ತೃಪ್ತಿಯಾಗುವಂತೆ ಉಣಿಸಿ ಬೆಳೆಸಿದುದು ಇದೆಂಥ ಕರುಣೆ! ಈ ತ್ರಿವಿಧಾಮೃತ ಸೇವಿಸಿ ಬೆಳೆದ ಕೂಸಿಗೆ, ಮರುಜವಣಿಯ ಸೇವಿಸಿದವಂಗೆ ಮರಣದ ಭೀತಿಯೆ! ಅಸಂಖ್ಯಾತರ ಕರುಣೆಯಲ್ಲಿ ಬೆಳೆದವಳಿಗೆ ಕರಣಂಗಳ ಕಲ್ಪನೆಯೆ ? ಅವುಗಳ ವಿಕಲ್ಪದ ಭೀತಿಯೆ ? ಅಲ್ಲಿ ಸಂಕಲ್ಪವಾವುದು  ವಿಕಲ್ಪವಾವುದು ? ಮತಿ ಆವುದು  ಗತಿ ಆವುದು ? ಅಚಿಂತ್ಯರ ಕರುಣೆಯಲ್ಲಿ ಬೆಳೆದವಳಿಗೆ ಚಿಂತೆ ಆವುದು  ಭಯವಾವುದು ? ಕೆಡುವುದಾವುದು  ಕೆಡದ್ದಾವುದು ? ಅಕ್ಷಯ ಸುಖದವರ ಕರುಣೆಯಲ್ಲಿ ಬೆಳೆದವಳಿಗೆ ಅಲ್ಲಿ ಅಳಿದ ಭಾವವಾವುದು  ಉಳಿದ ಭಾವವಾವುದು? ಭರಿತ ಭಾವ, ತುಂಬಿ ತುಳುಕದ ಭಾವರೂಪಿ ಹಾಲು ಸುಜ್ಞಾನರೂಪಿ ತುಪ್ಪ, ಪರಮಾರ್ಥರೂಪ ಸಕ್ಕರೆ ಈ ಮೂರು ಏಕ ಮಾಡಿ ಪಾನ ಮಾಡಿದ ತ್ರಿವಿಧಾಮೃತಳು. ಈ ತ್ರಿವಿಧಾಮೃತದಲ್ಲಿ ಮೊದಲನೆಯದಾದ ಭಾವರೂಪ ಹಾಲು ನೋಡಿರೆ? ಈ ಭಾವರೂಪ ಹಾಲು ತುಂಬಿ ತುಳುಕದ ಹಾಲು, ಅಂದರೆ ಭರಿತ ಭಾವ ಪೂರ್ಣಭಾವ ಅನಂತನ ಭಾವ, ಸಕಲ ನಿಃಕಲ ತಾನಾದ ಭಾವ, ಕ್ಷರ ಕಾಣದ ಅಕ್ಷರ ಒಂದಾದ ಭಾವ, ಸ್ಥಾವರ ಜಂಗಮ ಒಂದಾದ ಭಾವ, ಗುರು ಶಿಷ್ಯರು ಒಂದಾದ ಭಾವ, ಬಂಧ ಮೋಕ್ಷ ಕಾಣದ ಭಾವ, ಅಖಂಡ ಭಾವ, ಇಲ್ಲಿ ಪ್ರಕೃತಿ ಪುರುಷರೊಂದಾದ ಭಾವವಾದುದರಿಂದ ನಿಸ್ಸೀಮ ಭಾವ, ಅದ್ವಿತೀಯ ಭಾವ, ಏಕಾತ್ಮಭಾವ, ಮನಮೇರೆದಪ್ಪಿದ ಭಾವ, ಎಲ್ಲಿನೋಡಿದಡಲ್ಲಿ ಪರಿಪೂರ್ಣಭಾವ ಕರಿಗೊಂಡಿರುವುದರಿಂದ ಸರ್ವಾಂಗ ಲಿಂಗಭಾವ ನೋಡಾ.

ಸುಜ್ಞಾನವೆಂಬ ತುಪ್ಪದ ಘನವ ನೋಡಿರೆ : ಅರುವಿನ ಇರುವು ಜ್ಞಾನದ ಜ್ಞಾನ ಇವುಗಳ ಅರಿವು ಆಗುವುದು. ಅದಕ್ಕಾಗಿ ನಿರಾಳ ನಿರ್ವಿಕಾರ, ನಿಜೈಕ್ಯ ನಿಂದ ನಿಲುವೆ ಪರಾತ್ಪರ ಜ್ಞಾನವು. ಅದುವೆ ಸುಜ್ಞಾನವೆಂಬ ತುಪ್ಪವಾಗಿಹುದು ನೋಡಾ. ಈ ಸುಜ್ಞಾನವೆಂಬುದು ಅಪಾರವು. ಇದು ದಿವ್ಯದೃಷ್ಟಿಗೆ ಗೋಚರ, ಇಲ್ಲಿ ಭೇದಜ್ಞಾನ ನಷ್ಟ, ಅಭೇದ ಜ್ಞಾನವು ನಷ್ಟ, ಎರಡೆಂಬುದು ನಷ್ಟ, ಒಂದೆಂಬುದು ನಷ್ಟ, ಕ್ಷರನೆಂಬುದಿಲ್ಲ, ಅಕ್ಷರನೆಂಬುದಿಲ್ಲ, ಅಖಂಡೈಕರಸವಿರುವುದರಿಂದ ಇಲ್ಲಿ ಭವಿ ಭಕ್ತರೆಂಬ ವಿಭಾಗಕ್ಕಿಂಬಿಲ್ಲ ಅರಿತೆ ಅರಿಯೆನೆಂಬುದಕ್ಕಿಂಬಿಲ್ಲ, ಸಂಗ ನಿಸ್ಸಂಗನೆಂಬುದಕ್ಕಿಂಬಿಲ್ಲ, ಪ್ರಿಯವಾದುದಿಲ್ಲ, ಅಪ್ರಿಯವಾದುದಿಲ್ಲ, ತನಗಿಂತನ್ಯವಾದುದು ಆವುದು ಇಲ್ಲ. ತಾನೆ ತಾನಾದ ಘನವೆ ಸ್ವಯ ಘನ. ಇದರ ಯತಾರ್ಥ ಅರುವೆ ಸುಜ್ಞಾನ. ಇದುವೆ ಸುಜ್ಞಾನವೆಂಬ ತುಪ್ಪ ನೋಡಾ.

ಪರಮಾರ್ಥವೆಂಬ ಸಕ್ಕರೆ ನೋಡಿರೆ : ಪರಮಾರ್ಥವೆಂಬುದು ನೆಲದ ಮರೆಯ ನಿಧಾನ ನೋಡಿರೆ? ಪರಮಾರ್ಥವದು ಕಂಡ ಕಂಡಲ್ಲಿ ನಿಂತ ನಿಂತಲ್ಲಿ .ಬಂದ ಬಂದಲ್ಲಿ ಎಲ್ಲಿಬೇಕಲ್ಲಿ ಪ್ರಕಟವಾಗುವ ಪರಮಾರ್ಥವಲ್ಲ. ಅನಂತ ಜನ್ಮಂಗಳ ಸುಕೃತ ಕೈಗೂಡಿದಾಗ ಶ್ರೀ ಗುರು ಘನನ ಕೃಪೆಯಾದಾಗ ಶಿವನೊಲಿದಾಗ ಪರಮಾರ್ಥವೆಂಬುದು ಪರಮಜ್ಞಾನ ಪರಮಾನಂದ ಪರಮಾಮೃತ. ಅದುವೆ ತಾನೇ ತಾನಾಗಿಪ್ಪ ಸುಖಾಮೃತವೆಂಬುದು ತನ್ನಿಂದ ತನಗದು ವೇದ್ಯವಾಗುವುದು. ಇಂತಪ್ಪ ತ್ರಿವಿಧಾಮೃತವೆಂಬುದು ಅಖಂಡಾಮೃತ ಭಾವ, ಸುಜ್ಞಾನ, ಪರಮಾರ್ಥ ಒಂದಾದುದೆ

ತ್ರಿವಿಧಾಮೃತವು. ಭಾವವೆಂಬ ಹಾಲು ಜ್ಞಾನಾಮೃತವೆ. ಸುಜ್ಞಾನವೆಂಬ ತುಪ್ಪವು ಜ್ಞಾನಾಮೃತವೆ. ಪರಮಾರ್ಥವೆಂಬ ಸಿಹಿಯು ಜ್ಞಾನಾಮೃತವೆ. ಜ್ಞಾನಾಮೃತವೆಂಬುದು ಅಚಿಂತ್ಯವು. ಹಳ್ಳಗಳಾಗಲಿ ಹೊಳೆಗಳಾಗಲಿ, ನದಿಗಳಾಗಲಿ, ಸಮುದ್ರನಾಥನನ್ನು ಸೇರಲು ಪ್ರವಾಹವು ಸೇರಿದ ಬಳಿಕ ಪ್ರವಾಹ ನಿಂತು ಬಿಡುವದು. ಆಗ ಸಾಗರದ ಹೆಸರಿನಿಂದ ಕರೆಯಿಸಿ ಕೊಂಡಂತೆ, ಭಾವ ಸುಜ್ಞಾನ ಪರಮಾರ್ಥ ಈ ಮೂರರ ಪ್ರವೃತ್ತಿ ಅಚಿಂತ್ಯ ಸುಖಕ್ಕಾಗಿ ಅಲ್ಲವೆ? ಈ ಮೂರು ಅಚಿಂತ್ಯ ಸುಖದ ಗುರಿಯಿಟ್ಟುಕೊಂಡೇ ಇವುಗಳ ಉಗಮವಾಗಿದೆ. ಪುನಃ ತನ್ನ ಮೂಲದ ದರ್ಶನವಾಗುವುದೇ ಅಚಿಂತ್ಯ ಪದವೆಂಬುದು ಸ್ವತಃ ಸಿದ್ದವು.

ಇಂತಪ್ಪ ತ್ರಿವಿಧಾಮೃತವ ಬೇಸರ ಪಡದೆ ಅತಿ ಕಳಕಳಿಯಿಂದ ಮನದಣಿಯುವಂತೆ. ಅಂದರೆ ದೃಢಜ್ಞಾನವಾಗುವಂತೆ ಬೋಧ ಮಾಡಿದರು. ಅರ್ಥಾತ್ ಲಿಂಗಾಂಗ ಸಾಮರಸ್ಯವೆಂಬ ಘನ ತತ್ವವ ಘನ ಲಿಂಗದೊಡನೆ ಎನ್ನ ವಿವಾಹ ಮಾಡಿದರು. ನನ್ನಂತಿರುವ ಗಂಡಂಗೆ ಕೊಟ್ಟರು. ಅಂದರೆ ನನ್ನ ಸ್ವರೂಪದಂತಿರುವ ನನ್ನ ಹಾಗೆ ಇದ್ದವನಿಗೆ ಕೊಟ್ಟರು. ಅರ್ಥಾತ್ ನಿನ್ನ ಸ್ವರೂಪವೆ ಚೆನ್ನಮಲ್ಲಿಕಾರ್ಜುನನ ಸ್ವರೂಪ. ಚೆನ್ನ ಮಲ್ಲಿಕಾರ್ಜುನನ ಸ್ವರೂಪವೇ ನಿನ್ನ ಸ್ವರೂಪವೆಂದು, ಸ್ವಸ್ವರೂಪವೆಂಬುದು ಈರ್ವರದು ಒಂದೇ ಎಂದು ಸಿದ್ಧ ಮಾಡುವುದೇ ಗಂಡಂಗೆ ಕೊಟ್ಟಂತೆ. ಈಗ ಕೊಟ್ಟ ಮನೆಗೆ ಕಳುಹಲು ಅಸಂಖ್ಯಾತ ಶರಣರು ಶರಣೆಯರು ಸಮ್ಯಜ್ಞಾನಿಗಳು, ಶಿವಯೋಗಿಗಳು, ಗುರುವೃಂದವು, ಜಂಗಮವೃಂದವು, ಸದ್ಭಕ್ತರು, ಸದ್ಭಾವ ಸಂಪನ್ನರು, ಸರ್ವರು ಬಂದಿರುವಿರಿ.

ಬಸವಣ್ಣನವರು ಮೆಚ್ಚುವಂತೆ ಪರಮಾರ್ಥ ಸಂಸಾರ ಮಾಡುವೆ. ಸದಾ ಚೆನ್ನಮಲ್ಲಿಕಾರ್ಜುನನ ಕೈವಿಡಿದು ಅವನ ಅಕ್ಷಯ ಸುಖದಲ್ಲಿರುವ ಅವನ ಸಂಗದ ಸುಸಂಗಿಯಾಗಿ ಬಾಳುವೆ ಮಾಡುವೆ. ನಿರ್ಗಮನದ ಗಮನಿಯಾಗಿ ಸಂಚರಿಸುವೆ. ನಿಮ್ಮಗಳಿಗೆ ಕೀರ್ತಿ ತರುವೆ. ಅಪಕೀರ್ತಿ ತರಲಾರೆ. ಅಂಗ ಬುದ್ಧಿಯುಳ್ಳವಳಾಗಲಾರೆ. ಲಿಂಗಾಂಗ ಸಮರಸ ಬದ್ಧಿಯುಳ್ಳವಳಾಗಿ, ನಿಮ್ಮ ಸ್ವಮಹಿಮೆಯ ಸ್ವಾನುಭವದಿಂ ಪರತತ್ವ ಪ್ರಕಾಶಿಸಲು ತಾವುಗಳೆಲ್ಲರು ಆಶೀರ್ವದಿಸಿರಿ ಎಂದು ಹೇಳಿ ಎಲ್ಲರಿಗೂ ಕರ ಜೋಡಿಸಿ ನಿಂತಿದ್ದಾಳೆ. ಮತ್ತು ತಾವೆಲ್ಲರೂ ದಯ ಮಾಡಿಸಿರಿ ಇನ್ನು ನನ್ನ ಗಂಡನ ಮನೆಯಾದ ಶ್ರೀಗಿರಿಗೆ ಹೋಗುವೆನೆಂದು ಸರ್ವರಿಗೂ ನಮಸ್ಕರಿಸಿ ಹೋದಳು.

ಇಂತು ಮಹಾದೇವಿಯಕ್ಕಗಳು ಬಸವರಾಜದೇವರು ಚೆನ್ನಬಸವರಾಜದೇವರು ಪ್ರಭುದೇವರು ಮುಖ್ಯವಾದ ಅಸಂಖ್ಯಾತರು ಬೀಳ್ಕೊಂಡು ಕಲ್ಯಾಣ ಪರಮಾಪುರಮಟ್ಟು ಬರುತ್ತಾ ಅಸಂಖ್ಯಾತರ ವಿಯೋಗದಿಂದ ಅವಸ್ಥೆಯಿಂದ ನುಡಿದ ಪ್ರಸ್ತಾವದ ವಚನ.

75

**ಅಯ್ಯಾ ನಿಮ್ಮ ಮಹಾಂತರ ಕೂಡಿದ ಸುಖವನುಪಮೆಗೆ**
**ತರಬಾರದಯ್ಯಾ. ನಿಮ್ಮ ಮಹಾಂತರ ಕೂಡಿ ಅಗಲುವ ಧಾವತಿಯಿಂದ**
**ಸಾವುದು ಕರಲೇಸಯ್ಯಾ. ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ನಿಜವ**
**ನರಿದ ಮಹಾಮಹಿಮರನಗಲಿ ನಿಲಲಾರೆನಯ್ಯ.**

**ತಾತ್ಪರ್ಯ :** ಅಯ್ಯಾ! ನಿಮ್ಮ ಮಹಾಂತರೆಂದರೆ ಅದು ನಿಮ್ಮ ಸ್ವರೂಪ. ಅಯ್ಯಾ ಚೆನ್ನಮಲ್ಲಿಕಾರ್ಜುನಯ್ಯ ನಿನ್ನಲ್ಲಿ ಸಮರಸವಾದ ಸವೆಯದ ಸುಖವೆ ನಿಮ್ಮ ಮಹಾಂತರ ಕೂಡಿದ

ಸುಖವಿರುವಾಗ ಅದು ಹಾಗೆ ಹೀಗೆ ಎಂದು ಉಪಮಿಸಬಹುದೆ? ಅದಕ್ಕಾಗಿ ನಿಮ್ಮ ಮಹಾಂತರೆಂದರೆ ನೀವೆ ಪರಾತ್ಪರ ಪರವಸ್ತು, ಘನಕ್ಕೆ ಘನ. ಇವರನ್ನು ಕೂಡಿದ ಸುಖ ಉಪಮೆಗೆ ಬಾರದ್ದರಿಂದ ಇವರು ಅನುಪಮರು, ಅಪ್ರತಿಮರು ಅದಕ್ಕಾಗಿ ಇವರು ಕಾಣಬಾರದ ಘನ. ಇಂಥ ಘನಮಹಿಮರು ನಿಮ್ಮ ಕೃಪೆಯಿಂದ ಕಂಡ ಸುಖವ ಅದನೆಂತು ವರ್ಣಿಸುವದು.

ನಿಮ್ಮ ನೋಟ ಅವಾವುದನ್ನು ನೋಡದ ನೋಟವಾದುದರಿಂದ ಅದು ಅಚಿಂತ್ಯ ಘನ ನೋಡಾ. ನಿಮ್ಮ ಕೂಟ ಸವೆಯದ ಸುಖದ ಕೂಟ. ಇದನೇನೆಂಬೆ, ಏನೆಂಬೆ ತಾನಿದಿರೆಂಬೆರಡರಿಯದ ಕಾಣಬಾರದ ಕಂಗಳುಳ್ಳ ಕೂಡಿದ ಸುಖವನೇನೆಂಬೆ, ಏನೆಂಬೆ. ಧ್ಯಾನ ಧ್ಯೇಯ ನಷ್ಟವಾಗಿ ತಾನೆ ತಾನಾದ ಸ್ವಮಹಿಮ್ನನ ಸುಖವನೇನೆಂಬೆ, ಅರುವಿನ ಅಹಂಕಾರವ ಹರಿದು ಮರವೆ ನಷ್ಟವಾದ ಮಹಿಮರ ಸುಖವ ಉಪಮೆಗೆ ತರಬಾರದಯ್ಯಾ .

ಅರು ಮರವ ಕುರುಹಳಿದ ನಿಶ್ಚಿಂತರ ನಿರವಯವಡಗಿ, ಗತಿಮತಿ ನಷ್ಟವಾಗಿದ್ದ ಮಹಾಂತರ ಸುಖವ ಉಪಮೆಗೆ ತರಬಾರದಯ್ಯಾ . ಅರುವನರದಿಹೆನೆಂಬ ಚಿದಹಂ ದಹಿಸಿದ ಚಿದ್ಘನನ ಉಪಮೆಗೆ ತರಬಾರದಯ್ಯಾ , ಜ್ಞಾನ ಜ್ಯೋತಿಯೆ ತಾನಾಗಿ ನಿರಾಳ ನಿರಾಡಂಬರವನೊಡಗೂಡಿದ ಘನವ ಉಪಮೆಗೆ ತರಬಾರದಯ್ಯಾ . ತಾನೆ ತನ್ನೊಳು ಮೈಮರೆತು ನಿಂತು ನೆಲೆಯಿಲ್ಲದ ನಿಸ್ಸೀಮನ ಸುಖ ಉಪಮೆಗೆ ತರಬಾರದಯ್ಯಾ. ನಿರವಯ ನಿಶ್ಚಲ ನಿರ್ಬೇಧ್ಯರ ಕೂಡಿದ ಸುಖ ಉಪಮೆಗೆ ತರಬಾರದಯ್ಯಾ. ಶಬ್ದ ನಿಃಶಬ್ದವಾಗಿ, ನಿಃಶಬ್ದ ಘನ ಸುಖವ ಸುಖಿಸುವವರ ಕೂಡಿದ ಸುಖ ಉಪಮೆಗೆ ತರಬಾರದಯ್ಯಾ.

ಶಬ್ದ ನಿಃಶಬ್ದವೆಂಬ ಬುದ್ಧಿ ನಿರವಯಲಾಗಿದ್ದವರ ಕೂಡಿದ ಸುಖ ಉಪಮೆಗೆ ತರಬಾರದಯ್ಯಾ . ಈ ಉಪಮಾತೀತ ಮಹಾಂತರ ಕೂಡಿ ಅಗಲುವ ಧಾವತಿಗಿಂತ ಸಾವುದು ಕರಲೇಸಯ್ಯಾ . ಓಹೋ ಪ್ರಾಣಲಿಂಗದ ಪ್ರಾಣವಾಗಿರುವ ಅಕ್ಕ, ಜೀವನದ ಜೀವಳಾಗಿರುವ ಅಕ್ಕ, ಶರಣರ ಭಾವದ ಭರಿತಭಾವಿಯಾಗಿರುವ ಅಕ್ಕ, ಶರಣರ ಇರುವಿನ ಇರುವಾಗಿರುವ ಅಕ್ಕ ಚೆನ್ನಮಲ್ಲಿಕಾರ್ಜುನನ ಬೆರೆಯಬೇಕೆಂಬ ತವಕ. ಈ ತವಕವೇ ಶರಣರ ದಿವ್ಯ ಸಂದೇಶ ವಿಸ್ಮೃತಿಯಾಯಿತೆ? ಆಗಲಾರದು. ಇದು ಜಗದ ಹಿತಾರ್ಥದ ಅಭಿನಯ.

ಏಕೆಂದರೆ ಈ ಮಹಾಶಕ್ತಿ ಸಕಲ ಶರಣರಿಗೆ ಹಿರಿಯಳಾದ ಅಕ್ಕ, ಸೀಮಾತೀತದ ಸ್ವಾನುಭವಿ. ಅದಕ್ಕಾಗಿ ಘಟ್ಟಿದುಪ್ಪ ತಿಳಿದುಪ್ಪವೆಂದು ಭೇದ ಮಾಡದ ಅಕ್ಕ, ಅಂಗ ಆತ್ಮ ಎಂದು ವಿಂಗಡಿಸದ ಅಕ್ಕ, ತನ್ನಂಗವನ್ನೇ ಶ್ರೀಗುರು ಮಂತ್ರವೆಂದು ತಿಳಿದ ಸರ್ವಾಂಗ ಲಿಂಗಿ ಸಾವಯವ ನಿರವಯ ಒಂದು ಮಾಡಿದ ಘನಾಂಗಿಯು. ಈ ಘನಾಂಗಿಯ ದಿವ್ಯದೃಷ್ಟಿಯಲ್ಲಿ ಹಿರಿದಾವುದು ಕಿರಿದಾವುದು? ಮಹಾಂತರಾರು ಅಮಹಾಂತರಾರು? ಪೂಜ್ಯರಾರು ಅಪೂಜ್ಯರಾರು? ಎಡೆಯಿಲ್ಲದ ಪರಿಪೂರ್ಣದೊಳ್ ನುಡಿನಡೆಗೆಟ್ಟವಳಿಗೆ ಇಲ್ಲದುದು ತೋರುವದು ಆಶ್ಚರ್ಯವಲ್ಲವೆ? ಅದಕ್ಕಾಗಿ ಈ ಮಹಾತ್ಮಳ ಅಭಿನಯ ಲೋಕ ಕಲ್ಯಾಣದ ಅಭಿನಯ.ಅಲ್ಲಿ ವಿಸ್ಮೃತಿಗಿಂಬಿಲ್ಲ, ಪ್ರಮಾದವೆಂಬುದು ಮುನ್ನಿಲ್ಲ . ಅಖಂಡೈಕರಸಕ್ಕೆ ಕೂಡಿದ್ದಾವುದು? ಅಗಲಿದುದು ಆವುದು? ಉಪಮಾತೀತ ಘನಕ್ಕೆ ಎರಡೆಂಬುದಿಲ್ಲ, ಒಂದೆಂಬುದಿಲ್ಲ, ಅದ್ವಿತೀಯ ಘನವು. ಅಲ್ಲಿ ಬೇರ್ಪಡಿಸಲು ಇಂಬಿಲ್ಲದಿರುವಾಗ ಅದರ ಹೊರ್ತು ಅನ್ಯ ಆವುದು ಇಲ್ಲದಿರುವಾಗ ನಿರಂತರವಾಗಿರುವ ಮಂಗಳಮಯ ಸ್ವಯಂ ಜ್ಯೋತಿ ತಾನೊಂದೆ ಸತ್ಯ ಇರುವಲ್ಲಿ, ಇಲ್ಲಿ ಆವಾವ ಭಾವಂಗಳ ನಿಷ್ಪತ್ತಿ ನೋಡಾ.

ಇದು ಕಾರಣ ಇಲ್ಲಿ ಶ್ರೀಗಿರಿಯೆ ಶರೀರವಾಗಿದೆ. ಸುಕ್ಷೇತ್ರ ಹೃದಯ ಮಂಟಪವಾಗಿದೆ. ತೊಳಗಿ ಬೆಳಗುವ ಮಹಾಬೆಳಗೆ ಸಕಲರ ಸ್ವರೂಪ, ಚೆನ್ನಮಲ್ಲಿಕಾರ್ಜುನನ ಸ್ವರೂಪ, ಶರಣರ ಸ್ವರೂಪ. ಇದು ಸರ್ವತ್ರ ಸದಾ ಒಳಹೊರಗೆನ್ನದೆ,ಬೆಳಗುವ ಸ್ವಯಂ ಬೆಳಗು. ಇದು ನಿಷ್ಕಳಂಕ, ಇದು ಇರದ ಸ್ಥಾನವೆ ಇಲ್ಲ. ಇದಕ್ಕಾಗಿ ಇದು ಕೊನೆಮೊದಲಿಲ್ಲದ್ದಾಗ್ಗಿ ಸ್ವತಃ ಸಿದ್ಧವಾಗಿದ್ದುದಾಗಿದೆ.

ಇಂಥ ನಿಸ್ಸೀಮ ಸ್ವಾನುಭಾವದ ಸಮ್ಯಜ್ಞಾನಿ ಅಕ್ಕ ; ಹೀಗಿದ್ದರೂ ಶ್ರೀ ಗಿರಿಯಲ್ಲಿ ತನ್ನ ಗಂಡನಾದ ಚೆನ್ನಮಲ್ಲಿಕಾರ್ಜುನನಲ್ಲಿ ಬೆರೆಯಬೇಕೆಂಬ ತವಕದ ಭಾವ ! ಇದು ಆಶ್ಚರ್ಯಕರವಲ್ಲವೇ? ತಾನೆ ತಾನಾಗಿ ಬೆಳಗುವ ಮಹಾಬೆಳಗು, ಖಂಡಿತವಾಗದ ಅಖಂಡ ಈ ಮಹಾತಾಯಿ. ಈ ಮಹಾಮಹಿಮಳ ದೃಷ್ಟಿಗೆ ಶ್ರೀಗಿರಿ ಆವುದು, ಮಾಯಾ ಗಿರಿ ಆವುದು? ಸತಿ ಆರು ಪತಿ ಆರು? ಕೂಡಿದ್ದಾವುದು ಅಗಲಿದ್ದಾವುದು? ದ್ವೈತಾದ್ವೈತಭಾವ ನಷ್ಟವಾದ ಮಹಿಮಳಾಗಿಯೂ ಈಗ ಸಾಮಾನ್ಯರುಗಳಂತೆ ದ್ವೈತ ಭಾವಿಯಾಗಿ ವಿಸ್ಮೃತಗೊಂಡಂತೆ ನಟಿಸುವುದು ಆಶ್ಚರ್ಯಕರವಾದ್ದರಿಂದ ಇದು ಜಗದ ಕಲ್ಯಾಣದ ಅಭಿನಯ. ಏಕೆಂದರೆ ಕಾಯುವುಳ್ಳನ್ನಕ್ಕ ಜೀವವುಳ್ಳನ್ನಕ್ಕ ಭಾವವುಳ್ಳನ್ನಕ್ಕ ಶರಣರ ಸಂಗಬಿಡಬಾರದು, ಅಂದರೆ ಈ ಮಹಾತ್ಮಳ ಅಭಿನಯ ಈ ಉಪಮಾತೀತ ಸುಖ ದೃಢಮಾಗಿ ಕರಿಗೊಳ್ಳುವ (ಸಾಕ್ಷಾತ್ಕಾರವಾಗುವ) ತನಕ ಶರಣರ ಸಂಗದಿಂದ ಅಗಲಬಾರದು. ಅಗಲುವುದರಿಂದ ಸಾಕ್ಷಾತ್ಕಾರಕ್ಕೆ ಪ್ರತಿಬಂಧಕವಾಗುತ್ತದೆಂಬುದು ಸಕಲರಿಗೂ ತಿಳಿಸುವ ಅಭಿನಯ.

ಭಕ್ತವೃಂದವಾಗಲಿ, ಜಿಜ್ಞಾಸು ವೃಂದವಾಗಲಿ, ಶರಣರ ಸಂಗದಿಂದ ದೂರಾದರೆ, ತಮ್ಮ ಅಖಂಡ ಸುಖದಿಂದ ದೂರಾಗಿ, ಸ್ವರೂಪ ಜ್ಞಾನದ ವಿಸ್ಮೃತಿ ಹೊಂದಿ, ಅದೃಢ ಜ್ಞಾನಿಗಳಾಗುವುರೆಂದು ಪುನಃ ಜನ್ಮಕ್ಕೆ ಕಾರಣವಾಗುವರೆಂದು ತಾನೆ ಅಧೃಡ ಜ್ಞಾನಿಗಳಂತೆ ನಟಿಸಿ, ನಿಮ್ಮ ಮಹಾಂತರ ಕೂಡಿ ಅಗಲುವ ಧಾವತಿಯಿಂದ ಸಾವುದು ಕರಲೇಸಯ್ಯ ಎಂಬುದು ಇದೆಂಥ ಸಕಲ ಆಧ್ಯಾತ್ಮ ವೃಂದದ ಅಭ್ಯುದಯದ ಕಳಕಳಿಯ ಅಭಿನಯವಾಗಿದೆ. ಅದಕ್ಕಾಗಿ ಅಕ್ಕ, ಶರಣವೃಂದ ಅಭ್ಯುದಯದ ಕರುಣೆಯ ಕರಳು. ಇನ್ನೊಂದು ರೀತಿಯಾದರೂ ನಾವುಗಳು ತಿಳಿಯಬಹುದು. ಅದುವೇನೆಂದರೆ ಲಿಂಗಾಂಗ ಸಾಮರಸ್ಯ ಜ್ಞಾನದಿಂದಾಗುವ ಕಟ್ಟಳೆಯ ಧರ್ಮ ಸಂಪ್ರದಾಯ ಕೆಡಬಾರದು.

ಏಕೆಂದರೆ ಅದರಿಂದಾಗುವ ನಿಸ್ಸೀಮತ್ವಸಕಲರಿಗೂ ಪ್ರಾಪ್ತವಾಗಲಿ ಎಂಬ ಸದುದ್ದೇಶದಿಂದ ಅಖಂಡ ಭಾವದಿಂದ, ಅಖಂಡ ಜ್ಞಾನದಿಂದ ಅಖಂಡನುಸಂಧಾನದಿಂದ ಅಗಲಬಾರದು. ಅಂದರೆ ಈ ಅರುವಿನ ಕ್ರಿಯೆ, ಅಕ್ರಿಯೆ, ಎಲ್ಲಿ ನೋಡಿದರಲ್ಲಿ ಲಿಂಗದೇವನನ್ನು ಕಾಣುವ ದೃಷ್ಟಿ , ಮನ, ಭಾವ ನಿಶ್ಚಯ. ಇವುಗಳು ತನ್ನ ಸ್ವರೂಪ ಸುಖದಿಂದ ಅಗಲಬಾರದು ಎಂಬ ಅತ್ಯಂತ ದಯಾರಸದ ಅಭಿನಯುವೆಂದು ತಿಳಿಯಬಹುದು. ಚೆನ್ನಮಲ್ಲಿಕಾರ್ಜುನ ನಿಮ್ಮ ನಿಜವನರಿದ ಮಹಾಮಹಿಮರನಗಲಿ ನಿಲಲಾರದ ಅಭಿನಯವಾಗಿದೆ. ಮತ್ತು ಮಹಾದೇವಿಯಕ್ಕಗಳು ಶರಣರನಗಲ್ದ ದುಃಖಮಂ ತಮ್ಮ ತಾವೆ ಸಂತೈಸಿಕೊಂಡು ಶ್ರೀಗಿರಿಯತ್ತಲಭಿಮುಖವಾಗಿ ಬರುತ್ತ ಮಹಾರಣ್ಯಮಂ ಪೊಕ್ಕು ಚೆನ್ನಮಲ್ಲಿಕಾರ್ಜುನನ ವಿರಳಾವಸ್ಥೆಯಿಂ ಸುಳಿದಾಡುತಿರ್ದ ಪ್ರಸ್ತಾವದ ವಚನ.

**76**

**ಇಂದ್ರ ನೀಲದ ಗಿರಿಯನೇರಿಕೊಂಡು , ಚಂದ್ರಕಾಂತದ ಶಿಲೆಯನಪ್ಪಿಕೊಂಡು,**
**ಕೊಂಬು ಬಾರಿಸುತ್ತ , ಶಿವನೆ ನಿಮ್ಮ ನೆನೆವುತ್ತ ಎಂದಿಪ್ಪೆನೋ? ಅಂಗಭಂಗ**
**ಮನಭಂಗವಳಿದು ನಿಮ್ಮನೆಂದಿಂಗೊಮ್ಮೆ ನೆರೆವೆನಯ್ಯ ಚೆನ್ನಮಲ್ಲಿಕಾರ್ಜುನ.**

**ತಾತ್ಪರ್ಯ :** ಅಕ್ಕ ಶಿವಶರಣನಗಲಿ, ಅತಿ ಧಾವತಿಯಿಂದ ಶ್ರೀ ಶೈಲದ ಕಡೆ ಅಭಿಮುಖವಾಗಿ, ಮಹಾ ಅರಣ್ಯವ ಹೊಕ್ಕು, ಚೆನ್ನಮಲ್ಲಿಕಾರ್ಜುನನಲ್ಲಿ ಬೆರೆಯುವ ದುಃಖಾವಸ್ಥೆ ಚಿಂತಾವಸ್ಥೆ. ಇದು ಬಹು ಆಶ್ಚರ್ಯ! ಏಕೆಂದರೆ ಲಿಂಗೈಕ್ಯದ ವಿಚಾರದಲ್ಲಿ ತಾನೆ ತನ್ನ ಪ್ರಸಾದ ವಾಣಿಯಿಂದ ಅಂಗದೊಳಗೆ ಅಂಗ ಲಿಂಗೈಕ್ಯ ಮಾಡಿದೆ. ಮನದೊಳಗೆ ಮನವಾಗಿ ಮನ ಲಿಂಗೈಕ್ಯ ಮಾಡಿದೆ. ಭಾವದೊಳಗೆ ಭಾವವಾಗಿ ಭಾವಲಿಂಗೈಕ್ಯ ಮಾಡಿದೆ. ಅರುವಿನೊಳಗೆ ಅರುವಾಗಿ ಜ್ಞಾನ ಲಿಂಗೈಕ್ಯ ಮಾಡಿದೆ. ಕ್ರಿಯೆಗಳೆಲ್ಲ ನಿಲಿಸಿ ನಿಃಕ್ರಿಯಳಾಗಿ ನಿಷ್ಪತ್ತಿ ಲಿಂಗೈಕ್ಯ ಮಾಡಿದೆ. ನಾನೆಂಬುದ ನಿಲಿಸಿ ನೀನೆಂಬುದ ಕೆಡೆಸಿ, ಉಭಯ ಲಿಂಗೈಕ್ಯ ಮಾಡಿದೆ. ಚೆನ್ನಮಲ್ಲಿಕಾರ್ಜುನ ನೊಳಗೆ ನಾನಳಿದೆನಾಗಿ ಲಿಂಗವೆಂಬ ಘನವು ಎನ್ನಲ್ಲಿ ಅಳಿಯಿತ್ತು ಕಾಣಾ ಸಂಗನ ಬಸವಣ್ಣ ಎಂದು ಸ್ವತಃ ಹೇಳಿರುವಾಗ ಈಗ ಹೊರಗೆ ಕಾಣಿಸುವ ಶ್ರೀ ಗಿರಿಯಲ್ಲಿರುವ ಚೆನ್ನಮಲ್ಲಿಕಾರ್ಜುನನಲ್ಲಿ ಬೆರೆಯುವ ವಿಕಳಾವಸ್ಥೆ ಎಂದರೆ ಇದು ಆಶ್ಚರ್ಯವಲ್ಲವೆ? ಅಥವಾ ಶರಣರ ಅಗಲಿದ ಧಾವತಿಯೋ? ಜಗತ್ಕಲ್ಯಾಣದ ಅಭಿನಯವೋ? ಆವುದೆಂದು ನಿರ್ಣಯಿಸುವುದು?

ಇರಲಿ ಈ ಕಣ್ಣಿಗೆ ಕಂಗೊಳಿಸುವ ನೀಲಿ ಬಣ್ಣದಿಂ ಹಸಿರು ಮುರಿಯುವ ವನವುಳ್ಳ ಮಹಾಗಿರಿಯನೇರಿ ಒಳ್ಳೆ ಆಹ್ಲಾದದಿಂದ ಶ್ರೀಶೈಲನಾಥನ ಶಿಲೆಯ ಅಪ್ಪಿಕೊಂಡು ಅಲ್ಲಿ ನಿರಂಜನವಾದ ಸ್ಥಲ ನಿಃಶಬ್ದ ಸ್ಥಲ, ಏಕಾಂತಸ್ಥಲ, ಪ್ರಶಾಂತ ಸ್ಥಲವ ಕಂಡು ಅಹಹ ಕೈಲಾಸನಾಥನ ಸ್ಥಲ ಕೈಲಾಸವೆ. ಕೈಲಾಸ ವಾಸದ ನಿಲಯದಲ್ಲಿ ಕೊಂಬು ಬಾರಿಸುತ್ತ ಅಂದರೆ ಕೈಲಾಸನಾಥನ ದಶವಿಧ ನಾದಗಳುಳ್ಳ ಮಹಾವೀಣಾ ಬಾರಿಸುತ್ತ, ಶಿವನೆ ನಿಮ್ಮ ನೆನೆಯುತ್ತ ಎಂದು ಇರಬಹುದು. ಈ ಅಂಗವಿಕಾರವಳಿದು ಮನದ ವಿಕಲ್ಪವಳಿದು ನಿಮ್ಮನ್ನು ಆವಾಗ ಬೆರೆಯುವೆನು ಎಂದು ದುಃಖಿಸುತ್ತಿದ್ದಾಳೆ.

ಇದು ಶರಣರಗಲಿದ ಧಾವತಿಯ ನೋಡಿರೆ? ಶರಣರೆಂದರೆ ಸಾಕ್ಷಾತ್ ಚಿನ್ಮಯ ಸ್ವರೂಪರು. ಚಿದಾನಂದಮಯರು, ಅಕ್ಷಯ ಸುಖಿಗಳು ಅವರನ್ನು ಕೂಡಿ ಅಗಲುವದೆಂದರೆ ಚಿದಾನಂದ ಸುಖದಿಂದ ದೂರಾದಂತೆ ಅಕ್ಷಯ ಸುಖ ಕಳಕೊಂಡಂತೆ. ವಿಸ್ಮೃತಿ ಹೊಂದಿದಂತೆ ಅಖಂಡ ಭಾವ, ಅಖಂಡ ಜ್ಞಾನ ಅಖಂಡಾನಂದದಿಂದ ದೂರಾಗಿ ಖಂಡ ಜ್ಞಾನಿಯಾದುದು ಮಾಯಿಕ ಭಾವಿಯಾಗಿ ನಿಜಾನಂದದಿಂದ ದೂರಾಗುವದು. ಇದುವೆ ಶರಣರ ಅಗಲಿದ ಧಾವತಿ.

ಆರೇ ಇರಲಿ ಚಿನ್ಮಯ ರೂಪಿ ಶರಣರ ಕೂಡಿ ಅಗಲಿದರೆ ಈ ಪರಿತಾಪ ಬಿಡುವುದಿಲ್ಲವೆಂಬುದು ಸಕಲರಿಗೂ ಅನುಭವಕ್ಕೆ ತಂದುಕೊಡುವ ಅಭಿನಯ. ಏಕೆಂದರೆ ಪೂರ್ಣದೊಳ್ ಅಪೂರ್ಣತ್ವ ಕಂಡುದೆ ಶರಣರ ಅಗಲಿದ ಧಾವತಿ. ಸಕಲ ತೋರಿಕೆಯಿಂದ ಪಾರಾದುದು ಪರಮಸತ್ಯವು. ಚೆನ್ನಮಲ್ಲಿಕಾರ್ಜುನನೆಂದು ಸಾರಿ ಹೇಳಿ ಮತ್ತು ನಿಃಶಬ್ದ ಘನಗಂಭೀರ ನಿಲಯ, ಅಲ್ಲಿ ನುಡಿ ನಡೆಗಿಂಬಿಲ್ಲವೆಂದು ಹೇಳಿ, ಈಗ ನುಡಿನಡೆಯಿಂದುಕ್ತಳಾಗಿ ಅವನೋಳ್ ಬೆರೆಯುವ ಹಂಬಲವುಂಟಾದುದು ಶರಣರ ಅಗಲಿದ ಧಾವತಿಯಲ್ಲವೆ ? ಇದಲ್ಲದೆ ಚಿದಾಕಾಶವಾದ ಚಿದ್ಘನವು ಸ್ವಮಹಿಮ್ನವು. ಅಲ್ಲಿ ಪಿಂಡರೂಪ ವ್ಯಷ್ಟಿ ಅಂಗಗಳಾಗಲಿ, ಬ್ರಹ್ಮಾಂಡರೂಪಿ ಸಮಷ್ಟಿ ಅಂಗಾಂಗಗಳು ಇದ್ದುದಲ್ಲ, ಇಲ್ಲದುದಲ್ಲ,ಇದ್ದವು ಎನ್ನಲು ಬರದು, ಇಲ್ಲದವು ಎನ್ನಲು ಬರದು ಮತ್ತು ಅಳಿಯುವಂಥವುಗಳು ಎನ್ನಲು ಬರದು, ಉಳಿಯುವಂಥವುಗಳು ಎನ್ನಲು ಬರದು ಅಂದರೆ ಪಿಂಡಾಂಡ ಬ್ರಹ್ಮಾಂಡವೆಂಬ ತೋರಿಕೆ, ಬಯಲು ಬಯಲೆ ನಿಸ್ಸೀಮ ಘನ, ನಿರಾಳ ಘನವೆಂದು ತನ್ನ ನಿರವಯಲ ಸ್ಥಿತಿ ಹೇಳಿದ ಅಕ್ಕ . ಈಗ ಈ ತಾಯಿಯ ಅನುತಾಪ ಆಶ್ಚರ್ಯಕರವಾಗಿದೆ. ಅಂದರೆ ಶರಣರ ಸಂಗದಿಂದ ಸ್ವಾನುಭವದಿಂದ ಎಂದೆಂದಿಗೂ ಅಗಲಬಾರದು. ಅಗಲಿದರೆ ಈ

ಪರಿತಾಪ ಉಂಟಾಗುತ್ತದೆಂಬುದು ಸಕಲರಿಗೂ ಸಿದ್ಧ ಮಾಡಿ ತೋರುವ ಅಭಿನಯವೆಂದೆ ಸಿದ್ಧವಾಗುತ್ತದೆ.

77

**ಒಡಲ ಕಳವಳಕ್ಕಾಗಿ ಅಡವಿಯ ಹೊಕ್ಕೆನು.**
**ಗಿಡ ಗಿಡು ದಪ್ಪದೆ ಬೇಡಿದೆನೆನ್ನಂಗಕ್ಕೆಂದು.**
**ಅವು ನೀಡಿದವು ತಮ್ಮ ಲಿಂಗಕ್ಕೆಂದು. ಆನು ಬೇಡಿ**
**ಭವಿಯಾದೆ, ಅವು ನೀಡಿ ಭಕ್ತರಾದವು.**
**ಇನ್ನು ಬೇಡಿದೆನಾದರೆ ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮಾಣೆ.**

**ತಾತ್ಪರ್ಯ** : ಅಕ್ಕನೆಂದರೆ ಸಾಮಾನ್ಯಳೆ? ಚೆನ್ನಬಸವಣ್ಣನವರೆ ಅನುವನರಿದು ಘನವ ಬೆರೆಸಿ ಹಿರಿದು ಕಿರಿದೆಂಬ ಭೇದವ ಮರೆದು ಕೂಡಲ ಚೆನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿಯಕ್ಕಂಗಾಯಿತ್ತು ಎಂದು ಲಿಂಗೈಕ್ಯ ನಿಲುವಳ್ಳ ಅಕ್ಕನ ಹಿರಿತನ ಕೊಂಡಾಡಿದಾಗ ಈಗ ಈ ಕಳವಳವಾಗಿದೆಂದು ಹೇಳುವದು ಇದೊಂದು ಆಶ್ಚರ್ಯ. ಏಕೆಂದರೆ ಸವೆಯದ ಸುಖದಲ್ಲಿದ್ದ ಅಕ್ಕ ಈಗ ದುಃಖಿಯಾದುದು ಆಶ್ಚರ್ಯವಲ್ಲವೆ? ಚೆನ್ನಮಲ್ಲಿಕಾರ್ಜುನನಲ್ಲಿ ಬೆರಸಿ ಬೇರಿಲ್ಲದಿಪ್ಪ ಘನಮಹಿಮಳು ಮಾಯಿಕ ದೃಷ್ಟಿಯುಳ್ಳವಳಾದಳೆ? ಪರಿಪೂರ್ಣಳು ಪರಿಚ್ಛಿನ್ನವಾದಳೆ? ಶುದ್ಧಸಿದ್ಧ ಪ್ರಸಿದ್ಧ ಮಹಾಪ್ರಸಾದಿಯು ಒಡಲ ಕಳವಳವುಳ್ಳವಳಾದಳೆ? ಇದು ರವಿ ಪಾಳೆಯಲ್ಲಿಯೆ ಕತ್ತಲೆಯ ಪಾಳೆ ಬಂದಂತಾಯಿತಲ್ಲ.

ಸರ್ವಾಂಗ ಲಿಂಗಿಯಾದವಳಿಗೆ ಒಡಲ ಕಂಡು ಕಳವಳವಾದುದು ಇದೆಂಥ ಆಶ್ಚರ್ಯ. ಜಗತ್ತೆಂಬುದು ಲಿಂಗಮಯ, ಲಿಂಗಾಂಗ. ಲಿಂಗಕ್ಕೆಡೆಯಿಲ್ಲ, ಲಿಂಗವೆಂಬುದು ಪೂರ್ಣ ಜ್ಞಾನ ಸ್ವರೂಪ ಜ್ಞಾನಾನಂದವೆಂಬುದು ಕರಿಗೊಂಡ ಪರಮ ಜ್ಞಾನಿಗೆ ಈಗ ಮಾಮರ, ಸಣ್ಣಮರವಾಗಿ ಕಾಣಿಸುವುದು ಆಶ್ಚರ್ಯವಲ್ಲವೆ? ಪೂರ್ಣದೋಳ್ ಕಾಣಿಸಿಕೊಳ್ಳುವ ಮಾಯಿಕವಿಲ್ಲ. ಕಾಣುವ ದೃಕ್ ಇಲ್ಲ, ಇಲ್ಲದ ಮಾಯಿಕ ಕಂಡುದು ಆಶ್ಚರ್ಯವಲ್ಲವೆ? ಚಿನ್ಮಯದೋಳ್ ಜಡ ಚೇತನವೆಂಬ ವಿಭಾಗ ರೂಪ ವಿಕಲ್ಪ ಕಂಡುದು ಆಶ್ಚರ್ಯವಲ್ಲವೆ? ಷಟ್‌ಸ್ಥಲವ ಮೀರಿ ನಿಃಸ್ಥಲದ ಪರಿಜ್ಞಾನಿಗೆ ಭವಿ ಭಕ್ತರೆಂಬ ಭಾವ ಉಂಟಾದುದು ಆಶ್ಚರ್ಯವಲ್ಲವೆ?

ವ್ರತ ನಿಯಮಂಗಳ ಹಂಗು ಹರಿದು ನಿಸ್ಸೀಮ ನಿಲುವಿನಲ್ಲಿದ್ದ ಅಕ್ಕ ಈಗ ಛಲವಂತಳಾಗಿ ಇನ್ನು ಬೇಡಿದೆನಾದರೆ ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮಾಣೆಯೆಂದು ವ್ರತಿಯಾದಳೆ? ಇದು ಎಲ್ಲಾ ಶರಣರಗಲಿದ ಧಾವತಿಯ ಚಿನ್ಹ. ಆರೆ ಆಗಲಿ ಶರಣರ ಸಂಗದಲ್ಲಿರುವವರಿಗೆ ಇದಾವ ಧಾವತಿಯಿಲ್ಲವೆಂದು ಇಲ್ಲದಿದ್ದರೆ ಸಕಲರಿಗೂ ವಿಸ್ಮೃತಿಯುಂಟಾಗಿ ಪರಿತಾಪ ಉಂಟಾಗುತ್ತದೆಂದು, ತಾನೆ ಅದೃಢ ಜ್ಞಾನಿಗಳಂತೆ ನಟಿಸಿ, ಜಗತ್ಕಲ್ಯಾಣ ಮಾಡುವದು ಮಹಾತ್ಮರ ಅಭಿನಯ. ತಜ್ಞಳಾಗಿ ಅಜ್ಞಳಂತೆ ಅಭಿನಯ ಮಾಡಿದುದು ಸರ್ವ ಜಿಜ್ಞಾಸುಗಳ ಹಿತದ ಅಭಿನಯ. ಇದೆಂಥ ಅಭಿನಯ, ಸ್ಥಾಣುವಿನ ಮರೆಯಲ್ಲಿ ಚೋರನಂತಿದ್ದ ಅಭಿನಯ, ಹೊಟ್ಟೆಯ ಕಳವಳಕ್ಕಾಗಿ ಅಡವಿಯ ಹೊಕ್ಕಳಂತೆ. ಗಿಡಮರಾದಿಗಳ ಬೇಡಿದಳಂತೆ. ಅವು ನೀಡಿದವು ತಮ್ಮ ಲಿಂಗಕ್ಕೆಂದು. ತಾನು ಬೇಡಿ ಭವಿಯಾದಳಂತೆ. ಅವು ನೀಡಿ ಭಕ್ತರಾದವಂತೆ. ಇದೆಂಥ ಸ್ಥಾಣುವಿನ ಮರೆಯಲ್ಲಿರುವ ಚೋರನ ಅಭಿನಯ ! ಇನ್ನು

ಬೇಡಿದೆನಾದರೆ ಚನ್ನಮಲ್ಲಿಕಾರ್ಜುನಯ್ಯ ನಿಮ್ಮಾಣೆಯಂತೆ . ನೋಡಿರೆ? ಇದು ಕಾರಣ ಮಹಾತ್ಮರು ಜಗತ್ಕಲ್ಯಾಣಕ್ಕಾಗಿ ಮಾಡುವ ಲೀಲೆ ವರ್ಣಿಸಲಳವಲ್ಲ ನೋಡಿರೆ? ಇಂತು ಮಹಾದೇವಿಯಕ್ಕಂಗಳು ಶ್ರೀಗಿರಿಯತ್ತ ಬರುತ್ತ ವನಾಂತರದೋಳ್ ಖಗ ಮೃಗಗಳ ಕಂಡು ನುಡಿಸುತ್ತಿರ್ದ ವಚನ.

**78**

**ಅಳಿಸಂಕುಳವೆ, ಮಾಮರವೆ, ಬೆಳದಿಂಗಳ ಕೋಗಿಲೆ,**
**ನಿಮ್ಮೆಲ್ಲರನು ಒಂದ ಬೇಡುವೆನು; ಎನ್ನೊಡೆಯ**
**ಚೆನ್ನಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೆ.**

**ತಾತ್ಪರ್ಯ** : ಅಕ್ಕನು ಚೆನ್ನಮಲ್ಲಿಕಾರ್ಜುನನ ಬೆರೆಸಿ ಮತಿಗೆಟ್ಟವಳಾಗಿಯೂ ಈಗ ಮತಿಯಿಂದುಕ್ತಳಾಗಿ ಮೇರೆಯಿಂದುಕ್ತಳಾಗಿ, ಗತಿ ಹೀನಳಾಗಿ, ಗತಿಯ ಪ್ರೇಮಿಯಾಗಿ, ಚಿಂತನೆ ಎಂಬ ಚಿತಾರೂಪಿ ವೇದನೆಯಿಂದುಕ್ತಳಾದುದು ಆಶ್ಚರ್ಯ. ಎಡೆಯಿಲ್ಲದ ಪರಿಪೂರ್ಣದೋಳ್ ಶಬ್ದ ಮುಗ್ಧಳಾಗಿಯೂ ಈಗ ಪ್ರಮಾದವುಳ್ಳವಳಾಗಿ ದೀನಳಾಗಿಯೂ ಕಾಣಿಸಿಕೊಳ್ಳುವುದು ಇದೊಂದು ಬಹು ವಿಚಿತ್ರವಾಗಿ ತೋರುತ್ತಿದೆ. ಭ್ರಮಂಗಳ ಸಮೂಹ ಎಚ್ಚರದ ಎಚ್ಚರವುಳ್ಳವುಗಳಾಗಿವೆ. ತಾನು ಎಚ್ಚರದ ಮರವುಳ್ಳವಳಾಗಿದ್ದಾಳೆ. ಮಾಮರವು ಚೈತನ್ಯದ ಸತ್ತಾ ಸ್ಫೂರ್ತಿಯುಳ್ಳವುಗಳು ಆಗಿವೆ. ತಾನು ಮರವಿನ ಮನದವಳಾಗಿಹಳೆಂದರೆ ಸರ್ವಾತ್ಮ ಭಾವದವಳಾಗಿದ್ದಾಳೆ. ಸಕಲವು ಲಿಂಗಮಯವೆಂಬ ಭಾವಪರವಶೆಯಲ್ಲಿದ್ದಾಳೆ. ಭಾವ ಪರವಶದಲ್ಲಿಹಳೆಂದರೆ ಅರಸುತ್ತಿದ್ದಾಳೆ. ಈ ಅರುಸುವಿಕೆ ಪರೋಕ್ಷಭಾವನೆನ್ನಬೇಕೆ? ಪರೋಕ್ಷ ಭಾವದವಳೆಂದು ತಿಳಿದರೆ ಸಾವಯವ ನಿರವಯ ಒಂದು ಮಾಡಿದ ನಿರ್ವಿಶೇಷ. ಮಹಾಜ್ಞಾನಿಯು ಷಡಸ್ಥಲದಲ್ಲಿಯೆ ನಿಃಸ್ಥಲದ ನಿಲುವುಳ್ಳ ನಿರುಪಮ ಜ್ಞಾನಿಯು ಭಾವಾತೀತದ ನಿರ್ಭಾವಿ. ಇದನಾರು ವರ್ಣಿಸುವುದು.

ಅದಕ್ಕಾಗಿ ಅಳಿಸಂಕುಲವೆ ಎನ್ನೊಡೆಯ ಚೆನ್ನಮಲ್ಲಿಕಾರ್ಜುನ ಕಂಡರೆ ಕರೆದು ತೋರಿರೆ, ಮಾಮರವೆ, ಬೆಳದಿಂಗಳ ಕೋಗಿಲೆ ನಿಮ್ಮೆಲ್ಲರ ಒಂದ ಬೇಡುವೆನು. ಚೆನ್ನಮಲ್ಲಿಕಾರ್ಜುನ ಕಂಡರೆ ಕರೆದು ತೋರಿರೆ ಎಂದು ಆಲಾಪಿಸುವುದು ಇದು ಎಂಥ ವಿಚಿತ್ರ ಆಲಾಪ ನೋಡಿರೆ!

ಅಕ್ಕನ ದೃಷ್ಟಿಯಲ್ಲಿ ಮಾಮರಗಳು, ಬೆಳದಿಂಗಳು, ಕೋಗಿಲೆ ಇವುಗಳೆಲ್ಲ ಚೆನ್ನಮಲ್ಲಿಕಾರ್ಜುನನ ದರ್ಶನ ಪಡೆದವು ; ಆತನ ಪರಿಚಯಸ್ಥರು. ತಾನು ಆತನನ್ನು ಕಾಣದವಳು, ಅಪರಿಚಯಸ್ಥಳು, ಆತನನ್ನು ಒಲಿದವಳು. ಆತನೋಳ್ ಬೆರೆತು ಬೇರಿಲ್ಲದಿಪ್ಪಗಮ್ಯಳಾಗಿಯೂ ಸಾಮಾನ್ಯರುಗಳ ಭಾವದಂತೆ ಭಾವಿಕಳಾಗಿ ಕಾಣಿಸಿಕೊಳ್ಳುವುದು.ಇದೊಂದು ಶರಣರ ನಿರಾಡಂಬರ ಅಭಿನಯ! ಅರಿತೆನೆಂಬುಭಯ ನಷ್ಟವಾದ ವಿಚಿತ್ರ ಅಭಿನಯ ! ಕಾರಣ ಶರಣ ಶರಣೆಯರ ಜಗತ್ಕಲ್ಯಾಣ ನಾಟಕ ! ಇದಾರು ವರ್ಣಿಸುವರು! ಶರಣರ ಘನ ಶರಣರೂಪಿ ಚಿತ್ಪ್ರಕಾಶಕ್ಕೆ ವೇದ್ಯವಲ್ಲದೆ ! ಅನ್ಯರಿಗೆ ಇದು ತಿಳಿವಲ್ಲ ನೋಡಾ.

**79**

**ಚಿಲಿಪಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೆ,**
**ಸ್ವರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೆ,**

**ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೆ,**
**ಗಿರಿಗಹ್ವರದೊಳಗಾಡುವ ಪುಳಿಂದರು ನೀವು ಕಾಣಿರೆ,**
**ಚೆನ್ನಮಲ್ಲಿಕಾರ್ಜುನ ನೆಲ್ಲಿದ್ದಾನೆಂದು ಹೇಳಿರೆ.**

**80**

**ವನವೆಲ್ಲ ನೀವೆ, ವನದೊಳಗಣ ದೇವ**
**ತರುವೆಲ್ಲ ನೀವೆ, ತನುವಿನೊಳಗಾಡುವ**
**ಖಗಮೃಗವೆಲ್ಲ ನೀವೆ, ಚೆನ್ನಮಲ್ಲಿಕಾರ್ಜುನ**
**ಸರ್ವಭರಿತನಾಗಿ ಎನಗೇಕೆ ಮುಖದೋರೆ.**

**ತಾತ್ಪರ್ಯ :** ಓ ಚಿಲಿ ಪಿಲಿ ಎಂದು ಓದುವ ಗಿಳಿಗಳಿರಾ? ಏನಿದು ನಿಮ್ಮ ಸುನಾದ ಸ್ವರ, ಓ ಸ್ವರವೆತ್ತಿ ಹಾಡುವ ಕೋಗಿಲೆಗಳಿರಾ, ಓ ತುಂಬಿಗಳಿರಾ? ಸುಗಂಧಕ್ಕೆ ಎರಗಿ ಹಾರಾಡುವ ಭ್ರಮರಗಳಿರಾ ಗಿರಿಗಹ್ವರದೊಳಗಾಡುವ ಪುಳಿಂದರುಗಳೇ ನೀವುಗಳೆಲ್ಲರೂ ಚೆನ್ನಮಲ್ಲಿಕಾರ್ಜುನನನ್ನು ಕಂಡಿರುವಿರಾ. ಕಂಡರೆ ಎಲ್ಲಿದ್ದಾನೆಂದು ಹೇಳಿರಿ. ಓ ನನ್ನಯ್ಯ ನೀನಾದರೂ ಎನಗೇಕೆ ಮುಖ ತೋರಿಸಲೊಲ್ಲೆ ಎಲ್ಲೆಲ್ಲೂ ನೀನೆ ಭರಿತನಾಗಿದ್ದರೂ ಸರ್ವ ರೂಪನಾಗಿದ್ದರೂ ಎನಗೇಕೆ ದರ್ಶನ ಕೊಡಲೊಲ್ಲೆ,

ಅರಿತು ಅರಿಯದ ಮುಗ್ಧೆಯಂತೆ ಭಾವುಕಳು, ಇದೆಂಥ ಆಶ್ಚರ್ಯ ಸಕಲರೂಪದಲ್ಲಿ ನೀವೆ ಎಂದು ಪುನಃ ದರ್ಶನದ ಆಪೇಕ್ಷೆ ಮಾಡಿದುದು ಆಶ್ಚರ್ಯವಲ್ಲವೆ, ವನ ನೀವೆ ಎಂದಾಗ ಇದೆಂಥ ದಿವ್ಯದೃಷ್ಟಿ ! ವನದೊಳಗಿದ್ದ ಕಲ್ಪತರು ನೀವೆ, ತರುವಿನೊಳಗಾಡುವ ಖಗಮೃಗವೆಲ್ಲ ನೀವೆ. ಸಕಲದೊಳ್ ಭರಿತನು ನೀನಾಗಿದ್ದು ನಿನ್ನ ನಿಷ್ಕಳಂಕ ಸ್ವರೂಪ ತೋರಿಸಾ. ನಿರ್ಮಾಯ ಸ್ವರೂಪ ತೋರಿಸಾ, ನಿಜ ಘನವ ತೋರಿಸಾ ಎಂದು ಮಹಾಶಕ್ತಿಯ ಭಿನ್ನಹವಾಗಿದೆ. ಇಂಥ ಮಹಾದೇವಿಯಕ್ಕಗಳು ವನಾಂತರದೊಳ್ ಬರುತ್ತ ಪರ್ವತವನೇರುತ್ತಲಿರ್ದ ಪ್ರಸ್ತಾವದ ವಚನ.

**81**

**ಮೂಲದ್ವಾರದ ಬೇರು ಮೆಟ್ಟಿ ಭೂಮಂಡಲವನೇರಿದೆ.**
**ಆಚಾರದ ಬೇರವ ಹಿಡಿದು ಐಕ್ಯ ತುದಿಯನೇರಿದೆ.**
**ವೈರಾಗ್ಯದ ಸೋಪಾನದಿಂದ ಶ್ರೀಗಿರಿಯನೇರಿದೆ.**
**ಕೈ ವಿಡಿದು ತೆಗೆದು ಕೊಳ್ಳಾ ಚೆನ್ನಮಲ್ಲಿಕಾರ್ಜುನ.**

**ತಾತ್ಪರ್ಯ :** ಪಾತಾಳಗಂಗೆಯೆಂಬುದೆ ಮೂಲದ್ವಾರ. ಅದನ್ನು ಮೆಟ್ಟಿ ಅಂದರೆ ಅದನ್ನು ಹತ್ತಿ ಭೂಮಂಡಲವ ನೇರಿದೆ. ಅಂದರೆ ಪರ್ವತವನೇರಿದೆ. ಭಕ್ತಿ ಭಾವರೂಪಿ ಆಚಾರದ ಬೇರವ ಹಿಡಿದು ಶ್ರೀಗಿರಿ ತುಟ್ಟ ತುದಿಯ ರೂಪಿ ಐಕ್ಯ ತುದಿಯನೇರಿದೆ. ದೇಹದ ಮೇಲೆ ನಿರ್ಮಮವೆಂಬ ವೈರಾಗ್ಯ ರೂಪಿ ಸೋಪಾನದಿಂದ ಶ್ರೀಗಿರಿಯ ನೋಡಿದೆ, ಕೈವಿಡಿದು ತೆಗೆದುಕೊಳ್ಳಾ ಚೆನ್ನಮಲ್ಲಿಕಾರ್ಜುನಾ ಎಂದು ಹೇಳಿದ್ದಾಳೆ. ಇಂತು ಶ್ರೀ ಗಿರಿಯನೇರಿ ಶಿವನೊಳಗೆ ಐಕ್ಯವಾಗಬೇಕೆಂದು ನೊಂದು ಬಿನ್ನೈಸುವ ಪ್ರಸ್ತಾವದ ವಚನ.

82

**ಕ್ರೀಯುಳ್ಳಡಂತೊಂದಾಸೆ ಸದ್ಭಕ್ತಿ ನುಡಿಗಣವುಳ್ಳಡಂತೊಂದಾಸೆ**
**ಶ್ರೀಗಿರಿಯ ನೋಡಿ ನಿಮ್ಮ ಬೆರಸಿದರೆ ಎನ್ನಾಸೆಗೆ ಕಡೆಯೆ ಅಯ್ಯ ,**
**ಆವಾಸೆಯೂ ಇಲ್ಲದೆ ನಿಮ್ಮ ನಂಬಿ ಬಂದು ಕೆಟ್ಟೆನಯ್ಯ ಚೆನ್ನಮಲ್ಲಿಕಾರ್ಜುನ.**

**ತಾತ್ಪರ್ಯ** : ಶ್ರೀಗಿರಿಯೆಂಬುದು ಪರಾತ್ಪರ ಪರವಸ್ತು ನೆಲೆಸಿರುವ ಗಿರಿ. ಈ ಗಿರಿಗೆ ಬರಬೇಕಾದರೆ ಒಂದಾಸೆಯಿಟ್ಟುಕೊಂಡು ಬಂದಿರುವುದು, ಈ ಮಹಾಗಿರಿಯನೇರುವದಾದರೂ ಒಂದಾಸೆಯಿಟ್ಟುಕೊಂಡೆ ಕ್ರಿಯೆಯುಳ್ಳವರಾಗಿರುವುದು, ಸದ್ಭಕ್ತಿ ಸದಾಚಾರವುಳ್ಳವರಾಗಿರುವುದು, ಒಂದಾಸೆಯಿಟ್ಟುಕೊಂಡೆ ಈ ಆಸೆ ಕೊನೆಗೊಳ್ಳಬೇಕಾದರೆ ನಿಮ್ಮ ಶ್ರೀಗಿರಿಯಾದ ಸುಕ್ಷೇತ್ರವನೇರಿ ನಿನ್ನಲ್ಲಿ ಬೆರೆಸಿದಾಗ ಅಂದರೆ ಸಮರಸವಾದಾಗ ಕೊನೆಗೊಳ್ಳುವದಂದು. ಆವ ಆಸೆಯು ಇಲ್ಲ ನಿಮ್ಮ ನಂಬಿ ಬಂದು ಕೆಟ್ಟೆನು ಚೆನ್ನಮಲ್ಲಿಕಾರ್ಜುನ. ಏಕೆಂದರೆ ಭಕ್ತರಿಗೆ ಇದ್ದುದೊಂದು ಆಸೆ, ಅದಾವುದೆಂದರೆ ಜೀವ ಶಿವರ ಏಕತ್ವದಾಸೆ, ಲಿಂಗಾಂಗ ಸಮರಸದಾಶೆ, ಮಹಾದಾಶೆ ಈ ಆಶೆಯೆ ಅತಿಯಾಗಿದ್ದುದರ ಕ್ರಿಯೆ ಮಾಡಿದರೂ ಅದುವೆ. ಆಶೆ, ಜಪತಪಾದಿಗಳಿಂದುಕ್ತವಾದರೂ ಅದುವೆ ಆಶೆ. ಧ್ಯಾನ ಧಾರಣಗಳ ಮಾಡಿದರೂ ಅದುವೆ ಆಶೆ. ಶರಣರ ಸಂಭಾಷಣೆ ಸ್ವಾನುಭಾವದಲ್ಲಿಯೂ ಅದುವೆ ಆಶೆ, ಹಿರಿದಾದ ಆಶೆಯೆಂದರೆ ಸವೆಯದ ಸುಖದ ಆಶೆ, ಇದುವೆ ಘನ ಸುಖರೂಪಿ ಚೆನ್ನಮಲ್ಲಿಕಾರ್ಜುನನ ಆಸೆ ಇಟ್ಟುಕೊಂಡೆ ಸಕಲ ಕಾರ್ಯದಲ್ಲಿ ತೊಡಗಿದ್ದರಿಂದ ಇದು ಪೂರ್ತಿಯಾಗದ್ದರಿಂದ ನಿಮ್ಮ ನಂಬಿ ಬಂದು ಕೆಟ್ಟೆನಯ್ಯ ಎಂದು ಹೇಳಿದ್ದಾಳೆ.

83

**ಬಯಲು ಲಿಂಗವೆಂಬೆನೆ ಬಗಿದು ನಡೆವಲ್ಲಿ ಹೋಯಿತ್ತು .**
**ಬೆಟ್ಟ ಲಿಂಗವೆಂಬೆನೆ ಮೆಟ್ಟನಿಂದಲ್ಲಿ ಹೋಯಿತ್ತು . ತರುಮರಾದಿಗಳು**
**ಲಿಂಗವೆಂಬೆನೆ ತರಿದಲ್ಲಿ ಹೋಯಿತ್ತು . ಲಿಂಗ ಜಂಗಮದ ಪಾದವೆ**
**ಗತಿಯೆಂದು ನಂಬಿದ ಸಂಗನ ಬಸವಣ್ಣನ ಮಾತ ಕೇಳದೆ ಕೆಟ್ಟೆನಯ್ಯ.**

**ತಾತ್ಪರ್ಯ** : ಲಿಂಗವೆಂಬುದು ಸರ್ವಕಾರಣ, ಪರಮನಿರ್ಮಲ, ಲಿಂಗವೆಂಬುದು ಸಚ್ಚಿದಾನಂದ ನಿತ್ಯ ಪರಿಪೂರ್ಣ, ಲಿಂಗವೆಂಬುದು ಸರ್ವಲೋಕೋತ್ಪತ್ತಿಗೆ ಮೂಲಕಾರಣ. ಲಿಂಗವೆಂಬುದು ಸರ್ವತತ್ವ ಪೂರ್ಣ ನಿಜಚೈತನ್ಯವು. ಲಿಂಗವೆಂಬುದು ಶರಣರ ಹೃದಯದಲ್ಲಿ ಬೆಳಗುವ ಜ್ಯೋತಿರ್ಲಿಂಗವು. ಲಿಂಗವೆಂಬುದು ಜನ್ಮವಾರಧಿಯ ದಾಂಟಿಸುವ ಬೈತ್ರವು. ಇಂತೀ ಲಿಂಗದ ಮರ್ಮವನರಿದವನು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ. ಮಹಾದೇವಿಯಕ್ಕ ಈ ಮಹಾತಾಯಿ ಸಕಲರ ಸ್ವಾನುಭವದ ಅಕ್ಕ, ಅದಕ್ಕಾಗಿ ಪೂಜೆ ಮಾಡುವ ಭ್ರಮವುಳ್ಳವಳಾಗಲಿಲ್ಲ. ಯಾವುದು ಲಿಂಗವೆಂದು ಅರಿತಳು, ಲಿಂಗವೆಂಬುದು ಸಚ್ಚಿದಾನಂದ, ನಿತ್ಯ ಪೂರ್ಣ, ಲಿಂಗವೆಂಬುದು ನಿಜ ಚೈತನ್ಯ ಇದು ಶರಣರ ಹೃದಯದಲ್ಲಿ ಬೆಳಗುವ ಜ್ಯೋತಿರ್ಲಿಂಗ. ಜಂಗಮದ ಪಾದ, ಈ ಜ್ಞಾನವೆ ಗತಿಯೆಂದು ನಂಬಿದ ಬಸವಣ್ಣ ಅಂದರೆ ಮಹಾತ್ಮರ ಹೃದಯವೆಂಬುದು ಬೆಳಗುವ ಜ್ಯೋತಿಲಿಂಗ ಅಂದರೆ ಬಸವಣ್ಣ ನಂಬಿದುದು ಮಹಾತ್ಮರ ಹೃದಯ, ಅದಕ್ಕಾಗಿ ತಾನೆ ಜ್ಯೋತಿಲಿಂಗನಾದ,

ಚಿಜ್ಯೋತಿಯಾದ, ಅಂಥ ಚಿದ್ಘನ ದೇವ ಬಸವರಸ. ಆ ಮಹಾತ್ಮನ ಮಾತ ಕೇಳದೆ ಕೆಟ್ಟೆನು ಅನ್ನಬೇಕಾದರೆ ಅಕ್ಕ ಬಯಲು ಲಿಂಗವಾಗಲಿಲ್ಲ. ಏಕೆಂದರೆ ಬಯಲು ಎಂಬುದು ಪೊಳ್ಳು ಅದರೊಳ್ ಹೊಕ್ಕು ನಡೆವಲ್ಲಿ ಅದರ ಘನ ಹೋಯಿತ್ತು. ಬೆಟ್ಟಲಿಂಗವೆಂದು ಅದನ್ನು ಕೂಡ ಪರಿಶೋಧಿಸಿದಳು. ಅಂದರೆ ಅದು ಚೈತನ್ಯವಾಗಲಿಲ್ಲ ; ಜಡವಾಯಿತು. ಏಕೆಂದರೆ ಅದನ್ನು ಮೆಟ್ಟಿ ಅದರ ಮೇಲೆ ನಿಂತಲ್ಲಿ ಅದರ ಘನ ಹೋಯಿತ್ತು. ತರುಮರಾದಿಗಳು ಲಿಂಗವೆಂಬೆನೆ ಲಿಂಗವಲ್ಲ ; ಏಕೆಂದರೆ ಅದರ ತಪ್ಪಲು ಕೀಳುವಲ್ಲಿ ಅದನ್ನು ಕಡಿಯುವಲ್ಲಿ ಅದರ ಘನ ಕೀಳಾಯಿತ್ತು . ಕೊನೆಗೆ ಬಸವರಸನನ್ನು ನೆನೆಸುತ್ತಿದ್ದಾಳೆ.

ಓ ಬಸವಪ್ರಭು ನಿನ್ನ ಮಾತ ಕೇಳದೆ ಕೆಟ್ಟೆ ತಂದೆ. ನಿನ್ನ ನಂಬಿಗೆ ಮಾಡದೆ ಕೆಟ್ಟೆ. ಲಿಂಗ ಜಂಗಮದ ಪಾದವೆ ಗತಿಯೆಂದು ನಂಬಲಿಲ್ಲ. ಓ ದೇವರ ದೇವ ; ನಿಮ್ಮ ಮಾತು ಆವುದು? ಜ್ಯೋತಿರ್ಲಿಂಗ ಘನ ಎಂಬುದೆ ನಿನ್ನ ಮಾತಲ್ಲವೆ? ಲಿಂಗ ಜಂಗಮದ ಪಾದವೆ ಗತಿ ಎಂಬುದು ನಿನ್ನ ಮಾತಲ್ಲವೆ? ಈ ಮಾತ ಕೇಳದೆ ಕೆಟ್ಟೆನು. ತ್ರಾಹಿ ತ್ರಾಹಿ ಸ್ವಯ ಸುಖಿಯಾಗಲು ಅಖಂಡ ಸುಖಿಯಾಗಲು ಲಿಂಗಾಂಗ ಸಾಮರಸ್ಯ ಜ್ಞಾನವೆ ಮುಖ್ಯವು. ಈ ಸಮರತಿ ಸಮಕಲೆಯುಳ್ಳ ಸಮ್ಯಜ್ಞಾನ ಘನವೆ ಲಿಂಗ ಜಂಗಮದ ಪಾದವಾಗಿದೆ. ಈ ಅಖಂಡ ಭಕ್ತಿ ಅಖಂಡ ಭಾವ, ಅಖಂಡ ಜ್ಞಾನಕ್ಕೆ ನಂಬಿ ನಿಸ್ಸೀಮ ಸುಖಿಯಾದ ನಿರ್ಮಾಯನಾದ, ನಿರಾಲಂಬನಾದ , ನಿಜೈಕ್ಯನಾದ ಅಣ್ಣ ಬಸವಣ್ಣನ ಮಾತ ಕೇಳದೆ ಕೆಟ್ಟೆನು ಎಂದು ಹೇಳಿದ್ದಾಳೆ.

**84**

**ಬೆರಸುವರೆ ಬೇಗ ತೋರು, ಹೊರ ಹಾಯ್ಕದಿರಯ್ಯ ,**
**ನಿಮ್ಮಲ್ಲಿಗೆ ಸಲೆಸಂದ ತೊತ್ತಾನು ; ಎನ್ನ ಹೊರ ಹಾಯ್ಕದಿರಯ್ಯ .**
**ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ನಂಬಿ ಬೆಂಬಳಿ ಬಂದೆನು**
**ಇಂಬುಗೊಳ್ಳಯ್ಯ ಬೇಗದಲ್ಲಿ.**

**ತಾತ್ಪರ್ಯ** : ಘನಮಹಿಮನೆ ನಿನ್ನೊಳ್ ಸಮರಸವ ಮಾಡಿಕೊಳ್ಳುವಂತಿದ್ದರೆ ತೀವ್ರ ಮಾಡಿಕೊಳ್ಳು ತಿರಸ್ಕರಿಸಬೇಡ ನಿನ್ನಿಂದ ಬೇರಾಗಿರಗೊಡಬೇಡ. ಏಕೆಂದರೆ ನಿಮ್ಮಲ್ಲಿ ಪೂರ್ತಿ ಸಮರಸವಾಗಲು ಬಂದ ಸೇವಕಳು. ಎನ್ನ ಹೊರಗೆ ಹಾಕಬೇಡ ಚೆನ್ನಮಲ್ಲಿಕಾರ್ಜುನಯ್ಯ. ನಿಮ್ಮನ್ನೆ ನಂಬಿ ನಿಮ್ಮ ಬೆನ್ನು ಹತ್ತಿ ಬಂದಿರುವೆ. ಬೇಗ ನಿನ್ನ ಅಖಂಡಾನಂದವಾಸ ಸವೆಯದ ಸುಖದೊಳ್ ಸಮರಸ ಮಾಡಿಕೊಳ್ಳು, ಬೇಗ ಬೇಗ ತಂದೆ, ಇಂತು ಮಹಾದೇವಿಯಕ್ಕಳು ಚೆನ್ನಮಲ್ಲಿಕಾರ್ಜುನನೊಳಗೆ ಸಮರಸೈಕ್ಯವಂ ಶೀಘ್ರದಿಂ ಬಯಸಿ ಉಪಾವಸ್ಥೆಯ್ಯುದ್ದ ಬಂದು ಕದಳಿಯ ಕಂಡ ಪ್ರಸ್ತಾವದ ವಚನ.

**85**

**ವನವೆಲ್ಲ ಕಲ್ಪತರು, ಗಿಡವೆಲ್ಲ ಮರುಜವಣಿ, ಶಿಲೆಗಳೆಲ್ಲ ಪರುಷ,**
**ನೆಲವೆಲ್ಲ ಅವಿಮುಕ್ತ ಕ್ಷೇತ್ರ , ಜಲವೆಲ್ಲ ನಿರ್ಜರಾಮೃತ, ಮೃಗವೆಲ್ಲ ಪುರುಷಮೃಗ**
**ಎರಡುವ ಹರಳೆಗಳೆಲ್ಲ ಚಿಂತಾಮಣಿ, ಚೆನ್ನಮಲ್ಲಿಕಾರ್ಜುನನ ನೆಚ್ಚಿನ ಗಿರಿಯ**
**ಸುತ್ತಿ ನೋಡುತ ಬಂದು ಕದಳಿಯ ಬನವ ಕಂಡೆನು.**

**ತಾತ್ಪರ್ಯ :** ವನವೆಂಬುದು ಮಲ್ಲಯ್ಯನ ವನ, ಶ್ರೀಶೈಲನಾಥನ ನಿವಾಸದ ವನ, ದೇವನ ವನ ದೇವಲೋಕವಾಗಿರುವುದರಿಂದ ಅಲ್ಲಿರುವ ವನ ಕಲ್ಪತರು ಬೇಡಿದಿಷ್ಟಾರ್ಥ ಪೂರ್ತಿ ಮಾಡುವ ಕಲ್ಪತರು, ದೇವತರು. ವನವೆಂಬುದು ಸತ್ತವರನ್ನು ಬದುಕಿಸುವ ಗಿಡಗಳು, ಸಂಜೀವಿನಿ ಗಿಡಗಳು, ಅಮರ ಫಲ ಬಿಡುವ ಗಿಡಗಳು, ಅಮರರಸದಿಂದುಕ್ತವಾದ ಗಿಡಗಳು, ಶ್ರೀಶೈಲ ಹಿರಿಯ ಶಿಲೆಯೆಂಬುದು ಪರುಷ, ಈ ಪರುಷ ತಾಕಿದವರೆಲ್ಲ ಸದ್ಯೋನ್ಮುಕ್ತರು ಮಲ್ಲಯ್ಯನ ಸಾಮೀಪ್ಯರು. ಅಲ್ಲಿಯ ನೆಲವೆಂಬುದು ಅಮೃತಮಯ ಅವಿಮುಕ್ತ ಕ್ಷೇತ್ರ , ನಿರ್ಮಾಯ ಕ್ಷೇತ್ರ. ಸಕಲ ಮುಕ್ತಾಯದ ಮುಕ್ತಿ ಕ್ಷೇತ್ರ, ಜಲವೆಂಬುದು ದೇವತೆಗಳ ಸುಧೆ ದೇವತಾಮೃತ ದೇವತೆಗಳು ಸೇವಿಸುವ ನಿರ್ಜರಾಮೃತ. ಇದನ್ನು ಸೇವಿಸುವವರೆಲ್ಲ ದೇವತೆಗಳೆ, ದೇವತಾ ಸ್ವರೂಪರೆ ಇಲ್ಲಿಯ ಜಲ ಸೇವಿಸಿದವರು ಅಮರರು. ಇಲ್ಲಿಯ ಮೃಗ ಪುರುಷ ಮೃಗ, ನಿರ್ವಿಷಯ ಮೃಗ, ನಿರ್ವಿಕಾರ ಮೃಗ, ಪುರುಷಾರ್ಥ ಮೃಗ, ವೈರತ್ವವಳಿದ ಮೃಗ ನಿರ್ಮೋಹ ಮೃಗ ಶಾಂತಿ ಸೈರಣೆಯ ಸಮೃದ್ಧಿಯಿಂದುಕ್ತವಾದ ಬೆಳಗಿನ ಬೆಳಗುಳ್ಳ ಮೃಗ. ಇಲ್ಲಿರುವ ಜಿಂಕೆಗಳು, ಮೀನಗಳು ಚಿಂತಾಮಣಿ. ಈ ಪ್ರಕಾರ ಚೆನ್ನಮಲ್ಲಿಕಾರ್ಜುನ ನಚ್ಚಿನ ನಂಬಿಗೆಯ ಸೊಬಗಿನಿಂ ಶೋಭಿಸುವ ಗಿರಿಯ ಸುತ್ತಾಡಿ ಬಂದು ಕದಳಿ ಬನ ಕಂಡ ಪ್ರಸ್ತಾವದ ವಚನ.

ಇಂತು ಮಹಾದೇವಿಯಕ್ಕಳು ಕದಳಿಯ ಬಾಗಿಲಲ್ಲಿ ಬಂದು ಕರಕಮಲದಿಷ್ಟ ಲಿಂಗಮಂ ಚರ್ಯಾದಿಂ ಜ್ಞಾನ ಪ್ರಭಾವದೋಳ್ ಸ್ತುತಿಸುತ್ತಿರಲು ಅಂತರಂಗದ ಚಿತ್ಪ್ರಕಾಶವೆ ಬಹಿಷ್ಕರಿಸಿ ಜಂಗಮ ಪ್ರಸಾದ ನೆಯ್ದು ಹೊಳೆವ ಕೆಂಜೆಡೆಗಳಿಂ ಸುಲಿಪಲ್ಲು ಕಂಗಳ ಕಾಂತಿಯಿಂ ಧರಹಿಸಿತ ವದನದಿಂ ಮಾಣಿಕ್ಯ ಮುಕುಟದಿಂ ತೊಳಗಿ ಬೆಳಗುತ್ತ ಮುಂದೆ ಪ್ರಸನ್ನವಾಗಲು ಮಹಾದೇವಿಯಕ್ಕಗಳು ಆ ಶ್ರೀಮೂರ್ತಿಯಂ ಕಂಡ ಪ್ರಸ್ತಾವದ ವಚನ.

**86**

**ಹೊಳೆವ ಕೆಂಜೆಡೆಗಳ ಮಣಿ ಮುಕುಟಗಳ ವೊಪ್ಪುವ ಸುಲಿಪಲ್ಲು**
**ನಗೆ ಮೊಗದ ಕಂಗಳ ಕಾಂತಿಯಿಂ ಈರೇಳು ಭುವನವ ಬೆಳಗುವ ದಿವ್ಯಸ್ವರೂಪನ**
**ಕಂಡೆನ್ನ ಕಂಗಳ ಬರ ಹರಿಯಿತ್ತಿಂದು. ಗಂಡ ಗಂಡರೆಲ್ಲ ಹೆಂಡರಾಗಿ**
**ಆಳುವ ಗರುವನ ಕಂಡೆ ನಾನು. ಜಗದಾದಿ ಶಕ್ತಿಯೊಳು ಬೆರಸಿ ಮಾತಾಡುವ**
**ಪರಮಗುರು ಚೆನ್ನಮಲ್ಲಿಕಾರ್ಜುನ ನಿಲುವ ಕಂಡು ಬದುಕಿದೆನು.**

**ತಾತ್ಪರ್ಯ :** ಸಾಕ್ಷಾತ್ ಶಂಕರನ ದರ್ಶನ, ಕೈವಲ್ಯನಾಥನ ದರ್ಶನ, ಪರಾತ್ಪರ ಪ್ರಭುವಿನ ದರ್ಶನ, ಪರಮೇಶನ ದರ್ಶನ. ಆಹಹ ಈ ಘನಮೂರ್ತಿ ಕೆಂಜೆಡೆಗಳಿಂ ಹೊಳೆಯುವ ಮೂರ್ತಿ, ಸ್ವಪ್ರಕಾಶವನ್ನೇ ಮಣಿ ಮಕುಟ ಮಾಡಿದ ಮೂರ್ತಿ. ಪ್ರಶಾಂತ ಪ್ರಸನ್ನತೆಯಿಂ ಪರಿಶೋಭಿಸುವ ನಗೆ ಮೊಗದ ಕಂಗಳ ಮೂರ್ತಿ. ಈರೇಳು ಭುವನವೆಲ್ಲ ಬೆಳಗುವ ಬೆಳಗಿನ ಬೆಳಗು ಮಹಾ ಬೆಳಗು. ಈ ಬೆಳಗೆ ಈರೇಳು ಭುವನದೊಳ್ ಬೆಳಗುವ ದಿವ್ಯಪ್ರಭೆಯ ಅಕ್ಕನನ್ನು ತನ್ನ ಅಖಂಡವಾದ ಘನ ಗರ್ಭದಲ್ಲಿ ಅಮಳ್ಳೈಕ್ಯ ಮಾಡಿಕೊಳ್ಳಲು ದರ್ಶನವಾದ ದಿವ್ಯಪ್ರಭೆ . ತೂರ್ಯಾತೀತದತ್ತತ್ತ ಇದ್ದಕ್ಕಿದ್ದ ಪ್ರಭೆ. ಅಂತರಂಗದ ಚಿತ್ಪ್ರಕಾಶಪ್ರಭೆ , ಪ್ರತ್ಯಗಾತ್ಮ ಪ್ರಭೆ, ಪೂರ್ಣಪ್ರಭೆಯೆ ಅಕ್ಕನ ದರ್ಶನಕ್ಕಾಗಿ ಜಂಗಮರೂಪವ ಧರಿಸಿ ದರ್ಶನವನಿತ್ತ ಮಹಾಪ್ರಭೆ. ಈ ಮಹಾಪ್ರಭಾಪುಂಜ

ದರ್ಶನವಾದುದರಿಂದೆನ್ನ ಕಂಗಳ ಬರ ಹರಿಯಿತ್ತೆಂದು ಎಂದು ಹೇಳಿದ್ದಾಳೆ.

ಈ ಪ್ರಭೆ ಮಾನವರೆಲ್ಲರ ಗಂಡ ವಿಶ್ವದ ಗಂಡ, ನಾವು ಗಂಡಸರೆನ್ನುವವರ ಗಂಡ, ದೈತ್ಯ ದೇವತೆಗಳ ಗಂಡ, ಮನು ಮುನಿಗಳೆಂಬವರ ಗಂಡ, ಈ ಗಂಡ ಚತುರ್ಮುಖ ಬ್ರಹ್ಮಾದಿಗಳೆಂಬವರ ಗಂಡ, ಈತ ಮಾಯಿಕನಲ್ಲ, ಪರಪ್ರಕಾಶನಲ್ಲ, ಸ್ವಯಂ ಪ್ರಕಾಶನಾಗಿರುವುದರಿಂದ ಈ ಘನ ಮಹಿಮನ ದೃಷ್ಟಿಯಲ್ಲಿ ನಾವು ಗಂಡರು ; ಗಂಡಸರೆಂಬುವವರೆಲ್ಲರು ಹೆಂಡರೆ. ಈ ಹೆಂಡರನ್ನು ಆಳುವ ಗರುವ ಕಂಡೆ, ಘನ ಲಿಂಗ ಕಂಡೆ, ಘನಾಂಗ ಕಂಡೆ. ಈ ಘನಕಾಯವೆ ಜಗದಾದಿ ಶಕ್ತಿಯೊಳು ಮಾತಾಡಿಸುವ ಪರಮಗುರು ಚೆನ್ನಮಲ್ಲಿಕಾರ್ಜುನ. ಈತನ ನಿಲುವ ಕಂಡೆ ಬದುಕಿದೆ. ಎಂದು ಇಂತು ಮಹಾದೇವಿಯಕ್ಕಗಳು ಚರಮೂರ್ತಿಯಂ ಕಂಡು ನಮಸ್ಕಾರಮಂ ಮಾಡಿ, ಎಲೆ ದೇವಾ ಸಕಲ ಕರಣಂಗಳ ಉಪಟಳಕ್ಕಂಜಿ ನಿಮ್ಮ ಶರಣು ಹೊಕ್ಕೆ.ಅವನ ಕಾರುಣ್ಯ ಪಡೆಯ ಬಂದು ನಿಮ್ಮ ಶ್ರೀಮೂರ್ತಿಯ ಕಂಡೆ, ಇನ್ನು ಎನ್ನೊಳಗೆ ಐಕ್ಯವ ಮಾಡಿಕೊಳ್ಳಾ ಚೆನ್ನಮಲ್ಲಿಕಾರ್ಜುನ ಎಂದು ಬಿನ್ನೈಸಲು ಆ ಚಿತ್ತ ಸ್ವರೂಪವಪ್ಪ ಜಂಗಮವು ಭವಕೆಟ್ಟು ಬಂದೆ ಮಗಳೆ ಬಾರಾ ಎಂದು ತೆಗೆದು ಬಿಗಿಯಪ್ಪಲು ಆ ಮಹಾದೇವಿಯಕ್ಕಗಳ ಲಿಂಗೈಕ್ಯವಾದ ವಚನ.

**87**

**ಕದಳಿಯೆಂಬುದು ತನು, ಕದಳಿಯೆಂಬುದು ಮನ, ಕದಳಿಯೆಂಬುದು**
**ವಿಷಯಂಗಳು, ಕದಳಿಯೆಂಬುದು ಘೋರಾರಣ್ಯ, ಕದಳಿಯೆಂಬುದು**
**ಗೆದ್ದತಲೆ, ಬದುಕಿ ಬಂದು ಕದಳಿಯ ಬನದಲ್ಲಿ ಭವಹರನ ಕಂಡೆನು.**
**ಭವಗೆಟ್ಟು ಬಂದ ಮಗಳೆಂದು ಕರುಣದಿಂ ತೆಗೆದು ಬಿಗಿಯಪ್ಪಿದರೆ**
**ಚೆನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು.**

**ತಾತ್ಪರ್ಯ :** ಕದಳಿಯೆಂಬುದು ತನು : ಇದು ಸ್ವಗತ ಭೇದವುಳ್ಳ ಕದಳಿಯು ಹೌದು. ಅಂದರೆ ದೇಹ ಒಂದಾಗಿ ಕಂಡರೂ ಹಸ್ತ ಪಾದಾದಿ ಭೇದದಿಂದುಕ್ತವಾಗಿರುವುದರಿಂದ ಸ್ವಗತ ಭೇದ ತನು. ಇದಲ್ಲದೆ ಸಜಾತಿ ಭೇದವುಳ್ಳ ಕದಳಿರೂಪ ತನು. ಅಂದರೆ ಮಾನವ ದೇಹದಂತೆ ಮತ್ತೊಂದು ದೇಹವಿರುವುದೆ ಸಜಾತಿ ತನು. ಮಾನವದೇಹಕ್ಕೆ ಬೇರಾಗಿ ಪಶು ಪಕ್ಷಿಗಳ ಶರೀರಗಳೆ ವಿಜಾತಿ ಭೇದವುಳ್ಳ ಕದಳಿರೂಪ ತನು. ತನು ಆವುದೆ ಇರಲಿ ಅದು ಕದಳಿಯೆ. ಅದಕ್ಕಾಗಿ ಅಂಡಜ, ಪಿಂಡಜ, ಉದ್ಭಿಜ, ಜರಾಯುಜ ಇವುಗಳೆಲ್ಲ ಕದಳಿಯೆ, ಪಿಂಡಾಂಡ, ಬ್ರಹ್ಮಾಂಡ ರೂಪಿ ವಿಚಾರವುಳ್ಳ ಮನವೆ ಕದಳಿ.

ಕದಳಿ ಎಂಬುದು ಮನ : ವ್ಯಷ್ಠಿ ಸಮಷ್ಠಿಯೆಂಬ ಕಲ್ಪನೆಯೂ ಕೂಡಾ ಮನವಾದುದರಿಂದ ಇದು ಕದಳಿಯೆ. ಅಜ್ಞಾನವಸ್ಥೆಯಲ್ಲಿ ತೋರುವ ಶರೀರ ಇಂದ್ರಿಯಂಗಳು, ಪ್ರಾಣಂಗಳು ಮನ ಬುದ್ಧಿ ಚಿತ್ತ ಅಹಂಕಾರ ಇವುಗಳ ತಾದಾತ್ಮ್ಯ ಭಾವವುಳ್ಳುದೆಲ್ಲ ಕದಳಿಯೆ. ಕದಳಿಯೆಂಬುದು ವಿಷಯಾಕಾರ ವೃತ್ತಿ, ವಿಷಯಂಗಳು : ಅಂದರೆ ಶಬ್ದ, ಸ್ಪರ್ಶ ರೂಪ, ರಸ, ಗಂಧ ಇವುಗಳೆ ವಿಷಯ ರೂಪಿ ಕದಳಿ. ಇಂದ್ರಿಯಂಗಳ ಉಪಭೋಗಕ್ಕೆ ಪ್ರಿಯವಾದ ವಸ್ತುಗಳೆಲ್ಲ ವಿಷಯಂಗಳೆ. ಕದಳಿಯೆಂಬುದು ಘೋರಾರಣ್ಯ : ನಿರ್ಜನ ಪ್ರದೇಶ. ಅಲ್ಲಿ ಖಗಮೃಗಗಳ ನಿವಾಸ, ಪಶುಪಕ್ಷಿಗಳ ಬಿಡಾರ. ತರುಲತಾದಿಗಳಿಂದ ತುಂಬಿದ ಪ್ರಶಾಂತ ಸ್ಥಲ. ಲೌಕಿಕರಿಗೆ ಭಯಾನಕ ಸ್ಥಲ, ಅಜ್ಞಾನಂಧಃಕಾರದಿಂದುಕ್ತವಾದ ಪ್ರವೃತ್ತಿರೂಪ ವಿಷಯಂಗಳ ವಾಸನೆಯೆ ಘೋರಾರಣ್ಯ .

ಅಲ್ಲಿ ಕಾಮಾದಿ ಷಡ್ರಿಪುಗಳ ವಾಸನೆಯ ನಿವಾಸವೆ ಖಗಮೃಗಗಳ ನಿವಾಸ. ಇಂದ್ರಿಯಂಗಳ ಉಪಟಳವೆ ಪಕ್ಷಿಗಳ ಬಿಡಾರ. ಮನವು ವಿಷಯಾಸಕ್ತಿಯಿಂದುಕ್ತವಾದುದೆ ಘೋರಾರಣ್ಯ, ನಾಮರೂಪಂಗಳಲ್ಲಿ ರತಿಯುಳ್ಳದ್ದಾಗಿರುವದೆ ಘೋರಾರಣ್ಯ. ವಿಷಯದ ವ್ಯಸನಿಯಾಗಿ ಚಿಂತನವೆಂಬ ಚಿತೆಯಲ್ಲಿ ದಹದಹಿಸುವ ಮನವೆ ಘೋರಾರಣ್ಯ. ಇಲ್ಲಿ ಮನವು ವಿಷಯದ ಭೋಗಾಭಿಲಾಷೆಯಿಂದುಕ್ತವಾದ ಬಲಹೀನದ್ದಾಗಿ ಬಡವಾಗಿಹುದು. ವಿಷಯ ವಾಸನೆಯೆಂಬುದು ಬಹು ಭಯಾನಕವುಳ್ಳದ್ದು. ಇದು ಅನೇಕ ಜನ್ಮಂಗಳಿಗೆ ಗುರಿ ಮಾಡುವದು. ಅದಕ್ಕಾಗಿ ವಿಷಯದ ಭೋಗದಾಶೆ ಮಾಡುವದೆಂದರೆ ಕಾಳಕೂಟ ವಿಷಸೇವನೆ ಮಾಡಲು ಆಶೆ ಮಾಡಿದಂತೆ ; ಮೃತ್ಯುವಿಗೆ ಆಮಂತ್ರಣ ಕೊಟ್ಟಂತೆ. ವಿಷ ಸೇವನೆ ಮಾಡಿ ಮಾನವ ಮಹಾದೇವನಾಗಿರುವನೆ ? ವಿಷಯ ಭೋಗಕ್ಕೆ ಮೆಚ್ಚಿ ವಿಷಯಾಸಕ್ತಿಯಿಂದುಕ್ತರಾದವರು ಆರಾದರೂ ಮುಕ್ತರಾಗಿರುವರೆ? ಭವದಿಂದ ಬಿಡುಗಡೆಯಾಗಿಹರೆ ? ಅಮರರಾಗಿಹರೆ ?

ಕದಳಿಯೆಂಬುದು ಗೆದ್ದ ತಲೆ : ಪ್ರಪಂಚದ ಪ್ರವೃತ್ತಿಯಿಂದ ವಿಮುಖರಾಗಿ ಪರಮಾರ್ಥ ತತ್ವದಲ್ಲಿ ಪ್ರವೃತ್ತರಾದುದೆ ಗೆದ್ದ ತಲೆ, ಅಜ್ಞಾನದಿಂದ ಬಿಡುಗಡೆಯಾಗಿ ಆತ್ಮಜ್ಞಾನದ ಕಡೆ ಅಭಿಮುಖವಾದುದೆ ಗೆದ್ದ ತಲೆ, ಜ್ಞಾನಾರೂಢರಾಗಿರುವದೆ ಗೆದ್ದತಲೆ, ಲಿಂಗಾಂಗ ಸಾಮರಸ್ಯ ತತ್ವ ಅಳವಡಿಸಿಕೊಂಡಿಹುದೆ ಬದುಕಿ ಬಂದುದು. ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದ ಅಳವಟ್ಟುದೆ ಬದುಕಿ ಬಂದುದು.

ಕದಳಿಯ ಬನದಲ್ಲಿ ಭವಹರನ ಕಂಡೆನು : ಶ್ರೀಗಿರಿಯೆ ಕದಳಿಯ ಬನ, ನಿರ್ವಾಣದ ಬನ, ನಿರ್ಮಾಯನ ಬನ, ಮಲ್ಲಿಕಾರ್ಜುನ ಬನವೆ ಕದಳಿಯ ಬನ, ನಿಶ್ಚಿಂತ ನಿಲಯವೆ ಕದಳಿಯ ಬನ. ಕದಳಿಯ ಬನದಲ್ಲಿ ಭವಹರನ ಕಂಡೆನು. ಅಂದರೆ ನುಡಿಗೆಡೆಗೊಡದ ಘನ ಮಹಿಮನಲ್ಲಿ ಮನ ಮಗ್ನವಾಗಿಹುದೆ ಭವಹರನ ಕಂಡ ಚಿನ್ಹ. ಸಮಸ್ವರೂಪವಾದ ಸತ್ಯವರಿತುದೆ ಭವಹರನ ಕಂಡ ಚಿನ್ಹ. ನಿಸ್ಸೀಮ ತತ್ವವರಿತುದೆ ಭವಹರನ ಕಂಡ ಚಿನ್ಹ.

ಭವಹರನೆಂದರೆ ವ್ಯಕ್ತನು ತಾನೆ, ಅವ್ಯಕ್ತನು ತಾನೆ, ರೂಪ ತಾನೆ, ನಿರೂಪ ತಾನೆ, ಸಕಲ ತಾನೆ, ನಿಃಕಲ ತಾನೆ, ಎತ್ತನೋಡಿದಡತ್ತ ತಾನೆ, ರೂಪ ತಾನಾದಾತನೆಂಬೆನೆ ರೂಪ ತಾನಲ್ಲ, ನಿರೂಪ ತಾನಾದಾತನೆಂಬೆನೆ ನಿರೂಪ ತಾನಾದಾತನಲ್ಲ, ವ್ಯಕ್ತ ತಾನಾದಾತನೆಂಬೆನೆ ವ್ಯಕ್ತ ತಾನಾದಾತನಲ್ಲ, ಅವ್ಯಕ್ತ ತಾನಾದಾತನೆಂಬೆನೆ ಅವ್ಯಕ್ತ ತಾನಾದಾತನಲ್ಲ, ಸಕಲನಾದಾತನಲ್ಲ ನಿಃಕಲನಾದಾತನಲ್ಲ, ಏನೊಂದುಸುರಲು ಎಡೆಗೊಡದ ಘನಮಹಿಮನೆ ಭವಹರ. ಅದುವೆ ತನ್ನ ನಿಜಸ್ವರೂಪವೆಂಬುದು ಕರಿಗೊಂಡದು ಭವಹರ ತಾನಾದ ಸಂಕೇತ, ಭವಗೆಟ್ಟ ಸಂಕೇತ, ಅಲ್ಲಿ ತಾನೆಂಬುದಿಲ್ಲ ಅನ್ಯವೆಂಬುದಿಲ್ಲ, ದೃಶ್ಯವೆಂಬುದಿಲ್ಲ ದೃಕ್ ಎಂಬುದಿಲ್ಲ, ಅರಿತೆನೆಂಬುದಿಲ್ಲ ಅರಿಯೆನೆಂಬುದಿಲ್ಲ ಮತಿಗತಿಗೆ ಮೀರಿದ ನಿಲುವೆ ಭವಗೆಟ್ಟ ನಿಲುವು.

ಮಗುವೆ ಎಂದು ಕರುಣದಿಂ ತೆಗೆದು ಬಿಗಿಯಪ್ಪಿದರೆ ಚೆನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು :

ಕರುಣೆ ಅಂದರೆ ಭವ ಹರನ ಕರುಣ. ನಿರಂತರ ಸರ್ವಮಂಗಳಮಯ ದೇವನ ಕರುಣೆ, ಅಂದರೆ ತನ್ನ ಸ್ವರೂಪ ನಿರಂತರ . ತಾನೆ ಸರ್ವಂಗಳಮಯನೆಂಬ ಸ್ವರೂಪ , ಸಾಕ್ಷಾತ್ಕಾರವೆ ದೇವನ ಕರುಣೆ , ಈ ಸಾಕ್ಷಾತ್ಕಾರ ನಿಶ್ಚಲವೆ ಕರಣದಿಂ ತೆಗೆದಂತೆ . ಈ ಜ್ಞಾನರೂಢ ನಾದುದೆ ಬಿಗಿಯಪ್ಪಿದಂತೆ. ಚೆನ್ನಮಲ್ಲಿಕಾರ್ಜುನ ಹೃದಯ ಕಮಲವೆಂದರೆ ಚಿತ್ಪ್ರಕಾಶ ಹೃದಯ, ಚಿದ್ಘನ ಹೃದಯ, ಚಿದಾಕಾಶ

ಹೃದಯವಾದುದರಿಂದ ನಿರ್ಮಾಯ ಹೃದಯ. ಅಂದರೆ ಚಿತ್ಪ್ರಕಾಶ ಜ್ಞಾನ, ಚಿದಾಕಾಶ ಜ್ಞಾನ ಚಿನ್ಮಯದರಿವು ತನ್ನಿರುವು ಆಗಿ ಅಖಂಡಾನಂದ ಸುಖ ಸವೆಯುವದೆ ಚೆನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದಂತೆ ಎಂದು ಹೇಳಿದ್ದಾಳೆ.

ಮತ್ತಂ ಅಕ್ಕಗಳು ನಿಜೈಕ್ಯವನೈಯ್ದುಶಬ್ದ ಮುಗ್ದವಾದೆನೆಂದು ಭಿನ್ನೈಸುವ ವಚನ.

**88**

**ಲಿಂಗವೆನ್ನೆ, ಲಿಂಗೈಕ್ಯವೆನ್ನೆ, ಸಂಗವೆನ್ನೆ,**
**ಆಯಿತೆನ್ನೆ, ಆಗದೆನ್ನೆ, ನಾನೆನ್ನೆ, ನೀನೆನ್ನೆ**
**ಚೆನ್ನಮಲ್ಲಿಕಾರ್ಜುನ ಲಿಂಗದಲ್ಲಿ ಘನ**
**ಲಿಂಗೈಕ್ಯವಾದ ಬಳಿಕ ಮತ್ತೇನೂ ಎನಲೊಲ್ಲದೆ ಇದ್ದೆನು.**

**ತಾತ್ಪರ್ಯ :** ಅಕ್ಕನ ನಿಜೈಕ್ಯವೆಂಬುದು ಶಬ್ದ ಮುಗ್ಧನ ನಿಲುವು. ಇದು ಹೀಗೆಯೆ ಎಂದು ನಿರ್ಣಯಿಸಲು ಬಾರದ ನಿಜದ ನಿಲುವು. ಶಬ್ದದಿಂದುಸರಲು ಬಾರದ ನಿಲವು, ಭಾವನೆಗಿಂಬುಗೊಡದ ನಿಲುವು, ನೆನಹಿಗೆ ಮೀರಿದ ನಿಲುವು, ಚಿಂತನೆಗೆ ಮೀರಿದ ನಿಲುವು, ಮಾಟ ಕೂಟ ಸ್ನೇಹ ಸಂಬಂಧಾದಿಗಳಿಗೆ ಮೀರಿದ ನಿಲುವು, ಇದು ಸ್ವಯ ನಿಲುವು ತಾನೆ ತಾನಾದ ಘನ, ಮತ್ತೇನೂ ಎನಲೊಲ್ಲದ ಪ್ರಮಾಣ ನಿಲವಿನಲ್ಲಿ ಇದ್ದೆನು ಎಂದು ಹೇಳಿದ್ದಾಳೆ.

ಅದಕ್ಕಾಗಿ ಅಕ್ಕನ ದಿವ್ಯದೃಷ್ಟಿಯಲ್ಲಿ ತಾನು ಲಿಂಗವೆಂಬುದಿಲ್ಲ, ಲಿಂಗದೊಳ್ ಬೆರೆತೆನೆಂಬುದಿಲ್ಲ, ಲಿಂಗದಹಂಭಾವವಿಲ್ಲ ನಿರಂಹಂಭಾವಿಯಲ್ಲ, ಕೂಡಿದೆನೆಂಬುದಿಲ್ಲ ಅಗಲಿದೆನೆಂಬುದಿಲ್ಲ, ಆವಾವ ಸಂಗಿಯಲ್ಲ ನಿಸ್ಸಂಗಿಯಲ್ಲ, ನನ್ನ ನಾನರಿತು ನನಗೀಗ ಸ್ವರೂಪ ಸುಖವಾಯಿತೆನಲಿಲ್ಲ, ಅರಿಯದ ಮುನ್ನ ಸ್ವರೂಪದಿಂದ ಅನ್ಯನಾಗಿದ್ದೆನಲಿಲ್ಲ.

ತಾನೆ ಘನಾಂಗವಾದ್ದರಿಂದ ರೂಪ ಘನ, ಅರೂಪ ಘನ, ಗುಣ ಘನ, ಗುಣಿ ಘನ, ಅಂಗ ಘನ, ಅನಂಗ ಘನ, ನಾಮ ಘನ, ಅನಾಮ ಘನ, ಸಾಕಾರ ಘನ, ನಿರಾಕಾರ ಘನ, ನೋಟ ಘನ, ಮಾಟ ಘನ, ಭಾವ ಘನ, ಅಭಾವ ಘನ, ಮರವು ಘನ, ಅರುವು ಘನ, ಸಕಲವು ಘನ ಲಿಂಗವೆಂಬ ಭರಿತ ಭಾವ ಅಳವಟ್ಟ ಮೇಲೆ ಲಿಂಗವೆಂಬುದಿಲ್ಲ ಲಿಂಗೈಕ್ಯವೆಂಬುದಿಲ್ಲ, ಅರುಸ್ವರೂಪವೆಂಬುದಿಲ್ಲ, ಅರುವರಿತು ಅರುವಿನೊಳ್ಳೈಕ್ಯನೆಂಬುದಿಲ್ಲ, ಸಂಗಿಯಲ್ಲ ನಿಸ್ಸಂಗಿಯಲ್ಲ, ಸಂಗಿಯನಲಿಲ್ಲ ಸಮರಸಯೆನಲಿಲ್ಲ , ನಿಸ್ಸಂಗಿಯೆಂಬುದಿಲ್ಲ , ಸಾಕ್ಷಾತ್ಕಾರ ಆಯಿತೆಂಬುದಿಲ್ಲ ಆಗಿಲ್ಲವೆಂಬುದಿಲ್ಲ, ನಾನೆಂಬುದಿಲ್ಲ ನೀನೆಂಬುದಿಲ್ಲ , ಚೆನ್ನಮಲ್ಲಿಕಾರ್ಜುನ ಲಿಂಗದಲ್ಲಿ ಘನಲಿಂಗೈಕ್ಯವಾದ ಬಳಿಕ ಅಂದು ಇದ್ದುದೊಂದೆ ನಿರಂತರವಾಗಿರುವ ಸರ್ವಮಂಗಳಮಯ ತತ್ವವಾಗಿರುವಲ್ಲಿ ಅಲ್ಲಿ ಅನ್ಯವಿರಲಿಂಬಿಲ್ಲವಾದುದರಿಂದ ಅಂಗನೆಂಬುದು ಕೂಡಾ ನಿರಂತರವಾಗಿರುವ ಮಂಗಳಮಯ ಜ್ಯೋತಿ ಎಂಬ ಅರುವಿಗೂ ಮೀರಿದ ತನ್ನಿರವು ವಾದ್ದರಿಂದ ನಾಮವೆಂಬುದಿಲ್ಲ ಅನಾಮವೆಂಬುದಿಲ್ಲ, ಅಹಂವೆಂಬುದಿಲ್ಲ ಇದಂ ಎಂಬುದಿಲ್ಲ, ಈ ಉಭಯ ನಾಮವಾದ ಸೀಮೆಯೊಳಗೆಂಬುದಿಲ್ಲ ಪ್ರಕೃತಿ ಎಂಬುದಿಲ್ಲ ಪುರುಷನೆಂಬುದಿಲ್ಲ, ಏನೆಂಬುದೇನು ಮುನ್ನಿಲ್ಲವೆಂಬುದಿಲ್ಲವಾದ್ದರಿಂದ ಏನೇನೂ ಅರಸಲಿಲ್ಲದೆ ಇದ್ದೆನು ಎಂದು ಹೇಳಿದ್ದಾಳೆ.

ಇಂತು ಮಹಾದೇವಿಯಕ್ಕಗಳ ಚೆನ್ನಮಲ್ಲಿಕಾರ್ಜುನನು ಹೃತ್ಕಮಲದಲ್ಲಿ ವಾರಿಕಲ್ಲು ವಾರಿಯ

ಬೆರದಂತೆ, ಉಪ್ಪಿನ ಪಟ್ಟಣವ ಉದಕದಲ್ಲಿ ಬೈಚಿಟ್ಟಂತೆ, ಕ್ಷೀರ ಕ್ಷೀರ ಬೆರೆದಂತೆ ಅಡಗಿಸಿಕೊಂಡು ನಿರವಯವಾಗಲು ಇತ್ತ ಕಲ್ಯಾಣದೊಳಗೆ ಚನ್ನಬಸವರಾಜ ದೇವರು ಬಸವಾದಿ ಪ್ರಮಥರ ಮಧ್ಯದಲ್ಲಿ ಕಂಡು ಅಕ್ಕಗಳು ಪ್ರಭುದೇವರೊಳಗೆ ನಿರವಯಳಾದಳೆಂದು ಆ ಅಕ್ಕಗಳ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ.

**89**

**ತನುವಿನೊಳಗಿದ್ದು ತನುವ ಗೆದ್ದಳು, ಮನದೊಳಗಿದ್ದು ಮನವ ಗೆದ್ದಳು.**
**ವಿಷಯದೊಳಗಿದ್ದು ವಿಷಯಂಗಳ ಗೆದ್ದಳು, ಅಂಗ ಸಂಗವ**
**ತೊರೆದು ಭವವ ಗೆದ್ದಳು. ಕೂಡಲ ಚೆನ್ನಸಂಗಯ್ಯನ ಹೃದಯ ಕಮಲವ**
**ಬಗಿದು ಹೊಕ್ಕು ನಿಜಪದವ ನೆಯ್ದಿದ ಮಹಾದೇವಿಯಕ್ಕನ**
**ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು.**

**ತಾತ್ಪರ್ಯ :** ಷಟ್‌ಸ್ಥಲ ಚಕ್ರವರ್ತಿಯಾದ ಚನ್ನಬಸವರಾಜದೇವರು ನಿಜ ಪದವ ನೆಯ್ದಿದ ಅಕ್ಕ ಶ್ರೀಪಾದಕ್ಕೆ ನಮೋ ನಮೋ ಎಂದು ನಿಜೈಕ್ಯದ ನಿಲುವ ಕೊಂಡಾಡಿದ್ದಾರೆ. ಅಕ್ಕನ ಶ್ರೀಪಾದವೆಂಬುದು ನಿಜಪದನೆಯ್ದ ಚಿದ್ಘನ ಪದ, ಚಿನ್ಮಯಪದ, ತತ್ ಸ್ವರೂಪವೆ ತಾನಾದ ಅಗಮ್ಯ ಪದ, ಅಚಿಂತ್ಯ ಪದ, ಅವರ್ಣೀಯಪದ ಇದನೆಂತುಪಮಿಸುವುದು, ಶರಣರ ನಿಜವ ನೆಯ್ದ ನಿಲವ ಉಪಮಿಸಬಾರದು ಉಪಮಿಸಬಾರದು. ಅಹಮಿಲ್ಲದ ತೂಷ್ಣೀನಿಲಯ ತೃಪ್ತರೂಪ ತೃಪ್ತಾತ್ಮ ನಿಲಯ, ಪ್ರಶಾಂತಾತ್ಮ ನಿಲಯ, ಅಚಿಂತ್ಯ ಸುಖದ ನಿಲಯ, ಮನ ಮೇರೆದಪ್ಪಿದ ನಿಲಯ. ಅಲ್ಲಿ ಆವಾವ ಅಹಂಭಾವಕ್ಕಿಂಬುಗೊಡದ ನಿಲಯವಾದುದರಿಂದ ಶರಣರ ದಿವ್ಯ ಸಂದರ್ಶನ ಲೋಕಹಿತದ ಸಂದರ್ಶನ. ಇದುವೆ ಕಲ್ಯಾಣದ ಬೆಳಗು, ಇದುವೆ ಕಲ್ಯಾಣವೆಂಬ ಕೇವಲ ಸುಖದ ಸುಖ, ಅರುವಿನ ಅರುವು, ಅದಕ್ಕಾಗಿ ಶರಣರ ಕೂಟ, ನಿರ್ಮಾಯ ಕೂಟ, ನಿರಾಳ ಕೂಟ, ನಿರಾಭಾರಿ ಕೂಟವಾಗಿಹುದು ಇದು ಕಾರಣ ಅಕ್ಕನನ್ನು ಈ ರೀತಿಯಾಗಿ ಸ್ತುತಿಸಿದ್ದಾರೆ.

ಈ ಮಹಾಶಕ್ತಿ ತನುವಿನೊಳಗಿದ್ದವಳೆಂಬುದಷ್ಟೆತನು ತಾನಾದವಳಲ್ಲ, ತನುಭಾವದವಳಲ್ಲ, ತನುವಿನ ಕಲ್ಪನೆಯುಳ್ಳವಳಲ್ಲ, ತನುವಿನ ದೃಷ್ಟಿಯುಳ್ಳವಳಲ್ಲ, ತನುವಿನೊಳಗಿದ್ದವನ ದೃಷ್ಟಿಯುಳ್ಳವಳಲ್ಲ, ತನುವಿನೊಳಗಿದ್ದವನ ತನುವುಳ್ಳವಳು. ಅಕ್ಕನ ತನು ತನುವಿನೊಳಗಿದ್ದವನ ತನು. ಆದುದರಿಂದ ನಿರ್ಮಾಯನ ತನು, ತೋರದಡಗದವನ ತನು, ನಿರ್ವಿಕಾರ ತನುವಾದುದರಿಂದ ಈ ತನುವಿನೊಳಗಿದ್ದ ಅಕ್ಕನ ಘನವನೇನೆಂಬೆ ! ತನುವಿನೊಳಗಿದ್ದು ತನುವ ಗೆದ್ದಳು. ಅಕ್ಕನ ತನುವೆಂಬುದು ಲೋಕದ ತನುವಿನಂತಿದ್ದರೂ ಲೋಕದ ತನುವಲ್ಲ, ಜಡತನುವಾಗಿ ಕಂಡರೂ ಅಜಡವಾಗಿಪ್ಪುದು ದೃಶ್ಯವಾಗಿ ಕಂಡರೂ ಅದೃಶ್ಯವಾಗಿಪ್ಪುದು, ಮಲಮಯವಾಗಿ ಕಂಡರೂ ಮಂತ್ರವಾಗಿಪ್ಪುದು, ದೇಹವಾಗಿ ಕಂಡರೂ ನಿರ್ದೇಹವಾಗಿಪ್ಪುದು ಮಾಯಿಕ ತನುವಾಗಿ ಕಂಡರೂ ನಿರ್ಮಾಯವಾಗಿಪ್ಪುದು ನಿರ್ಮಾಯ ತನುವಾದ್ದರಿಂದ ಸಮಸ್ವರೂಪದ ತನು. ಸಮಸ್ವರೂಪದ ತನು ಉಪಮೆಗೆ ತರಬಾರದು. ಇಲ್ಲಿ ಸತ್ ಇದು , ಅಸತ್ ಇದು, ಚಿತ್ ಇದು, ಅಚಿತ್ ಇದು, ಎಂಬ ವಿಭಾಕ್ಕೆಡೆಗೊಡದ ಪರಾತ್ಪರ ಪರತತ್ವ ಉಪಮೆಗೆ ಅಳವಲ್ಲ ನೋಡಾ. ಇದು ವಾರಿಕಲ್ಲು ವಾರಿ ಬೆರತಂತೆ ಅಂದರೆ ಆಣೆಕಲ್ಲು ನೀರೆ, ನೀರು ನೀರೆ, ನೀರೋಳ್ ನೀರು ಬೆರೆತಂತೆ ಅಕ್ಕನ ನಿಜೈಕ್ಯ ನಿಲವು. ಶಬ್ದ ಮುಗ್ಧ ನಿಲುವು.

ಅಂತಿಂತೆನಬಾರದ್ದರಿಂದ ಅಕ್ಕನ ತನು ನಿರ್ದೇಹ ತನುವಾದ್ದರಿಂದ ತನುವಿನೊಳಗಿದ್ದು ತನುವ ಗೆದ್ದಳು.ಮನದೊಳಗಿದ್ದು ಮನವ ಗೆದ್ದಳು.ಅಕ್ಕ ಲೋಕದೃಷ್ಟಿಗೆ ಮನದೊಳಗಿದ್ದವಳಂತೆ ಕಂಡರೂ ಮನ ತಾನಾದವಳಲ್ಲ, ಸಂಕಲ್ಪ ವಿಕಲ್ಪಕ್ಕೊಳಪಟ್ಟವಳಲ್ಲ. ಅವುಗಳ ಸಂಬಂಧಿಯಲ್ಲ ಸಂಗಿಯಲ್ಲ, ಮೋಹಿಯಲ್ಲ ನಿರ್ಮೋಹಿಯಲ್ಲ , ಅಕ್ಕನ ಮನ ಏನೊಂದಾಗದ ಮನ, ಭಾವಕ್ಕಿಂಬುಕೊಡದ ಮನ ಕಲ್ಪಿತನಿಗಿಂಬುಕೊಡದ ಮನ, ಸಮ್ಯಕ ಮನ, ಅಲ್ಲಿ ಭೇದವೂ ಇಲ್ಲ ಅಭೇದವೂ ಇಲ್ಲವಾದ್ದರಿಂದ ನಿರ್ವಿಕಲ್ಪ ಮನ, ಅಚಿಂತ್ಯ ಮನ, ಇದುವೆ ಅಕ್ಕನ ನಿಷ್ಕಳಂಕ ಮನ, ಈ ಅಕಳಂಕ ಮನದವಳಾದ್ದರಿಂದ ವಿಷಮತೆ ಇಲ್ಲದವಳು, ದ್ವಿಪದ ಕಾಣದವಳು ಸಂಗಾಸಂಗ ಕಾಣದವಳು, ಶೋಕಾಶೋಕ ಕಾಣದವಳು, ಅವಸ್ಥೆಗಳಿಂದ ಅತೀತಳು, ಅರ್ಚನೆ ಅನುಸಂದಾನ ಕಾಣದವಳು, ನಿಶ್ಚಲಳು ನಿಜೈಕ್ಯಳು.

ಈ ಮಹಾಂತಳಿಗೆ ಸ್ಥಾವರವಷ್ಟೆ ಜಂಗಮವಷ್ಟೆ , ಅಳಿದುದಷ್ಟೆ ಉಳಿದುದಷ್ಟೆ, ನಿರಂತರವಾಗಿರುವ ಸರ್ವಮಂಗಳಮಯ ಘನ ಲಿಂಗ ಒಂದೇ ಸಿದ್ಧವಾದ್ದರಿಂದ ಅದ್ವಿತೀಯಳು. ಮನವು ಅದುವೆ ಆದುದರಿಂದ ಮನದೊಳಗಿದ್ದು ಮನವ ಗೆದ್ದಳು. ಇದು ಕ್ಷೀರದೊಳ್ ಕ್ಷೀರ ಬೆರತಂತೆ ನೋಡಾ, ಇದನಾರು ಉಪಮಿಸುವದು. ವಿಷಯದೊಳಗಿದ್ದು ವಿಷಯಂಗಳ ಗೆದ್ದಳು. ಅಕ್ಕ ನಿರ್ವಿಷಯದ ವಿಷಯದವಳು ಆದುದರಿಂದ ವಿಷಯದೊಳಗಿದ್ದು ವಿಷಯಂಗಳ ಗೆದ್ದಳು. ಅಂದರೆ ಮಾಯಿಕ ತತ್ವವಾದ ನಾಮರೂಪ, ಗುಣಕರ್ಮಂಗಳಿಗೆ ಮಹತ್ವ ಕೊಡದೆ ಸದಾಸರ್ವತ್ರ ಒಳಹೊರಗೆನ್ನದೆ ಸರ್ವವ್ಯಾಪಿಯಾದುದು ಆವುದೋ ಅದುವೆ ನಿರ್ವಿಕಲ್ಪ ಘನವು. ಅದುವೆ ಅಕಲ್ಪಿತವು ಅದು ಕಲ್ಪನೆಗೆ ಮೀರಿದುದರಿಂದ ಅದು ನಿರ್ವಿಷಯವು, ನಿರ್ವಿಷಯವೆಂಬುದು ಅಚಿಂತ್ಯ ಘನವು, ಅಕ್ಕ ಇಂಥ ಅಚಿಂತ್ಯ ಘನಸುಖ ಪಡೆದವಳಾದುದರಿಂದ ಶಬ್ದಾಭಿಮಾನಿಯಾಗಲಿಲ್ಲ. ರಸನೇಂದ್ರಿ ರುಚಿಯ ಭೋಜನ ಪ್ರೇಮಿಯಾಗಲಿಲ್ಲ ವಾಸನಾ ಪ್ರೇಮಿಯಾಗಲಿಲ್ಲ, ಅಂದರೆ ತಾನು ಹೆಂಗೂಸು ಎಂಬ ಭಾವಕ್ಕಿಂಬುಕೊಡಲಿಲ್ಲ, ತನ್ನ ಉದಮದದ ಯೌವನಾವಸ್ತೆಗೆ ಮಹತ್ವ ಕೊಡಲಿಲ್ಲ, ಇಹಲೋಕ ಪ್ರೇಮಿಯಾಗಲಿಲ್ಲ ಪರಲೋಕ ಪ್ರೇಮಿಯಾಗಲಿಲ್ಲ, ಈರೇಳು ಲೋಕಂಗಳ ಸತ್ಯತ್ವ ಭಾವನೆ ಮಾಡಲಿಲ್ಲ, ಕಾಯ ಲಜ್ಜೆ ಮನ ಲಜ್ಜೆ, ಭಾವ ಲಜ್ಜೆ, ನೆನಹು ಲಜ್ಜೆಗಳನ್ನೆಲ್ಲ ತಿರಸ್ಕರಿಸಿದ್ದಳು. ಆವಾವ ಲಜ್ಜೆಗೂ ಇಂಬುಕೊಡದ್ದರಿಂದ ದೇಹವಾಸನೆ ಲೋಕವಾಸನೆ ಶಾಸ್ತ್ರವಾಸನೆ ಈ ವಾಸನೆ ತ್ರಯಗಳು ಕ್ಷಯವಾಗಿದ್ದರಿಂದ ನಿರ್ವಿಷಯವಾದ ಶಬ್ದಮುಗ್ಧನ ಸುಖದೊಳಿಪ್ಪಗಮ್ಯಳಾದ್ದರಿಂದ ವಿಷಯಂಗಳ ಗೆದ್ದಳು.

ಅಂಗಸಂಗವೆಂಬುದು ಅಧೋದೃಷ್ಟಿ, ಅದು ದೇಹ ಬುದ್ದಿ, ಕಾಯ ಇದು ಅಜ್ಞಾನ ಮರವು, ಮಹಾದೇವಿಯಕ್ಕನು ಊರ್ಧ್ವದೃಷ್ಟಿಯುಳ್ಳವಳು, ದಿವ್ಯದೃಷ್ಟಿಯುಳ್ಳವಳು, ನಿಷ್ಪತ್ತಿಯ ನಿಲವುಳ್ಳವಳಾದುದರಿಂದ ಅಂಗನೆಂಬುದು ಮುಕ್ತಾಯ ಲಿಂಗನೆಂಬುದು ಮುಕ್ತಾಯ, ಅಂಗನೆನ್ನೆ ಎಂಬುದು ಮುಕ್ತಾಯ, ಲಿಂಗನೆನ್ನೆ ಎಂಬುದು ಮುಕ್ತಾಯ, ಲಿಂಗೈಕ್ಯನೆಂಬುದು ಮುಕ್ತಾಯ.

ಸಂಗ ಸಮರಸವೆಂಬುದು ಮುಕ್ತಾಯ ನಿಸ್ಸಂಗ ನಿರಂಗನೆಂಬುದು ಮುಕ್ತಾಯ. ಅಲ್ಲಿನನ್ನ ನಾನರಿತು ನಾನು ನಾನಾದೆನೆಂಬುದು ಮುಕ್ತಾಯವಾದುದರಿಂದ ಅಂಗ ಸಂಗಮಂತೊರೆದು ಭವಗೆದ್ದಳು ಎಂದು ಹೇಳಿದ್ದಾಳೆ.

ಕೂಡಲ ಚೆನ್ನಸಂಗಯ್ಯನ ಹೃದಯ ಕಮಲವ ಬಗಿದು ನಿಜಪದನೆಯ್ದಿದ ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು. ಅಂದರೆ ಕೂಡಲ ಚೆನ್ನ ಸಂಗಯ್ಯನೆಂಬುದು ಸರ್ವಮಂಗಳಮಯವಾದ ನಿರಂತರ ಬೆಳಗು, ಮಹಾ ಬೆಳಗು, ಹೃದಯ

ಕಮಲವೆಂದರೆ ಸರ್ವಮಂಗಳಮಯ ನಿರಂತರ ಬೆಳಗೆಂಬುದೇ ಅರಿವಿನ ಪಿಂಡ , ಜ್ಞಾನಪಿಂಡ, ಲಕ್ಷಣ ಪಿಂಡ, ಇದುವೆ ಹೃದಯ ಕಮಲ ನಿರಂತರವಾಗಿರುವ ಸರ್ವಮಂಗಳಮಯ ಪರತತ್ವ ಇದ್ದಕ್ಕಿದ್ದಂತೆ ತಿಳಿದುದೆ ಹೃದಯ ಕಮಲವ ಬಗಿದು ಒಳಹೊಕ್ಕಂತೆ . ಅಂದರೆ ಅಲ್ಲಿನಾನು ಅರಿತೆ ಅರಿಯೆನೆಂಬುದು ನಷ್ಟವಾಗಿ ಆ ಘನಕ್ಕೆ ಘನವಾದ ಸುಖವ ಏನೇನೂ ಅರಸಲು ಬಾರದಂತಾದುದೆ ನಿಜಪದವನೆಯ್ದ ಮಹಾದೇವಿಯಕ್ಕನ ಶ್ರೀಪಾದ ಸುಖದ ಪಾದ ಪರಮಾನಂದದ ಪಾದ ತಾನೆ ತಾನಾದ ಪಾದಕ್ಕೆ ನಮೋ ನಮೋ ಎನುತಿರ್ದೆನು ಎಂದು ಕೊಂಡಾಡಿದ್ದಾರೆ.

ಆ ಸಮಯದಲ್ಲಿ ಮಡಿವಾಳ ತಂದೆಗಳು ಮಹಾದೇವಿಯಕ್ಕಗಳಿಗೆ ಉರಿಯುಂಡ ಕರ್ಪುರ ಸಂಯೋಗವಾಯಿತ್ತು ಎಂದು ಸ್ತುತಿಸಿದ ವಚನ.

**90**

**ಕಂಗಳ ನೋಟ ಕರಸ್ಥಲದ ಪ್ರಾಣ ಅಂಗವಿಕಾರ**
**ನಿರ್ವಿಕಾರವಾಯಿತ್ತು. ಸಂಗ ಸುಖ ನಿಸ್ಸಂಗವಾಯಿತ್ತು.**
**ಹೆಂಗೂಸೆಂಬ ಭಾವ ಬಯಲ ಬೆರೆಸಿತ್ತು.**
**ಕಲಿದೇವರ ದೇವ ನಿಮ್ಮ ನೊಲಿಸಿ ಒಚ್ಚತವೋದ**
**ಮಹಾದೇವಿಯಕ್ಕನ ಪಾದವ ನೆನೆದು ಬದುಕಿದೆನು.**

**ತಾತ್ಪರ್ಯ** : ಕಂಗಳ ನೋಟವೆಂಬುದು ಕರಸ್ಥಲದ ಪ್ರಾಣ. ಕರಸ್ಥಲದ ಪ್ರಾಣವೆಂಬುದು ಲಿಂಗ ಪ್ರಾಣ, ಲಿಂಗಪ್ರಾಣವೆಂಬುದು ಪ್ರಾಣಲಿಂಗ. ಈ ಪ್ರಾಣಲಿಂಗ ನೋಟವೆ ಕಂಗಳ ನೋಟ, ಈ ನೋಟ ಜ್ಞಾನನೋಟ, ಅರುವಿನ ನೋಟ, ಅರುವೆ ತಾನಾಗಿ ನೋಡುವ ನೋಟ, ಏನನ್ನು ನೋಡದ ನೋಟ, ತನ್ನ ನೋಟ, ಅಂದರೆ ಲಿಂಗ ನೋಟ ಕಂಗಳೆಂದರೆ ಲಿಂಗ ಲಿಂಗವಾಗಿ ಲಿಂಗ ನೋಡುವ ನೋಟವಾದ್ದರಿಂದ ನೋಡದ ನೋಟ ಈ ನೋಟದ ಕೂಟವೆ ಲಿಂಗಕೂಟ. ಈ ಕೂಟವೆ ಕರಸ್ಥಲ ಇಷ್ಟಲಿಂಗ ಈ ಇಷ್ಟಲಿಂಗಾನುಸಂದಾನವೆ ಮೌನಮುದ್ರೆಯ ಅನುಸಂದಾನ? ಇದುವೆ ನಿರ್ವಾಣ ನಿಲಯ ನಿಷ್ಪತ್ತಿ ನಿಲಯವಾದ್ದರಿಂದ ಬಹಿರ ದೃಷ್ಟಿಗಿಂಬಿಲ್ಲವಾದ್ದರಿಂದ ಬಹಿರ್ ಇಂದ್ರಿಯಗಳಿಲ್ಲ ಅಂತರ್ ಇಂದ್ರಿಯಗಳಿಲ್ಲ. ಒಡಲಿಲ್ಲವಾದ್ದರಿಂದ ಪ್ರಮಾತೃ ಪ್ರಮಾಣ ಪ್ರಮೇಯವೆಂಬ ತ್ರಿಪುಟಿಗಿಂಬಿಲ್ಲ. ಅಲ್ಲಿಪ್ರಮಾದ ಮುನ್ನಿಲ್ಲ, ಏಕೆಂದರೆ ನೋಟವೆ ಗುರುರೂಪಾಗಿ ಮನಲಿಂಗ ಕೂಟವಾಗಿ ಭಾವ ಮೇರೆದಪ್ಪಿದವನ ಸುಖದ ಸುಖಿಯಾಗಿರುವಾಗ ಅಲ್ಲಿಅಂಗವಾವುದು ಅಂಗ ವಿಕಾರವಾವುದು ? ನಿರ್ವಿಕಾರ ನಿಲಯ ನಿರಾತಂಕ ಬೆಳಗುಳ್ಳ ಬೆಳಗಿನ ನಿಲಯವಾದುದರಿಂದ ಸಂಗ ಸುಖವೆಂಬುದು ನಿಸ್ಸಂಗವಾಯಿತ್ತು .

ಆವಾವ ಭಾವ, ಭರಿತ ಭಾವವಾಯಿತ್ತು . ಕಲಿದೇವರ ದೇವಾ ನಿಮ್ಮನೊಲಿಸಿ ಪ್ರಸನ್ನವಾದ ಮಹಾದೇವಿಯಕ್ಕನ ಪಾದವ ನೆನೆದು ನಾನು ಬದುಕಿದೆನು. ಅಂದರೆ ಕಲಿದೇವರ ದೇವನೆಂಬುದು ಅಚೈತನ್ಯವೆಂಬುದಕ್ಕೂ ಮೀರಿದ ನಿಲಯವು. ಈ ನಿಲಯವೆ ನಿಜನಿಲಯವು. ಸಕಲರ ನಿಲವು, ಸಕಲರ ಸ್ವಸ್ವರೂಪವೆಂದು ತನ್ನಿಂದ ತನ್ನ ಸ್ವರೂಪ ತನಗದು ವೇದ್ಯವಾದುದೆ ಕಲಿದೇವನ ಒಲಿಸಿ ಪ್ರಸನ್ನವಾದ ಪರಮಾನಂದ. ಅದುವೆ ಮಹಾದೇವಿಯಕ್ಕ ಈ ಮಹಾತಾಯಿ ಒಲಿಸಿಕೊಂಡಿರುವ ಸ್ವರೂಪ ತಾನೆ ತಾನಾದ ಸ್ವರೂಪವೆಂದು ಬದುಕಿದೆನು. ಅಂದರೆ ನಾನು ಅದೆ ಸುಖದ

ಸುಖಿಯಾಗಿರುವುದರಿಂದ ನಿರ್ವಾಣನಾಗಿಹೆನೆಂಬುದೆ ಬದುಕಿದೆನು ಎಂದು ಮಡಿವಾಳಯ್ಯ ತಂದೆ ಹೇಳಿದ್ದಾರೆ.

**- ಮಂಗಲಂ -**

# ವಚನಾನುಕ್ರಮಣಿಕೆ

ಪರಮ ಪೂಜ್ಯ ಸದ್ಗುರು ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡು
ತಾ॥ಲಿಂಗಸೂಗೂರು ಜಿ॥ರಾಯಚೂರು
ಅವರ ಕೃತಿಗಳು

| | | | |
|---|---|---|---|
| 1. | ನಿಃಶಬ್ದ ಕೃಪೆ | - | ಪ್ರಕಟಣೆ 1986 |
| 2. | ನಾನು ನನ್ನ ಕಂಡ ಕಣ್ಣು | - | ಪ್ರಕಟಣೆ 1987 |
| 3. | ಗಗನ ಸಿದ್ಧಾಂತ | - | ಪ್ರಕಟಣೆ 2006 |
| 4. | ತೆರೆಹಿಲ್ಲದಭವ ನುಡಿಗೆಡೆಗೊಡನು | - | ಪ್ರಕಟಣೆ 2011 |
| 5. | ಗಗನ ಸಿದ್ಧಾಂತ (ಸಮಗ್ರ) | - | ಪ್ರಕಟಣೆ 2015 |
| 6. | ಗುರು ಕನ್ಯೆ | - | ಪ್ರಕಟಣೆ 2017 |
| 7. | ಕರುಣಾ ಜಲ | - | |
| 8. | ಅಕಾಯ ಭಕ್ತ | - | |
| 9. | ಅಂತರಾತ್ಮ ಬೋಧೆ | - | |
| 10. | ಗುರು ಕಾರುಣ್ಯ | - | |
| 11. | ಉಪದೇಶಾಮೃತ | - | |
| 12. | ತೆರಹಿಲ್ಲ ತೆರಹಿಲ್ಲ | - | |
| 13. | ನಿಶಬ್ದ ವೇದಿ | - | |
| 14. | ಎರಡು ಒಂದರ ಯೋಗ | - | |
| 15. | ಮೂರೊಂದರ ಸಮರಸ | - | |
| 16. | ಘಟ್ಟಿವಾಳಯ್ಯನ ಸಂಪಾದನೆ | - | |
| 18. | ಅರಿತ ಕಿರಣ | - | |
| 19. | ನಿಜ ನಿಕ್ಷೇಪ | - | |
| 20. | ಉತ್ತರ ಸಿದ್ಧಾಂತ | - | |

ಶಿಷ್ಯೋತ್ತಮರಿಗಾಗಿ ಬರೆದುಕೊಟ್ಟ ಬೆಳಕಿಗೆ ಬಾರದ ಅಪ್ರಕಟಿತ ಗ್ರಂಥಗಳು ಸಾಕಷ್ಟಿವೆ.

ಡಬ್ಬೇರುಮಡುವು ಗ್ರಾಮದ ಪರಮಪೂಜ್ಯ ಸದ್ಗುರು ವಿದ್ಯಾನಂದ ಶರಣರು ಪ್ರಭುದೇವರ "ಶೂನ್ಯ ಸಂಪಾದನೆ"ಯ ಮಹಾದೇವಿ ಅಕ್ಕನ ಸಂವಾದದ ತೊಂಬತ್ತು ವಚನಗಳನ್ನು ತೆಗೆದುಕೊಂಡು ತಾತ್ಪರ್ಯ ಬರೆದಿದ್ದಾರೆ. ಈ ಗ್ರಂಥಕ್ಕೆ ಗುರುಕನ್ಯೆ ಎಂದು ನಾಮಕರಣ ಮಾಡಿದ್ದಾರೆ.

ಸ್ವರೂಪ ಜ್ಞಾನಕ್ಕಾಗಿ ಹಂಬಲಿಸಿದ ಓದುಗರಿಗೆ ಇದೊಂದು ಪುಸ್ತಕ ಸಾಕು. ಇದರಲ್ಲಿಯ ಒಂದು ವಚನದ ತಾತ್ಪರ್ಯ ಸಾಕು. ಆ ಓದುಗನ ಬಯಕೆ ಉತ್ಕಟ ಇಚ್ಛೆಯಿಂದ ಕೂಡಿದ್ದರೆ, ಕಾಲಕೂಡಿ ತನುಮಾಗಿ ಜ್ಞಾನದ ಬಯಕೆ ಉತ್ಕಟವಾಗಿದ್ದರೆ ಸಾಕು ಆ ಓದುಗನಿಗೆ Enlightenment ಆಗುವುದರಲ್ಲಿ ಸಂಶಯವೇ ಇಲ್ಲ.

ಸದ್ಗುರುಗಳು ವಚನಗಳಿಗೆ ವ್ಯಾಖ್ಯಾನಿಸುವ ಈ ಸಂದರ್ಭದಲ್ಲಿ ಶರಣರ ಕಾಯದಲ್ಲಿ ಹೊಕ್ಕು ಅವರೇ ಇವರಾಗಿ ಬರೆದಂತಿದೆ. ಈ ಪುಸ್ತಕಕ್ಕೆ ಕೊಟ್ಟ "ಗುರುಕನ್ಯೆ" ಎಂಬ ಚಮತ್ಕಾರದ ಹೆಸರು ಸಾಧಕರನ್ನು ಬೆರಗುಗೊಳಿಸುವಂತಿದೆ.

ಗುರುಕನ್ಯೆಯೆಂದರೆ ಅಕ್ಕಮಹಾದೇವಿ. ಗುರುವಿಗಾಗಿ ಕಾಯ್ದುಕುಳಿತ ಸಕಲ ಓದುಗರೂ ಆಗುತ್ತಾರೆ. ಓದಲು ಬರೆಯಲು ಬಾರದೆ ಇದ್ದವರು. ಅಷ್ಟೇ ಏಕೆ ಈ ಜಗದ ಸಕಲ ದೇಹಗಳು ಕೂಡಾ ಗುರು ಕನ್ಯೆಯೇ ಆಗಿವೆ.

ಪ್ರತಿ ದೇಹದಲ್ಲಿಯೂ ಅರಿವಿದೆ. ಆ ಅರಿವೆಂಬ ಗುರುದೇವನೂ ಇದ್ದಾನೆ. ಹಾಗೆಯೇ ಪ್ರತಿ ದೇಹದಲ್ಲಿಯೂ ಮನವಿದೆ. ಮನ ದೇಹವನ್ನು ಆವರಿಸಿದೆ.

ಅರಿವೇ ಗುರು; ಮನವೇ ಕನ್ಯೆ. ಒಂದಕ್ಕೊಂದು ಸಂಬಂಧವಿಲ್ಲದಂತೆ ತನುವಿನಲ್ಲಿಯೇ ಸಂಗಮಗೊಂಡಿವೆ.

ಇಡೀ ದೇಹವನ್ನು ತನ್ನಿಚ್ಛೆಯಂತೆ ಮುಗ್ಗಲು ಮಾಡಿ ಬಾಧೆ ಗೀಡು ಮಾಡುವ ಮನಕ್ಕೆ ಅರಿವೆಂಬ ಗುರುದೇವನ ಬಯಕೆಯಾದರೆ ಸಾಕು ಅರಿವೆಂಬ ಗುರುದೇವನನ್ನು ವರಿಸಿ ಗುರುಕನ್ಯೆಯಾಗುತ್ತಾಳೆ. ಇಂತಹ ಅಪರೂಪದ ರಹಸ್ಯಮಯವಾದ ಗುಟ್ಟು ಓದುಗನಿಗೆ ತಿಳಿದರೆ ಸಾಕು; ಓದುಗನ ಮನ ಕನ್ಯೆಯಾಗಿ ಗುರುದೇವನ ಬೆನ್ನು ಬೀಳುತ್ತದೆ. ಅರಿವಿನ ಬಯಕೆಯಾಗಿ ಆ ಗುರುದೇವನನ್ನು ತೋರಿಸುವ ಗುರುವನ್ನು ಹುಡುಕುತ್ತಾ ಅಲೆಮಾರಿಯಾಗಿ ಅಲೆದಾಡುತ್ತದೆ. ಅರಿವೆಂಬ ಗುರುದೇವನನ್ನು ತನುವಿನಲ್ಲಿಯೇ ದರ್ಶನ ಮಾಡಿಸುವ ಗುರುದೇವ ಸಿಕ್ಕರೆ ಸಾಕು ಮನ ಆ ಗುರುವಿಗೆ ಕನ್ಯೆಯಾಗಿ ಕುಣಿಕುಣಿದಾಡುತ್ತದೆ. ನಲಿನಲಿದಾಡುತ್ತದೆ.

ಬಸವರಾಜ ಸ್ವಾಮಿ